

ಗೋವಾ ವಿಮೋಚನಾ ಸತ್ಯಾಗ್ರಹಿಗಳೊಂದಿಗೆ

ಸ್ವಾತಂತ್ರ್ಯ ಸೇನಾನಿಯಾಗಿ, ರೈತ ಹೋರಾಟಗಾರರಾಗಿ, ಕಾರ್ಮಿಕ ನಾಯಕರಾಗಿ, ಭಾರತದ ಪ್ರಥಮ ಸಂಸತ್ತಿನ ಸದಸ್ಯರಾಗಿ, ಶಾಸಕರಾಗಿ, ಕಮ್ಯುನಿಸ್ಟ್ ಚಳುವಳಿಯ ಧುರೀಣರಾಗಿ, ಕರ್ನಾಟಕ ಏಕೀಕರಣ, ಗೋವಾ ವಿಮೋಚನಾ ಚಳುವಳಿಯ ನಾಯಕರಾಗಿ, ಲೇಖಕ, ಸಿದ್ಧಾಂತಿಯಾಗಿ, ಬಹುಮುಖ ಪ್ರತಿಭೆಯ ವ್ಯಕ್ತಿಯಾಗಿ ಬದ್ಧತೆಯಿಂದ ಬದುಕಿ ಇತ್ತೀಚೆಗೆ ತಮ್ಮ ಕೊನೆಯುಸಿರಿನೊಂದಿಗೆ ಹೋರಾಟ ನಿಲ್ಲಿಸಿದ ಸಂಗಾತಿ ಬೇವಿಂಜೆ ವಿಷ್ಣು ಕಕ್ಕಿಲ್ಲಾಯ ಅವರಿಗೆ 'ಹೊಸತು' ಬಳಗದಿಂದ ಚಿತ್ರನಮನ ■



ಪತ್ನಿ ಅಹಲ್ಯಾ ಮತ್ತು ಮಕ್ಕಳೊಂದಿಗೆ



ನವಕರ್ನಾಟಕ ಪ್ರಕಾಶನದ ಕಾರ್ಯಕ್ರಮದಲ್ಲಿ ಎಸ್. ಆರ್. ಭಟ್, ಎಂ. ಎಸ್. ಕೃಷ್ಣನ್, ಪಿ. ರಾಮನ್, ಎನ್. ಸಿ. ರಣನವರೆ ಅವರೊಂದಿಗೆ




ಸೋವಿಯತ್ ಪುಸ್ತಕ ಮೇಳದ ಕಾರ್ಯಕ್ರಮದಲ್ಲಿ: ಖ್ಯಾತ ಕಲಾವಿದರಾದ ರೋರಿಕ್, ಡಿ. ಎಂ. ನಂಜುಂಡಪ್ಪ ಮತ್ತು ಬಿ. ಟಿ. ಪಾರ್ಥಸಾರಥಿ ಅವರೊಂದಿಗೆ




ವಿಶ್ವಕಥಾಕೋಶ ಸಂಪುಟಗಳ ಬಿಡುಗಡೆಯ ಸಂದರ್ಭದಲ್ಲಿ: ಹಾ.ಮಾ.ನಾ., ಗೊರೂರು, ನಿರಂಜನ ಅವರೊಂದಿಗೆ



'ಬರೆಯದ ದಿನಚರಿಯ ಮರೆಯದ ಪುಟಗಳು' ಕೃತಿಯ ಬಿಡುಗಡೆಯ ಸಂದರ್ಭದಲ್ಲಿ ಶಿವಶಂಕರರಾವ್, ಡಾ|| ಜಿ. ಆರ್., ರಮೇಶ್ ಕುಮಾರ್ ಇತರರೊಂದಿಗೆ



ಬಾಳ ಸಂಗಾತಿ ಅಹಲ್ಯಾರೊಂದಿಗೆ



ಹಿರಿಯ ಸ್ವಾತಂತ್ರ್ಯ ಹೋರಾಟಗಾರ, ಸಿ.ಪಿ.ಐ. ನಾಯಕ ಎಂ. ಸಿ. ನರಸಿಂಹನ್, ಸಿದ್ದನಗೌಡ ಪಾಟೀಲ ಅವರೊಂದಿಗೆ



ಕರ್ನಾಟಕ ಏಕೀಕರಣ ಹೋರಾಟಗಾರರಾದ ಅಳವಂಡಿ ಶಿವಮೂರ್ತಿ ಸ್ವಾಮಿ ಹಾಗೂ ಕಕ್ಕಿಲ್ಲಾಯರು



ಸಿಪಿಐ ರಾಷ್ಟ್ರೀಯ ನಾಯಕ ಎ. ಬಿ. ಬರ್ಧನ್ ಅವರೊಂದಿಗೆ




ಮಂಗಳೂರಿನಲ್ಲಿ ನವಕರ್ನಾಟಕದ ಹೊಸ ಮಳಿಗೆಯ ಉದ್ಘಾಟನೆಯ ಸಂದರ್ಭದಲ್ಲಿ

# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...



**ಚಿತ್ರಗಳು :** ಶ್ರೀಹರಿ, ಕಮಲಂ ಅರಸು, ಸಂಕೇತ್, ಬಿ. ವಿ. ಎಚ್., ಪ್ರತೀಕ್, ಉಮೇಶ ಹಿರೇಮಠ, ವೈಭವ್ ಪೂಜಾರ

**ಮುಖಪುಟ ಛಾಯಾಚಿತ್ರ :** ಯಜ್ಞ, ಮಂಗಳೂರು

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ

## ಈ ತಿಂಗಳು

'ಹೊಸತು' ಪತ್ರಿಕೆ ಆರಂಭವಾಗುವುದಕ್ಕೂ ಮುಂಚಿನ ಮಾತು. ೧೯೯೫ ಅಥವಾ ೯೬ ಇರಬೇಕು. ಮಾನ್ಯ ಬಿ. ವಿ. ಕಕ್ಕಿಲ್ಲಾಯ ಅವರನ್ನು ನೋಡಿಬರಲೆಂದು ಒಂದು ಬೆಳಿಗ್ಗೆ ಮಂಗಳೂರಿನಲ್ಲಿ ಅವರ ಮನೆಗೆ ಹೋಗಿದ್ದ ಸಂದರ್ಭ. ಎಂದಿನಂತೆ ಅವರು ಆ ಪುಸ್ತಕ, ಈ ಪುಸ್ತಕ, ಎಲ್ಲೋ ಪ್ರಕಟವಾಗಿದ್ದ ಲೇಖನ, ಬರೆಯ ಬೇಕೆಂದು ಉದ್ದೇಶಿಸಿರುವ ಹೊಸದೊಂದು ಪುಸ್ತಕದ ವಿಚಾರಧಾರೆ - ವ್ಯಾಪ್ತಿ, ಹೀಗೆ ಹತ್ತಾರು ವಿಷಯಗಳನ್ನು ಅವರ ಸ್ವಭಾವಸಹಜ ಹುಮ್ಮಸ್ಸಿನಿಂದ ಪ್ರಸ್ತಾಪಿಸುತ್ತಿದ್ದರು. ಪ್ರಸ್ತುತ ಲೇಖಕ ಸ್ವತಃ ತಾನು ಅಗತ್ಯವಾಗಿ ಮತ್ತು ತುರ್ತಾಗಿ ಕೈಗೊಳ್ಳಬೇಕಾದ ಅಧ್ಯಯನ ಹಾಗೂ ಬರಹದ ಬಗೆಗೂ ಬಹಳ ಕಾಳಜಿಯಿಂದ ವಿವರಿಸುತ್ತಿದ್ದರು. ನವಕರ್ನಾಟಕ ಪ್ರಕಾಶನದ 'ಸ್ವಾತಂತ್ರ್ಯೋತ್ತರ ಭಾರತ - ಸುವರ್ಣೋತ್ಸವ ಮಾಲಿಕೆ'ಯ ಸಂಪುಟಗಳಿನ್ನೂ ಹೊರ ಬಂದಿರಲಿಲ್ಲ. ಆ ಮಾಲಿಕೆಗೆ ಕಕ್ಕಿಲ್ಲಾಯರು ಎರಡು ಹೊತ್ತಿಗೆಗಳನ್ನು ಬರೆಯಲಿದ್ದರು. ಆ ಪೈಕಿ 'ಭಾರತಕ್ಕೊಂದು ಬದಲು ದಾರಿ'ಯ ಪ್ರಸ್ತಾವನೆಯಲ್ಲಿನ ಅವರ ಒಂದು ಮಾತು ಅವರ ವ್ಯಕ್ತಿತ್ವವನ್ನು ತೆರೆದಿಡುತ್ತದೆ : ''ನನ್ನನ್ನೊಬ್ಬ ಮನುಷ್ಯನನ್ನಾಗಿ ರೂಪಿಸಿದ ನನ್ನ ಪಕ್ಷಕ್ಕೆ ಈ ಕೃತಿ ನನ್ನ ಕಾಣಿಕೆಯಾಗಿದೆ.'' ಮಾಲಿಕೆಗಾಗಿ 'ಭಾರತಕ್ಕೊಂದು ಬದಲು ದಾರಿ' ಮತ್ತು 'ಸ್ವಾತಂತ್ರ್ಯ ಸಂಗ್ರಾಮದ ಹೆಜ್ಜೆಗಳು' ಬರವಣಿಗೆಯ ಜವಾಬ್ದಾರಿ ಹೊತ್ತು ಕೆಲಸ ಆರಂಭಿಸಿದ್ದರು. ಆ ಕೆಲಸದ ಜೊತೆಗೆ ಮತ್ತಿನ್ನೇನೋ ಬರೆಯುವ ಕೆಲಸ ಹಚ್ಚುವ ಪ್ರಯತ್ನ ಸಾಗಿತ್ತೆಂದು ಅವರ ಪತ್ನಿ ಶ್ರೀಮತಿ. ಅಹಲ್ಯಾ ಅವರಿಗೆ ಅನಿಸಿತ್ತು. ನಮ್ಮ ಸಂಭಾಷಣೆ ಅವರಿಗೆ ಅಂತಹ ಸೂಚನೆ ನೀಡಿತ್ತು. ನಮಗಾಗಿ ತಿಂಡಿ-ಕಾಫಿ ಸಿದ್ಧಗೊಳಿಸುತ್ತಿದ್ದ ಆಕೆ ಬಿರುಸಿನಿಂದ ಹೊರಬಂದು ಉಚ್ಚ ಸ್ವರದಲ್ಲಿ ನುಡಿದರು : ''ನೋಡಿ, ಅವರಿಗೆ ಮೊದಲೇ ಆರೋಗ್ಯ ಸರಿಯಿಲ್ಲ. ಈಗಾಗಲೇ ಹತ್ತು ಕೆಲಸಗಳಲ್ಲಿ ಅವರಿಗೆ ಬಿಡುವೇ ಇಲ್ಲ. ಇನ್ನು ನೀವು ಬೇರೆ ಅದು ಬರಿ, ಇದು ಬರಿ, ಎಂದು ಜವಾಬ್ದಾರಿ ಹೊರಿಸಿದ್ದೀರಿ. ಈಗ ಮತ್ತೆ ಇನ್ನೇನೋ ಬರೆಯಲು ಅವರನ್ನು ಒಪ್ಪಿಸುತ್ತಿದ್ದೀರಿ. ಅವರ ಆರೋಗ್ಯದ ಬಗ್ಗೆ ನಿಮಗಾರಿಗೂ ಚಿಂತೆ ಇಲ್ಲ. ಶ್ರೀನಿವಾಸನಿಗೆ ಹೇಳಿದರೆ ಅವನೂ ಕಿವಿಯ ಮೇಲೆ ಹಾಕಿಕೊಳ್ಳುತ್ತಿಲ್ಲ (ಶ್ರೀನಿವಾಸ ಅವರ ಮಗ ಮತ್ತು ವೈದ್ಯ). ನೀವು ಬಂದಾಗೆಲ್ಲಾ ಹೀಗೆ ಅವರಿಗೆ ಏನೋ ಹೇಳಿಹೋಗುತ್ತೀರಿ. ಬೇಡ, ಇನ್ನು ಮೇಲೆ ಅವರಿಗೆ ಹೆಚ್ಚಿನ ಕೆಲಸ ಹೊರಿಸಬೇಡಿ. ನಿಮಗೆ ಅದೇನು ಬರೆಯಬೇಕೋ ಅದನ್ನು ಬೇಕಾದರೆ ಇವರೊಡನೆ ಮಾತನಾಡಿಕೊಂಡು ಹೋಗಿ, ಆದರೆ ಅವರಿಗೇ ಬರೆಯಲು ಹಚ್ಚಬೇಡಿ.'' ಪತಿಯ ಆರೋಗ್ಯದ ಬಗ್ಗೆ ಚಿಂತಿತರಾಗಿದ್ದ ಶ್ರೀಮತಿ. ಅಹಲ್ಯಾ ಅವರು ೧೯೯೮ರಲ್ಲಿ ಹಠಾತ್ತನೆ ನಿಧನರಾದರು. ಗಂಡನ ಆರೋಗ್ಯದ ಚಿಂತೆಯಲ್ಲಿ ಮುಳುಗಿದ್ದ ಆಕೆ ಅಸ್ವಸ್ಥರಾದದ್ದಿಲ್ಲ. ಸಕ್ಕರೆ ಕಾಯಿಲೆಯೋ ಹೃದಯಸ್ತಂಭವೋ ಅವರನ್ನು ಆಹುತಿ ತೆಗೆದುಕೊಂಡಿತು. ಆಮೇಲೆ ಮನೆಯಲ್ಲಿ ಒಬ್ಬರೇ ವಾಸವಿದ್ದ ಕಕ್ಕಿಲ್ಲಾಯರು ಇನ್ನೂ ೧೪ ವರ್ಷ ಜೀವಿಸಿದರು, ಸಕ್ರಿಯವಾಗಿದ್ದರು, ಬಿಡುವಿಲ್ಲದಷ್ಟು ಕೆಲಸಗಳಲ್ಲಿ ಮಗ್ನರಾಗಿದ್ದರು, ಹೋರಾಟಗಳನ್ನು ಮುಂದುವರಿಸಿದರು, ಮೌಲಿಕ ಕೃತಿಗಳನ್ನು ರಚಿಸಿದರು, ಹತ್ತಾರು ಜನಕ್ಕೆ ನೂರಾರು ವಿಧಗಳಲ್ಲಿ ಮಾರ್ಗದರ್ಶಕರಾಗಿದ್ದರು, ಸ್ಫೂರ್ತಿಯನ್ನು ತುಂಬುತ್ತಿದ್ದರು. ಪ್ರತಿಯೊಂದು 'ಹೊಸತು' ಸಂಚಿಕೆಯನ್ನೂ ವಿಮರ್ಶಿಸಿ ಆಗಾಗ್ಗೆ ಪತ್ರಮುಖೇನ ಸಲಹೆ ನೀಡುತ್ತಿದ್ದರು, ಆತ್ಮೀಯ ಹಿರಿಯ ಸಿದ್ಧಾಂತಿಯಾಗಿದ್ದರು. ಜೂನ್ ೪ರಂದು ಗತಿಸಿದ ಕಾಮ್ರೇಡ್ ಕಕ್ಕಿಲ್ಲಾಯ ಅವರಿಗೆ ಗೌರವಪೂರ್ವಕ ನಮನಗಳು.

✶ ✶ ✶

ಪ್ರಸ್ತುತ ಸನ್ನಿವೇಶದ ವಿದ್ಯಮಾನಗಳನ್ನು ವ್ಯಾಖ್ಯಾನಿಸಲು ಸಾಹಿತಿಗಳು ಪೂರ್ವಕಾಲದ ಪುರಾಣ ಕಥಾನಕಗಳನ್ನು ಬಳಸಿಕೊಳ್ಳುವುದು ಅಪರೂಪವಲ್ಲ. ವಿಶೇಷವಾಗಿ ಸಮಕಾಲೀನ ರಾಜಕೀಯ ಮತ್ತು ಸಾಮಾಜಿಕ ತುಮುಲಗಳನ್ನು ಪುರಾಣಗಳ ಪಾತ್ರಗಳ ಮೂಲಕ ಚಿತ್ರಿಸುವುದು ಅವರಿಗೆ ರೂಢಿಯಾಗಿಹೋಗಿದೆ. ನೇರವಾಗಿ ಇಂದಿನ ಸನ್ನಿವೇಶವನ್ನು ಬಯಲುಗೊಳಿಸಿ ತಮ್ಮ ಒಲವು ಪ್ರಕಟಿಸದಿರಲು ಅದೊಂದು ತೆರೆಯಾಗಿ ಸಹಾಯ ಮಾಡುತ್ತದೋ ಏನೋ. ಸಾಹಿತಿಗಳನ್ನು ಮೀರಿಸುವ ರಾಜಕೀಯ ಪ್ರವೀಣರು ನಮ್ಮಲ್ಲಿದ್ದಾರೆ, ಅವರಿಗೂ ಪುರಾಣದ ಮೋಹ. ಏಕೆಂದರೆ, ಅವರ ವಾಸ್ತವ ಚಿಂತನೆಗಳು ಅಷ್ಟು ಹಳಸಿರುವಂಥವು ! ಈಚೆಗೆ 'ಅಣ್ಣಾ ತಂಡ'ದ ಪ್ರಶಾಂತಭೂಷಣ್ ಮಹಾಭಾರತದ

*(೭ನೇ ಪುಟಕ್ಕೆ)*

ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೩ ಸಂಚಿಕೆ-೧೨ ಜುಲೈ ೨೦೧೨

**ಗೌರವ ಸಂಪಾದಕ**

ಜಿ. ರಾಮಕೃಷ್ಣ

**ಸಂಪಾದಕ**

ಸಿದ್ದನಗೌಡ ಪಾಟೀಲ

**ಸಹಸಂಪಾದಕರು**

ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ರಾಮಲಿಂಗಪ್ಪ ಟಿ. ಬೇಗೂರು
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**

ನವಕರ್ನಾಟಕ ಪ್ರಕಾಶನ

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೮೦೯, ೨೨೨೦೩೫೮೦
ಫ್ಯಾಕ್ಸ್: ೩೦೫೭೮೮೦೨೩
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**




# ಜಿಮ್, ಅಭಿವೃದ್ಧಿ, ಜೈಲ್‌ಭರೋ ಸ್ಪರ್ಧೆ ಇತ್ಯಾದಿ

ತಮ್ಮದು ಅಭಿವೃದ್ಧಿ ಪರವಾದ ಸರಕಾರ ಎಂದು ಬೊಗಳೆ ಬಿಡುತ್ತಲೇ ಬಂದ ರಾಜ್ಯದ ಬಿ.ಜೆ.ಪಿ. ಸರಕಾರ ತನ್ನ ಆಡಳಿತಾವಧಿಯ ಕೊನೆಯ ವರ್ಷದಲ್ಲಾದರೂ, ತನ್ನದೇ ರಾಜಕೀಯ ಲಾಭಕ್ಕಾಗಿ ಅಲ್ಪಸ್ವಲ್ಪವಾದರೂ ರಾಜ್ಯದ ಅಭಿವೃದ್ಧಿಯ ಕಡೆಗೆ ಗಮನಹರಿಸಬಹುದಿತ್ತು. ಹಾಗಂತ ರಾಜ್ಯದ 'ಹಿಂದೂ' ಪರ ರಾಜಕಾರಣಿಗಳನ್ನು ಕೇಳಿದರೆ ಅಧಿಕಾರಕ್ಕಾಗಿ ಕಚ್ಚಾಟ ಮತ್ತು ಕೆಲವರ ಭ್ರಷ್ಟಾಚಾರವನ್ನು ಹೊರತು ಪಡಿಸಿದರೆ ಅಭಿವೃದ್ಧಿ ಗುಪ್ತಗಾಮಿನಿಯಾಗಿದೆ ಎಂದು ಹೇಳುತ್ತಾರೆ. ಶಿಕ್ಷಣದಲ್ಲಿ ಕೇಸರೀಕರಣ 'ನಮ್ಮ ಜನ್ಮಸಿದ್ಧ ಹಕ್ಕು' ಎಂಬಂತೆ ಮಾತನಾಡುತ್ತಿರುವ ಶಿಕ್ಷಣ ಸಚಿವ ಕಾಗೇರಿ ತಾನು ಒಂದು ದೇಶದ ಸಂವಿಧಾನದಡಿಯಲ್ಲಿ ಅಧಿಕಾರ ನಡೆಸುತ್ತಿದ್ದೇನೆ ಎಂಬುದನ್ನೇ ಮರೆತಿದ್ದಾರೆ. ಶಿಕ್ಷಣ ಭವಿಷ್ಯದ ಪ್ರಜೆಗಳನ್ನು ನಿರ್ಮಿಸುವ, ಪ್ರಜ್ಞಾಪೂರಕವಾಗಿ ಮಕ್ಕಳನ್ನು ಭವಿಷ್ಯಮುಖಿಯಾಗಿ ಬೆಳೆಸುವ ಒಂದು ಜವಾಬ್ದಾರಿಯುತ ಕ್ಷೇತ್ರ ಎಂಬುದನ್ನೂ ಅರಿಯದ ಒಬ್ಬ ಸಮಾಧಿಮುಖಿ ಶಿಕ್ಷಣ ಮಂತ್ರಿಯನ್ನು ಹೊಂದಿದ 'ಪುಣ್ಯ' ಕರ್ನಾಟಕದ ಮಹಾಜನತೆಗೆ ದೊರೆತಿದೆ. ಇವರ ಶಿಕ್ಷಣ ಕ್ಷೇತ್ರದ ಅಭಿವೃದ್ಧಿಯ ಕನಸು ಈ ತೆರನಾಗಿದ್ದರೆ ಇತ್ತೀಚೆಗೆ ಜಿಮ್ (ವಿಶ್ವ ಬಂಡವಾಳ ಹೂಡಿಕೆದಾರರ ಸಮಾವೇಶ)ನಲ್ಲಿ ಬೆವರು ಸುರಿಸಿದ ಕೈಗಾರಿಕಾ ಸಚಿವ ಮುರಿಗೇಶ ನಿರಾಣಿ ಮತ್ತು ಮುಖ್ಯಮಂತ್ರಿ ಸದಾನಂದ ಗೌಡರು ವಿಶ್ವ ಬಂಡವಾಳಗಾರರನ್ನು ಕರೆತಂದು ನಮ್ಮ ಭೂಮಿಯನ್ನು ಅವರಿಗೊಪ್ಪಿಸುವುದೇ ಅಭಿವೃದ್ಧಿ ಎಂದು ಸಾರಿದ್ದಾರೆ. ವಿಶ್ವ ಬಂಡವಾಳಗಾರರಿಗಾಗಿ ನಮ್ಮ ಸರಕಾರ ಘೋಷಣೆ ಮಾಡಿದ ಸವಲತ್ತುಗಳ ಮೇಲೆ ಸುಮ್ಮನೆ ಕಣ್ಣಾಡಿಸಿದರೆ ಇವರು ದೇಶ ಮಾರಲು ಅದೆಷ್ಟು ಉತ್ಸುಕತೆ ಹೊಂದಿದ್ದಾರೆಂದು ತಿಳಿಯುತ್ತದೆ. ಕೇವಲ ೨೪ ಘಂಟೆಯಲ್ಲಿ ಏಕಗವಾಕ್ಷಿ ಅಥವಾ ಉನ್ನತಮಟ್ಟದ ಸಮಿತಿಯು ತೀರ್ಮಾನಗಳ ಬಗ್ಗೆ ಸರಕಾರಿ ಆದೇಶಗಳನ್ನು ಹೊರಡಿಸುವ ವ್ಯವಸ್ಥೆ, ಒಂದು ಲಕ್ಷ ಇಪ್ಪತ್ತು ಸಾವಿರ ಎಕರೆ ಭೂಮಿಯನ್ನು ಸ್ವಾಧೀನ ಪಡಿಸಿಕೊಳ್ಳುವುದು, ಇದಕ್ಕೆ ಕೃಷಿಗೆ ಯೋಗ್ಯವಲ್ಲದ ಭೂಮಿ ಎಂಬ ಉಪಶೀರ್ಷಿಕೆ ಸೇರಿಸಿದ್ದಾರೆ. ಈಗಾಗಲೇ ೪೦ ಸಾವಿರ ಎಕರೆ ಭೂಮಿ ಸ್ವಾಧೀನಕ್ಕೆ ಅಂತಿಮ ಪ್ರಕಟಣೆ ಹೊರಡಿಸಲಾಗಿದೆಯಂತೆ, ಆ ೪೦ ಸಾವಿರ ಎಕರೆ ಭೂಮಿ ಕೃಷಿ ಯೋಗ್ಯವಲ್ಲ ಎಂಬುದನ್ನು ಪ್ರಮಾಣೀಕರಿಸಿಲ್ಲ. ಹತ್ತು ಸಾವಿರ ಕಿಲೋಮೀಟರ್ ರಸ್ತೆಯನ್ನು ಮೇಲ್ದರ್ಜೆಗೇರಿಸುವುದು, ಕೇವಲ ಮೂವತ್ತು ನಿಮಿಷದಲ್ಲಿ ತಲುಪುವಂತೆ ಬೆಂಗಳೂರು-ಮೈಸೂರು, ಹುಬ್ಬಳ್ಳಿ-ಬೆಳಗಾವಿ ನಡುವೆ ವೇಗದ ರೈಲು, ಎಲ್ಲ ಕೈಗಾರಿಕೆಗಳಿಗೆ ಅಗತ್ಯವಿರುವ ವಿದ್ಯುತ್, ನೀರು ಪೂರೈಕೆ ಮಾಡಲಾಗುವುದು. ಹೀಗೆ ಹೂಡಿಕೆದಾರರಿಗೆ ಸ್ವರ್ಗವನ್ನೇ ತೋರಿಸಿದ್ದಾರೆ. ಇಷ್ಟಕ್ಕೇ ಇವರ 'ಅಭಿವೃದ್ಧಿಯೇ ಆಡಳಿತದ ಮಂತ್ರ'ವೆಂಬ ಧ್ಯೇಯಘೋಷ ನಿಲ್ಲುವುದಿಲ್ಲ. 'ಕೈಗಾರಿಕೆಗಳಿಗೆ ಬೇಕಾದ ಭೂಮಿಗೆ ಸಂಬಂಧಪಟ್ಟಂತೆ ಕರ್ನಾಟಕದ ಭೂಸುಧಾರಣಾ ಕಾಯ್ದೆಗೆ ತಿದ್ದುಪಡಿ ಮಾಡಲಾಗುವುದು' ಎಂದು ಹೇಳಿದ್ದಾರೆ. ಇದು ಕರ್ನಾಟಕದ ಭೂಮಿ ಯಾರ ಕೈಲಿರಬೇಕು ಎಂದು ಬಿ.ಜೆ.ಪಿ. ಬಯಸುತ್ತಿದೆ ಎಂಬುದನ್ನು ತೋರಿಸುತ್ತದೆ. ಈ ರಾಜ್ಯದಲ್ಲಿ ಭೂಸುಧಾರಣೆಗಾಗಿ ಲಕ್ಷಾಂತರ ಜನರ ತೀವ್ರವಾದ ಹೋರಾಟ, ಚಳುವಳಿಗಳು ನಡೆದು ಕರ್ನಾಟಕದ ಭೂ ಸುಧಾರಣೆಯನ್ನು ಜಾರಿಗೆ ತರಲಾಗಿದೆ. ಇದರ ಉದ್ದೇಶವೇ 'ಭೂಹೀನರಿಗೆ ಭೂಮಿ ಹಂಚಿಕೆ'. ಆದರೆ ಇಂದು ಅದರ ಉದ್ದೇಶವನ್ನೇ ತಿರುಚಿ 'ಬಂಡವಾಳಗಾರರಿಗೆ ಭೂಕಾಣಿಕೆ' ಎಂದು ಮಾರವಾಡಿಗಳ ಪಕ್ಷವಾದ ಬಿ.ಜೆ.ಪಿ. ತೀರ್ಮಾನಿಸಿದೆ. ಭೂಮಿಯ ಕುರಿತು ಈ ನೆಲದ ಮಕ್ಕಳಿಗಾಗಿ ರೂಪಿಸಿದ ಕಾನೂನನ್ನೇ ತೆಗೆದುಹಾಕಿ ವಿದೇಶಿ ಬಂಡವಳಿಗರಿಗೆ ಅನುಕೂಲ ಮಾಡಿಕೊಡುತ್ತೇವೆ ಎಂದು ಬಹಿರಂಗವಾಗಿಯೇ, ಜಾಹಿರಾತುಗಳ ಮೂಲಕ ಘೋಷಿಸುವ ಮಟ್ಟಕ್ಕೆ ಈ ಸರಕಾರ ಹೋಗಿದೆ.

ರಾಜ್ಯದ ಜನತೆ ಆತಂಕಪಡಬೇಕಾದ ಇನ್ನೊಂದು ಸಂಗತಿಯೆಂದರೆ ಬಂಡವಾಳ ಹೂಡಿಕೆದಾರರಿಗೆ ಬಂಡವಾಳವನ್ನು ಸಾಲದ ರೂಪದಲ್ಲಿ ಕೊಡಲು ನಮ್ಮ ಬ್ಯಾಂಕ್‌ಗಳನ್ನು ಸಿದ್ಧಗೊಳಿಸಿರುವುದು. ಮೂರು ಲಕ್ಷ ಕೋಟಿಗೂ ಅಧಿಕ ಸಾಲವನ್ನು ಕೊಡಲು ಬ್ಯಾಂಕ್‌ಗಳು ಸಿದ್ಧವಾಗಿವೆ. ಅಲ್ಲಿಗೆ ಬಂಡವಾಳ ಹೂಡಲು ಬರುವವರಿಗೆ ಭೂಮಿ, ನೀರು, ವಿದ್ಯುತ್, ರಸ್ತೆ, ರೈಲು, ಕೊನೆಗೆ ನಮ್ಮ ಬ್ಯಾಂಕ್‌ಗಳಿಂದ ಸಾಲ. ಇದು ರಾಜ್ಯವನ್ನು ಅಭಿವೃದ್ಧಿಯತ್ತ ಕೊಂಡೊಯ್ಯುವ ನಮ್ಮ ಸರಕಾರದ ನೀತಿ. ನಮ್ಮ ದೇಶದ ಬ್ಯಾಂಕ್‌ಗಳಲ್ಲಿರುವ ಹಣ ನಮ್ಮ ಜನತೆಯದು. ಈಗಾಗಲೇ ನಮ್ಮ ಕೈಗಾರಿಕೋದ್ಯಮಿಗಳು ನಮ್ಮ ಸಾರ್ವಜನಿಕವಲಯದ ಬ್ಯಾಂಕ್‌ಗಳಿಗೆ ಕಟ್ಟಬೇಕಾದ ಸಾಲ ೭೪,೬೧೬ ಕೋಟಿ ಹಾಗೇ ಉಳಿದಿದೆ. ಅದು ಬಡ್ಡಿ ಸೇರಿಸಿದರೆ ಎರಡು ಲಕ್ಷ ಕೋಟಿಗೆ ಹತ್ತಿರವಾಗುತ್ತದೆ. ಅದನ್ನೇ ನಮ್ಮ ಸನ್ಮಾನ್ಯ ಬಡ ಉದ್ಯಮಿಗಳು ಹಿಂತಿರುಗಿಸಿಲ್ಲ. (ಇವರಲ್ಲಿ ಕೆಲವರ ಹೆಸರುಗಳು ಪ್ರಪಂಚದ ಸಿರಿವಂತರ ಪಟ್ಟಿಯಲ್ಲಿದೆ.) ಈಗ ನಮ್ಮ ರಾಜ್ಯ ಸರಕಾರ ಮೂರು ಲಕ್ಷ ಕೋಟಿಗೂ ಅಧಿಕ ಸಾಲ ಕೊಡಿಸಲು ಮುಂದಾಗಿದೆ.

ಬಂಡವಾಳ ಹೂಡಿಕೆದಾರರಿಗೆ ಇಷ್ಟೆಲ್ಲ ಸೌಲಭ್ಯಗಳನ್ನು ಘೋಷಿಸಿದರೂ ೨೦೧೦ರ 'ಜಿಮ್'ನ ಸಾಧನೆ ಏನು ಎನ್ನುವುದನ್ನು ಗಮನಿಸಬೇಕು. ಅಂದು ೩೮೯ ಯೋಜನೆಗಳಿಗೆ ಒಪ್ಪಂದವಾಗಿತ್ತು. ೩.೯೨ ಲಕ್ಷ ಕೋಟಿ ಬಂಡವಾಳ ಹರಿದುಬರಲಿದೆ ಎಂದು ಹೇಳಲಾಗಿತ್ತು. ೭.೩೧ ಲಕ್ಷ ಉದ್ಯೋಗ ಸೃಷ್ಟಿ ಎಂದು ನಿರೀಕ್ಷಿಸಲಾಗಿತ್ತು. ಆದರೆ ಸರಕಾರವೇ ಹೇಳುವಂತೆ ೩೮೯ ಯೋಜನೆಗಳಲ್ಲಿ ಜಾರಿಯಾಗಿರುವುದು ಕೇವಲ ೩೮ ಮಾತ್ರ. ಅದರಲ್ಲೂ ವಿಜಾಪುರ ಜೊಲ್ಲೆಯ ಬಸವನ ಬಾಗೇವಾಡಿ ತಾಲೂಕಿನಲ್ಲಿ ಕೂಡ್ಲಗಿ ಗ್ರಾಮದ ಹತ್ತಿರ ಸ್ಥಾಪಿಸಲಾದ ಎನ್.ಟಿ.ಪಿ.ಸಿ. ಶಾಖೋತ್ಪನ್ನ ಘಟಕ ಸ್ಥಾಪನೆ ಗಮನ ಸೆಳೆದದ್ದನ್ನು ಹೊರತುಪಡಿಸಿದರೆ ಹೇಳಿಕೊಳ್ಳುವಂಥ ಕೈಗಾರಿಕೆಗಳು ಆರಂಭವಾಗಲಿಲ್ಲ. ಕೈಗಾರಿಕಾ ಮಂತ್ರಿ ನಿರಾಣಿಯವರ ಸಕ್ಕರೆ ಕಾರ್ಖಾನೆ ಜಿಮ್-೨೦೧೦ರ ಫಲಾನುಭವಿಗಳಲ್ಲೊಂದು. ಇನ್ನುಳಿದಂತೆ ದೊಡ್ಡ ಪ್ರಮಾಣದಲ್ಲಿ ಸುದ್ದಿ ಮಾಡಿದ್ದು ಅಂದಿನ ಸಚಿವ ಇಂದಿನ ಜೈಲುವಾಸಿ ಜನಾರ್ದನ ರೆಡ್ಡಿಯವರ ಪತ್ನಿ ಲಕ್ಷ್ಮಿ ಅರುಣಾ ಅವರ ೩೬ ಸಾವಿರ ಕೋಟಿ ಬಂಡವಾಳ

ಹೂಡುತ್ತೇವೆಂದಿದ್ದ ಬ್ರಹ್ಮಿಣಿ ಸ್ಟೀಲ್. ಈ ಉಕ್ಕು ಉದ್ಯಮದ ಪರವಾಗಿ ಸಹಿ ಹಾಕಿದ್ದ ಲಕ್ಷ್ಮೀ ಅರುಣ ಅವರೇ ಆ ಕಂಪನಿಯನ್ನು ಮಾರಿಕೊಂಡಿದ್ದಾರೆ. ಪೋಸ್ಕೊ ಕಂಪನಿ ಅವಶ್ಯಕತೆಗಿಂತ ಹೆಚ್ಚಿನ ಭೂಮಿಯನ್ನು, ಅದರಲ್ಲೂ ಕೃಷಿ ಭೂಮಿಯನ್ನು ಕಬಳಿಸಲು ಹೋಗಿ ಜನರ ಪ್ರತಿಭಟನೆಯಿಂದ ಮುದುರಿ ಕುಳಿತಿದೆ. ಸರಕಾರ ಹಿಂದಿನ ಜಿಮ್ ಯಶಸ್ವಿಯೆಂದು ಬೊಗಳೆ ಬಿಡುತ್ತಿದೆ. ಆ ಸಂದರ್ಭದಲ್ಲಿಯೇ ೭೭,೫೦೦ ಎಕರೆ ಭೂಮಿ ಬೇಕು ಎಂದು ಹೇಳಲಾಗಿತ್ತು. ಈಗ ೪೦,೦೦೦ ಎಕರೆ ಭೂಮಿಗೆ ಅಂತಿಮ ಪ್ರಕಟಣೆ ಹೊರಡಿಸಲಾಗಿದೆ ಎಂದು ಹೇಳುತ್ತಿದೆ. ಹೀಗಿದ್ದೂ ೨೦೧೦ರ ಒಪ್ಪಂದಗಳು ಪ್ರತಿಶತ ೬೦ಕ್ಕಿಂತ ಹೆಚ್ಚು ಯಶಸ್ವಿಯಾಗಿವೆ ಎಂದು ಹೇಳಲಾಗುತ್ತಿದೆ. ಈಗ ೨೦೧೨ರ ಜಿಮ್‌ನಿಂದ ಏಳು ಲಕ್ಷ ಕೋಟಿ ಬಂಡವಾಳ, ಹತ್ತು ಲಕ್ಷಕ್ಕೂ ಮಿಕ್ಕಿದ ಉದ್ಯೋಗ ಎಂದು ನಮ್ಮ ಕೈಗಾರಿಕಾ ಮಂತ್ರಿ, ಮುಖ್ಯಮಂತ್ರಿ ಹೇಳುತ್ತಿದ್ದಾರೆ. ಒಟ್ಟಿನಲ್ಲಿ ಇದೆಲ್ಲ ನಾಟಕ. ಭೂಮಿಯನ್ನು, ಬ್ಯಾಂಕ್‌ಗಳ ಮೂಲಕ ಸಾಲದ ನೆಪದಲ್ಲಿ ಜನರ ಹಣವನ್ನು ಲಪಟಾಯಿಸುವ ತಂತ್ರ. ಸರಕಾರವೇ ಭೂಮಾಫಿಯಾ ಕೆಲಸ ಮಾಡುತ್ತಿದೆ. ನಿರೀಕ್ಷಿತವಾದ್ದೇನೆಂದರೆ ಈ ವಿಶ್ವ ಭೂಮಾಫಿಯಾ ಹಿತಾಸಕ್ತಿಗೆ ಕೇಂದ್ರ ಮತ್ತು ರಾಜ್ಯಗಳಲ್ಲಿನ ಆಡಳಿತ ಮತ್ತು ವಿರೋಧ ಪಕ್ಷಗಳು ಒಂದಾಗಿಯೇ ದುಡಿದದ್ದು.

ದೊಡ್ಡ ದೊಡ್ಡ ರಸ್ತೆಗಳು, ಎತ್ತರದ ಕಟ್ಟಡಗಳು, ವಿಶಾಲವಾದ ಕಂಪೌಂಡ್‌ಗಳು, ಬಣ್ಣ ಬಣ್ಣದ ಕಾರುಗಳು, ಆಕಾಶದ ತುಂಬ ಹೆಲಿಕ್ಯಾಪ್ಟರ್‌ಗಳು ಇದನ್ನೇ ಅಭಿವೃದ್ಧಿ ಎಂದು ನಂಬಿರುವ ಈ ರಾಜಕೀಯ ದಲ್ಲಾಳಿಗಳಿಗೆ ಮಾನವ ಅಭಿವೃದ್ಧಿ ಅಂದರೆ ಅರ್ಥವಾಗುವುದಿಲ್ಲ. ರಾಜ್ಯದಲ್ಲಿ ರೈತರ ಆತ್ಮಹತ್ಯೆ, ಮುಂದುವರಿಯುತ್ತಿರುವ ಭೀಕರ ಬರಗಾಲ, ೧೨೩ ತಾಲೂಕುಗಳಲ್ಲಿ ಕುಡಿವ ನೀರಿಗೂ ಪರದಾಡುವ ಜನತೆ, ಕನಿಷ್ಠ ಒಂದು ಗುಡಿಸಲು ಹಾಕಿಕೊಳ್ಳಲೂ ಸ್ಥಳವಿಲ್ಲದ ಕೋಟ್ಯಂತರ ಬಡವರು, ಮಳೆ ಬಂದರೆ ಪ್ರವಾಹದಲ್ಲಿ, ಬಾರದಿದ್ದರೆ ಬರಗಾಲದಿಂದ ಸಾಯುವ ಜನತೆ, ಅನಾರೋಗ್ಯದಿಂದ ಬಳಲುವ ಅಸಹಾಯಕರು, ಅಪೌಷ್ಟಿಕತೆಯಿಂದ ಸಾಯುವ ಮಕ್ಕಳು, ವಲಸೆಹೋಗುವ ಗ್ರಾಮೀಣರು, ನಿರುದ್ಯೋಗಿ ಯುವಜನತೆ, ಮದುವೆಯಾಗದ ಯುವತಿಯರು, ಹೀಗೆ ಇಡೀ ಮಾನವ ಸಂಪತ್ತು ಅಪಾಯ ಮತ್ತು ಅತಂತ್ರ ಸ್ಥಿತಿಯಲ್ಲಿರುವಾಗ ಬಿಜೆಪಿ ಸರಕಾರ ಅಭಿವೃದ್ಧಿಯ ಸಾಧನೆಗಳ ಕುರಿತು ಹೇಳಿಕೆ ಕೊಡುತ್ತಿದೆ. ಒಂದು ಜಿಂದಾಲ್ ಕಂಪನಿ ಎಪ್ಪತ್ತು ಕಿಲೋಮೀಟರ್ ದೂರದ ಕೃಷ್ಣಾ ನದಿಯಿಂದ ತನ್ನ ಕೈಗಾರಿಕೆಗೆ ನೀರು ಸರಬರಾಜು ವ್ಯವಸ್ಥೆ ಮಾಡಿಕೊಳ್ಳುತ್ತದೆ. ನಮ್ಮ ಸರಕಾರಕ್ಕೆ ನದಿ ಪಕ್ಕದ ಹಳ್ಳಿಗಳಿಗೆ ಕುಡಿವ ಶುದ್ಧ ನೀರು ಸರಬರಾಜು ಮಾಡಲು ಸಾಧ್ಯವಾಗುವುದಿಲ್ಲ. ರೈತರ ಪಂಪ್‌ಸೆಟ್‌ಗಳಿಗಿಲ್ಲದ ವಿದ್ಯುತ್‌ಅನ್ನು ಕೈಗಾರಿಕೆಗಳಿಗೆ ಹೀಗೆ ಒದಗಿಸುತ್ತಾರೆ, ಕುಡಿವ ನೀರಿಲ್ಲದಾಗ ಅವರಿಗೆ ನೀರು ಎಲ್ಲಿಂದ ಕೊಡುತ್ತಾರೆ ! ಇವೆಲ್ಲ ಬೊಗಳೆ ಎನ್ನಲು ಇನ್ನೇನು ಬೇಕು ?

ಅಂತಿಮವಾಗಿ ಕೈಗಾರಿಕೆಗಳೇ ಬೇಡ ಎನ್ನುವುದು ನಮ್ಮ ವಾದವಲ್ಲ. ಕೈಗಾರಿಕೆಯ ಹೆಸರಿನಲ್ಲಿ ಈ ಲೂಟಿ, ಭ್ರಷ್ಟಾಚಾರ ನಿಲ್ಲಲಿ ಎನ್ನುವುದು ನಮ್ಮ ಆಶಯ. ರಾಜ್ಯದಲ್ಲಿ ಯಾವ ಪ್ರದೇಶದಲ್ಲಿ ಎಂಥ ಕೈಗಾರಿಕೆಗಳು ಬೇಕು, ಈಗಾಗಲೇ ಇರುವ ಸಾರ್ವಜನಿಕ ವಲಯದ ಸಂಸ್ಥೆಗಳಿಂದ ಇಂಥ ಯೋಜನೆಗಳು ಸಾಧ್ಯವೆ, ನಮ್ಮ ಮಾನವ ಸಂಪನ್ಮೂಲ ಬಳಕೆಗೆ ಬೇಕಾದ ಯೋಜನೆಗಳು ಯಾವುವು, ನಿಜವಾದ ಅಭಿವೃದ್ಧಿಗೆ ಎಷ್ಟು ಭೂಮಿ ಬೇಕು, ಇವೆಲ್ಲ ಒಂದು ಜನಪರವಾದ ಸರಕಾರ ಜನರ, ನಾಡಿನ, ಅಭಿವೃದ್ಧಿಗಾಗಿ ಕೇಳಿಕೊಳ್ಳಬೇಕಾದ ಪ್ರಶ್ನೆಗಳು, ಕಂಡುಕೊಳ್ಳಬೇಕಾದ ಪರಿಹಾರಗಳು. ಆದರೆ ಈಗ ಸರಕಾರ ನಡೆಸುವ ಜಿಮ್‌ಗಳು, ಬಂಡವಾಳ ಹೂಡಿಕೆಗಳು ಸಾರ್ವಜನಿಕ ಸಂಪತ್ತನ್ನು ಲೂಟಿ ಹೊಡೆವ ಯೋಜನೆಗಳು, ಅಂಥ ಬಂಡವಾಳ ಹೂಡಿಕೆದಾರರಿಗೆ ಅನುಕೂಲ ಮಾಡಿಕೊಟ್ಟು ಅಕ್ರಮವಾಗಿ ಕೋಟ್ಯಂತರ ದುಡ್ಡು ಬಾಚುವ ಯೋಚನೆ ನಮ್ಮ ಪ್ರಜಾಪ್ರತಿನಿಧಿಗಳದ್ದು. ಈಗಾಗಲೇ 'ಜೈಲಭರೋ' ಸ್ಪರ್ಧೆ ನಡೆಸುತ್ತಿರುವ ನಮ್ಮನ್ನು ಆಳುವ ನಾಯಕರನ್ನು ನೋಡಿದರೆ ಇದೆಲ್ಲ ಸ್ಪಷ್ಟವಾಗುತ್ತದೆ.

[signature]

## ಡಾಲರ್ ಪುರಾಣ

ಅಮೆರಿಕಾದ ಒಂದು ಡಾಲರನ್ನು ಖರೀದಿಸಲು ೧೯೭೩ರಲ್ಲಿ ಸುಮಾರು ೭.೬೬ ರೂ. ಮಾತ್ರ ಸಾಕಾಗಿತ್ತು. ಇಂದು ಒಂದು ಅಮೆರಿಕಾ ಡಾಲರಿನ ಬೆಲೆ ನಮ್ಮ ರೂ. ೫೬ಕ್ಕೆ ಸಮನಾಗಿದೆ. ಅಂದರೆ ಡಾಲರ್ ಖರೀದಿಯ ಅಗತ್ಯ ಇರುವವರು ಮಾಮೂಲಿಗಿಂತಲೂ ಹೆಚ್ಚಿಗೆ ತಮ್ಮ ಜೇಬುಗಳನ್ನು ಖಾಲಿ ಮಾಡಿಕೊಳ್ಳ ಬೇಕಾಗುತ್ತದೆ. ಹಾಗೆಯೇ ತಮ್ಮಲ್ಲಿರುವ ಈ ಡಾಲರ್‌ಗಳನ್ನು ರೂಪಾಯಿಗಳಾಗಿ ಬದಲಾಯಿಸಿಕೊಳ್ಳುವವರ ಜೇಬುಗಳು ಯಾವುದೇ ಶ್ರಮದ ಪ್ರಯಾಸ ಇಲ್ಲದೆ ಮಾಮೂಲಿಗಿಂತಲೂ ಹೆಚ್ಚಿಗೆ ತುಂಬಿಕೊಳ್ಳುತ್ತವೆ. ಇದೇ ವಿವರಣೆ ನಮ್ಮ ಉದ್ದಿಮೆದಾರರಿಗೂ ಅನ್ವಯಿಸುತ್ತದೆ. ತಾವು ಆಮದು ಮಾಡಿಕೊಳ್ಳುವ ವಸ್ತುಗಳಿಗೆ ಹೆಚ್ಚು ಬೆಲೆ ತೆರಬೇಕಾಗಿ ಬಂದರೆ, ರಫ್ತು ಮಾಡುವ ಸಾಮಗ್ರಿಗಳ ಮಾರಾಟ ಲಾಭದಾಯಕವಾಗಿ ಪರಿಣಮಿಸುತ್ತದೆ. ರೂಪಾಯಿಗಳಲ್ಲೇ ವ್ಯವಹರಿಸುವ ಸಾಮಾನ್ಯರು ಸಂಪೂರ್ಣ ಆಮದುಗೊಂಡ ವಸ್ತುಗಳು ಅಥವಾ ಅವುಗಳನ್ನು ಕಚ್ಚಾ ವಸ್ತುಗಳಾಗಿ ಬಳಸಿ ನಮ್ಮಲ್ಲೇ ಉತ್ಪಾದನೆಯಾಗುವ ಪದಾರ್ಥಗಳ ಖರೀದಿಗೆ ಹೆಚ್ಚಿನ ಹಣ ತೆರುವ ಇಲ್ಲವೆ ಕುಂಠಿತವನ್ನು ಸಾಧಿಸಬೇಕಾದ ಅಗತ್ಯ ಬರಬಹುದು. ಯೂರೋಪ್-ಅಮೆರಿಕಾಗಳಲ್ಲಿ ವ್ಯಾಪಕವಾಗಿದೆ ಎನ್ನಲಾಗುವ ಆರ್ಥಿಕ ಬಿಕ್ಕಟ್ಟು ವ್ಯವಹಾರ-ಉದ್ಯೋಗಗಳನ್ನು ಕಸಿದುಕೊಳ್ಳದೆ ಇದ್ದರೆ, ಅಂತರರಾಷ್ಟ್ರೀಯ ಸೇವಾ ವಲಯಗಳಲ್ಲಿ ವ್ಯವಹರಿಸುವ ನಮ್ಮ ಐಟಿ ಕಂಪನಿಗಳು, ಉದ್ಯೋಗಿಗಳು, ಎನ್‌ಆರ್‌ಐಗಳು... ಈ ಪ್ರಕ್ರಿಯೆಯ ಫಲವನ್ನು ಅನುಭವಿಸಬಹುದು.

ನಮ್ಮ ರೂಪಾಯಿಯ ಈ ಅವಸ್ಥೆಗೆ ಮೂಲಭೂತ ಕಾರಣಗಳೇನೇ ಇರಲಿ, ಇಂತಹ ಸನ್ನಿವೇಶಗಳಿಗೆ ಕಡಿವಾಣ ಹಾಕಲು ಅಗತ್ಯವಾದ ಕೈಗಾರಿಕೆ, ಕೃಷಿ, ಉದ್ಯೋಗ ಸೃಷ್ಟಿಯಂತಹ ರಾಷ್ಟ್ರೀಯ ನೀತಿಗಳ ಸ್ವರೂಪ ಮತ್ತು ಅನುಷ್ಠಾನ


ತಿಂಗಳ ಪತ್ರಿಕೆ
**ಹೊಸತು**
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೫೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು - ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

ನಿರೀಕ್ಷಿತ ಮಟ್ಟಕ್ಕಿಲ್ಲವೆಂದು ಗ್ಯಾರಂಟಿಯಾಗಿ ಹೇಳಬಹುದೆನಿಸುತ್ತದೆ. ಹೊರ ಪ್ರಪಂಚದ ವ್ಯಾವಹಾರಿಕ-ರಾಜಕೀಯ ಆಗುಹೋಗುಗಳು ಮತ್ತು ಸಾಮಾಜಿಕ-ಆರ್ಥಿಕ ಬಿಕ್ಕಟ್ಟುಗಳಿಂದ ಮುಕ್ತವಾದ ಆರ್ಥಿಕ ವ್ಯವಸ್ಥೆ ನಮ್ಮದಾಗಬೇಕು ಎಂದು ನಿರೀಕ್ಷಿಸುವುದು ಉದಾತ್ತವಾದ ಧೋರಣೆ ಎನ್ನಿಸಬಹುದೇನೊ. ಆದರೆ ಒಂದು ಸ್ವಾವಲಂಬಿ ಆರ್ಥಿಕ ವ್ಯವಸ್ಥೆಯ ನಿರೀಕ್ಷೆಯು, ಅಂತರರಾಷ್ಟ್ರೀಯ ಮಟ್ಟದಲ್ಲಿ ಮಠ-ಆಶ್ರಮಗಳನ್ನು ಬೆಳೆಸಿರುವ ನಿತ್ಯಾನಂದನಂತಹ ಕಳ್ಳ ಸ್ವಾಮಿಗಳು, ದೇಶದಿಂದ ಹೊರಗೆ ಒಂದು ದ್ವೀಪವನ್ನೇ ಖರೀದಿಸುವ ಮಟ್ಟದ ವ್ಯವಹಾರದ ಮಾಲೀಕ ರಾಮದೇವ್‌ರಂತಹ ಮಹಾನ್ ದೇಶಭಕ್ತರ ವೃದ್ಧಿ-ಪೋಷಣೆ ನಿರ್ಭೀತವಾಗಿ ಸಾಗಿರುವ ಜಾಗತೀಕರಣ-ಉದಾರೀಕರಣಗಳ ಸಂದರ್ಭದಲ್ಲಿ, ಹುಸಿಯಾಗಬಹುದೇನೊ ? ನಿತ್ಯಾನಂದ - ರಾಮದೇವರಂತಹ ಉದ್ಯಮಿಗಳೂ ನಮ್ಮಲ್ಲಿದ್ದಾರೆ.

ಸರಕಾರಿ ಅಂಕಿ-ಅಂಶಗಳ ಪ್ರಕಾರ ೨೦೧೧ರಲ್ಲಿ ನಮ್ಮ ದೇಶದ ಆಮದು ಮತ್ತು ರಫ್ತುಗಳ ಒಟ್ಟು ಬೆಲೆ ಕ್ರಮವಾಗಿ ೪೪೮.೭ ಮತ್ತು ೨೯೨.೯ ಬಿಲಿಯನ್ ಡಾಲರ್‌ಗಳು . ಆಮದು ಮಾಡಿಕೊಳ್ಳಲಾಗಿರುವ ವಸ್ತುಗಳ ಪಟ್ಟಿಯಲ್ಲಿ ಕಚ್ಚಾ ತೈಲ, ವಜ್ರ-ಬಂಗಾರ-ಬೆಳ್ಳಿ, ಮಶೀನುಗಳು, ಕಬ್ಬಿಣ ಮತ್ತು ಸ್ಟೀಲು, ರಾಸಾಯನಿಕಗಳು, ವಾಹನಗಳು, ಬಟ್ಟೆ, ಅಲಂಕಾರದ ಬಟ್ಟೆ-ದಿರುಸುಗಳು ಮುಖ್ಯವಾದವುಗಳು. ಕಚ್ಚಾ ತೈಲದಿಂದ ಉತ್ಪಾದಿತ ಪೆಟ್ರೋಲಿಯಂ ಪದಾರ್ಥಗಳನ್ನು ಹೊರತುಪಡಿಸಿದಂತೆ ರಫ್ತಾಗಿರುವ ಪ್ರಮುಖ ವಸ್ತುಗಳಲ್ಲಿ ಇವೂ ಕಾಣಿಸಿಕೊಳ್ಳುವುದು ವಿಶೇಷ. ರಫ್ತು ಮತ್ತು ಆಮದಿನ ವಹಿವಾಟನ್ನು ನಿರ್ಧರಿಸುವ ಅಂಶಗಳು ಹಲವು. ಈ ವ್ಯವಹಾರಗಳ ಲಾಭ-ನಷ್ಟಗಳ ಲೆಕ್ಕಾಚಾರ ಗಣಿತಶಾಸ್ತ್ರದ ನೇರ ನಿರೂಪಣೆಯಷ್ಟು ಸರಳವಲ್ಲ. ೨೦೧೧-೧೨ರಿಂದ ೨೦೧೩-೧೪ರ ವರೆಗಿನ ೩ ವರ್ಷಗಳ ಅವಧಿಯಲ್ಲಿ ನಮ್ಮ ದೇಶದ ರಫ್ತಿನ ಒಟ್ಟು ಮೌಲ್ಯವನ್ನು ದ್ವಿಗುಣಗೊಳಿಸುವ ಉದ್ದೇಶದಿಂದ ನಮ್ಮ ಸರಕಾರ ೮೫ ಪುಟಗಳ ಒಂದು ಯೋಜನೆ ತಂತ್ರವನ್ನು ರೂಪಿಸಿದೆ. ಸಹಜವಾಗಿಯೇ ಸದ್ಯಕ್ಕೆ ನಮ್ಮಿಂದ ಕೊಳ್ಳುತ್ತಿರುವ ದೇಶಗಳನ್ನು ಉಳಿಸಿಕೊಂಡು, ಮಾರುಕಟ್ಟೆಯನ್ನು ಇನ್ನೂ ಹೆಚ್ಚು ವೃದ್ಧಿಗೊಳಿಸುವ ಹಾಗೂ ಹೊಸ ದೇಶಗಳಲ್ಲಿ ವ್ಯಾಪಾರವನ್ನು ಬೆಳೆಸಿ-ರೂಢಿಸಿಕೊಳ್ಳಲು ಅನುವಾಗುವಂತಹ ''ಇಂಡಿಯನ್ ಬ್ರಾಂಡ್''ನ್ನು ಬೆಳೆಸುವ ಉದ್ದೇಶವನ್ನು ಯೋಜನೆ ಹೊಂದಿದೆ. ಇಂತಹ ಉದ್ದೇಶ ಸಾಧನೆಯಲ್ಲಿ ಸಣ್ಣ ಮಧ್ಯಮ ಉದ್ದಿಮೆಗಳ ಪಾತ್ರ ಹಿರಿದು. ಆದರೆ ಜಾಗತೀಕರಣದ ಹೊಳಪಿನಲ್ಲಿ ಮಿಂಚಲು ಸಾಧ್ಯವಾಗದೆ ಇಂತಹ ಬಹಳಷ್ಟು ಉದ್ದಿಮೆಗಳು ಮುಚ್ಚಿಹೋಗಿವೆ - ಮುಚ್ಚಿಹೋಗುವ ರಸ್ತೆ ಎದುರು ನಿಂತಿವೆ. ಇವುಗಳ ಪೋಷಣೆಗೆ ಅಗತ್ಯವಾದ ಕಡಿಮೆ ಬಡ್ಡಿಯಲ್ಲಿ ಸಾಲ, ಗ್ಯಾರಂಟಿ ರಹಿತ ಸಾಲ ವಿತರಣೆ, ಜಾಗ ಮತ್ತು ವಿದ್ಯುಚ್ಛಕ್ತಿಯ ಪೂರೈಕೆ, ಇಂತಹ ಕ್ರಮಗಳ ಕುರಿತ ಸ್ಪಷ್ಟ ನೀತಿ ಮತ್ತು ಅನುಷ್ಠಾನದ ಕಾರ್ಯಕ್ರಮ ಇದುವರೆವಿಗೆ ಹೊರಬಂದಿಲ್ಲ.

ಜಿಡಿಪಿಯ ಏರಿಳಿತಗಳ ಬಗ್ಗೆ ದಿನನಿತ್ಯ ಮಾತನಾಡುವ ಯುಪಿಎ ಸರಕಾರ, ಈ ಅಭಿವೃದ್ಧಿಯ ಅಳತೆಗೆ ಸಣ್ಣ-ಮಧ್ಯಮ ಗಾತ್ರದ ಉತ್ಪಾದನಾ ಘಟಕಗಳ ಕೊಡುಗೆ ಶೇ. ೧೬ರಷ್ಟು ಎಂದು ಗುರುತಿಸಿ, ೧೦ ವರ್ಷಗಳಲ್ಲಿ ಈ ಕೊಡುಗೆಯ ಪ್ರಮಾಣವನ್ನು ಶೇ. ೨೫ಕ್ಕೆ ಏರಿಸುವ ಮತ್ತು ೧೦ ಕೋಟಿ ಮಂದಿಗೆ ಉದ್ಯೋಗ ಒದಗಿಸುವ ರಾಷ್ಟ್ರೀಯ ಉತ್ಪಾದನಾ ನೀತಿಯನ್ನು ೨೦೧೧ ಅಕ್ಟೋಬರ್‌ನಲ್ಲಿ ಪ್ರಕಟಿಸಿತು. ಈ ಮೊದಲು ಹೇಳಿದಂತೆ, ಈಗಾಗಲೇ ಒಂದಲ್ಲ ಒಂದು ಕಾರಣಕ್ಕೆ ಸ್ಥಗಿತಗೊಂಡಿರುವ ಕೈಗಾರಿಕೆಗಳನ್ನು ಉದ್ಧರಿಸುವ ಕಾರ್ಯ ಇಂತಹ ಯೋಜನೆಗಳಲ್ಲಿ ಪ್ರಮುಖವಾಗಬೇಕು. ಕಡಿಮೆ ಬಂಡವಾಳ ಹೂಡಿ ಸಣ್ಣ ಕೈಗಾರಿಕೆಗಳನ್ನು ಸ್ಥಾಪಿಸುವ ಆಸಕ್ತಿ ಹೊಂದಿರುವವರಿಗೆ, ಮಾರುಕಟ್ಟೆಯ ಸೃಷ್ಟಿಯಲ್ಲಿ ತೊಂದರೆ ಅನುಭವಿಸುತ್ತಿರುವ ಸಣ್ಣ ಉದ್ಯಮಿಗಳಿಗೆ ಭರವಸೆ ನೀಡುವ ಕಾರ್ಯಕ್ರಮ ಈ ನೀತಿಯಲ್ಲೂ ಇಲ್ಲ. ಹೀಗಾಗಿ ಪ್ರತಿಷ್ಠಿತ ರಾಜಕೀಯ-ಬಂಡವಾಳಗಳ ಪ್ರಭಾವದ ಆಸರೆ ಹೊಂದಿರುವವರು ಮಾತ್ರ ಈ ನೀತಿಗಳ ಲಾಭ ಪಡೆದುಕೊಳ್ಳಬಲ್ಲರು. ಇಂತಹ ಉದ್ದಿಮೆಗಳಲ್ಲಿ ಕೆಲಸ ಮಾಡುವವರ ಪಾಡನ್ನು ನಮ್ಮ ಗಾರ್ಮೆಂಟ್ ಕೈಗಾರಿಕೆಗಳ ಕಾರ್ಮಿಕರ ಪರಿಸ್ಥಿತಿಯ ಅರಿವಿರುವವರು ಸುಲಭವಾಗಿಯೇ ಊಹಿಸಿಕೊಳ್ಳಬಹುದು. ಕಾನೂನನ್ನು ಕತ್ತೆ ಎಂದು ಭಾವಿಸಿ ಸವಾರಿ ಮಾಡುವ ಭೂಪರಿರುವ ಈ ನಾಡಿನ ಕೈಗಾರಿಕೆಗಳ ಭವಿಷ್ಯ ಉಜ್ವಲವಾಗಬೇಕಾದರೆ, ಸ್ವ-ಉದ್ಯೋಗಿ ಘೋಷಣೆ ಸಾಕಾರವಾಗಬೇಕಾದರೆ, ಸ್ವ-ಉದ್ಯೋಗಿಗಳು ಮತ್ತು ಸ್ವ-ಉದ್ಯೋಗದ ಆಶೆ ಹೊತ್ತವರು ನಿಸ್ಸಂಕೋಚವಾಗಿ-ನಿರ್ಭೀತಿಯಿಂದ ತಮ್ಮ ಯೋಜನೆಗಳನ್ನು, ಸಮಸ್ಯೆಗಳನ್ನು ಚರ್ಚಿಸುವಂತಹ ವಾತಾವರಣದ ನಿರ್ಮಾಣ ಸರಕಾರದ ಯೋಜನೆ-ನೀತಿಗಳ ಉದ್ದೇಶವಾಗಬೇಕು.

ಒಟ್ಟಾರೆ ನಮ್ಮ ಸರಕಾರದ ಈ ಹೊಸ ನೀತಿಗಳ ಕುರಿತು ''ಥಿಯರಿಯಲ್ಲಿ ಪಾಸು ಆದರೆ ಪ್ರಾಕ್ಟಿಕಲ್‌ನಲ್ಲಿ ಫೇಲ್'' ಎಂದು ಹೇಳಬಹುದೇನೊ ? ಆದರೆ 'ಶಸ್ತ್ರಚಿಕಿತ್ಸೆ ಯಶಸ್ವಿ - ರೋಗಿ ಮಾತ್ರ ಸತ್ತ' ರೂಪವನ್ನು ಪಡೆದುಕೊಳ್ಳದೆ ಇರಬೇಕಾದರೆ ಇವುಗಳ ಕುರಿತ ವ್ಯಾಪಕ ಚರ್ಚೆ-ಸಂವಾದಗಳು ಜರುಗಬೇಕು. ರಾಜಕೀಯ ದಿಗ್ಗಜರು ತಮ್ಮ-ತಮ್ಮಲ್ಲೇ ಗೂಗ್ಲಿ ಸ್ಪಿನ್‌ಗಳನ್ನು ಎಸೆದುಕೊಂಡು ಮಾಧ್ಯಮಗಳ ಟಿ.ಆರ್.ಪಿ. ಹೆಚ್ಚಿಸಲಿ. ಆದರೆ ಅಭಿವೃದ್ಧಿಯಂತಹ ವಿಷಯದಲ್ಲಿ ನೇರ ಬೌಲಿಂಗ್-ಬ್ಯಾಟಿಂಗ್ ಹಿತಕರ. ಜನಸಾಮಾನ್ಯರ ಭಾಗ ವಹಿಸುವಿಕೆಗೆ ಇದು ಅಗತ್ಯ ಕೂಡ. ಸ್ವಾವಲಂಬಿ ಆರ್ಥಿಕ ವ್ಯವಸ್ಥೆಯ ರೂಪರೇಷೆಗಳು, ಕಾರ್ಯಕ್ರಮಗಳು ಬೇರೆ ಯಾವುದೇ ರೀತಿಯಲ್ಲೂ ಸಾಕಾರವಾಗಲಾರವು.

'ಕೃಷಿ ಕ್ಷೇತ್ರದ ಉದ್ಧಾರ' ಬಡ ರೈತರ, ಕೃಷಿ-ಕಾರ್ಮಿಕರ ಜೀವನೋಪಾಯಕ್ಕೆ ಕನಿಷ್ಠವಾದ ಅವಕಾಶಗಳನ್ನೂ ಕಲ್ಪಿಸದ ವಾತಾವರಣದಲ್ಲಿ ಸಾಧಿಸಲು ಸಾಧ್ಯವೆ ? ೨೦೦೦ ಆಗಸ್ಟ್‌ನಲ್ಲಿ ಶೇ. ೪ಕ್ಕಿಂತಲೂ ಹೆಚ್ಚು ವಾರ್ಷಿಕ ಅಭಿವೃದ್ಧಿಯನ್ನು ಕೃಷಿ ಕ್ಷೇತ್ರದಲ್ಲಿ ಸಾಧಿಸುವ ಗುರಿ ಹೊತ್ತ 'ರಾಷ್ಟ್ರೀಯ ಕೃಷಿ ನೀತಿ'ಯನ್ನು ಅಂದಿನ ಸರಕಾರ ಅಂಗೀಕರಿಸಿತು. ಖಾಸಗಿ ವಲಯಗಳ ಭಾಗವಹಿಸುವಿಕೆಯ ಮುಖೇನ 'ಕಾಂಟ್ರಾಕ್ಟ್ ಕೃಷಿ'ಯನ್ನು ಹೆಚ್ಚು ಪ್ರಮಾಣದಲ್ಲಿ ಅಳವಡಿಸಲು ಅನುವಾಗುವಂತಹ ಭೂಮಿ ಲೀಸ್ ವ್ಯವಸ್ಥೆಯನ್ನು ಜಾರಿಗೊಳಿಸುವುದು ಆ ನೀತಿಯ ಉದ್ದೇಶ. ಭೂಮಿ ಕಬಳಿಕೆ, ನೈಸರ್ಗಿಕ ಸಂಪನ್ಮೂಲಗಳ ಲೂಟಿ ಹಗಲಿರುಳು ನಿರಂತರವಾಗಿ ಸಾಗಿರುವ ಸಂದರ್ಭದಲ್ಲಿ ಇಲ್ಲಿ ಸಿನಿಕತನವನ್ನು ಪ್ರದರ್ಶಿಸದೆ ಇರಲು ಯಾವ ಆಶಾವಾದಿಗೂ ಕಷ್ಟದ ವಿಷಯವೆ.

ಹಣದುಬ್ಬರ, ಜಿಡಿಪಿ, ರೂಪಾಯಿಯ ಮೌಲ್ಯ ಕುರಿತ ಚರ್ಚೆ ದೇಶದ ಅಭಿವೃದ್ಧಿ ಮತ್ತು ಜನಸಾಮಾನ್ಯರ ಜೀವನಕ್ಕೆ ನೇರವಾಗಿ ಸಂಬಂಧಿಸಿದ್ದು. ಕೈಗಾರಿಕೆ-ಕೃಷಿಕ್ಷೇತ್ರಗಳಿಗೆ ಒತ್ತು ನೀಡುವುದರ ಜೊತೆಗೆ ಐಶಾರಾಮಿ ಜೀವನಕ್ಕೆ ಕಡಿವಾಣ ಹಾಕುವಂತಹ ನೀತಿಗಳೂ ಅತ್ಯಗತ್ಯ.

**ಜಿ. ನಾಗಕುಮಾರ್**

## ಶಿಕ್ಷಣದಲ್ಲಿ ಗೊಂದಲದ ಪರಮಾವಧಿ

ಒಂದು ಸಮಸ್ಯೆಗೆ ಪರಿಹಾರವೆಂದು ಸೂಚಿಸಲಾದ ವ್ಯವಸ್ಥೆಯು ಇನ್ನೊಂದು ಸಮಸ್ಯೆಯ ರೂಪದಲ್ಲಿ ನಮ್ಮನ್ನು ಕಾಡುವಂತಾದರೆ ಮೂಲದಲ್ಲೆಲ್ಲೋ ಎಡವಿದ್ದೇವೆಂದರ್ಥ. ಶಿಕ್ಷಣ ಕ್ಷೇತ್ರದಲ್ಲಿ ಇದು ನಿರಂತರವಾಗಿ ಬೆಳೆಯುತ್ತಾ ಬಂದಿದೆ. ಎಡವಿದ್ದು ಸಾಲದೆಂದು ಈಗ ಮುಗ್ಗರಿಸಿ ಬೀಳುವಂತಹ ತೀರ್ಮಾನವೊಂದನ್ನು ಪ್ರಕಟಿಸಿ ಸರ್ಕಾರವು ಗೊಂದಲವನ್ನು ದ್ವಿಗುಣಗೊಳಿಸಿದೆ. ಸರ್ಕಾರಿ ಶಾಲೆಗಳಲ್ಲಿ ಐದನೆಯ ತರಗತಿಯ ನಂತರದ ಎರಡು ವರ್ಷಗಳಲ್ಲಿ ಆಂಗ್ಲ ಮಾಧ್ಯಮಕ್ಕೆ ಅವಕಾಶ ಮಾಡಿಕೊಡುವ ತೀರ್ಮಾನ ಅದು. ಅದರಿಂದ ಮಕ್ಕಳಿಗೆ ಎಷ್ಟು ಪ್ರಯೋಜನವಾದೀತೆಂಬುದರ ಮಾಪನ ಮಾಡಲು ಸರ್ಕಾರ ಯಾವ ಯತ್ನವನ್ನೂ ಮಾಡಿಲ್ಲ. ಆಂಗ್ಲ ಮಾಧ್ಯಮದ ತರಗತಿಗಳನ್ನಾರಂಭಿಸಲು ಅಧಿಕ ಉಪಾಧ್ಯಾಯರನ್ನು ನೇಮಿಸಲಾಗುತ್ತದೆಯೆ ಅಥವಾ ಈಗಿರುವವರೇ ಆ ತರಗತಿಗಳನ್ನೂ ನಡೆಸಬೇಕೆ ? ಈ ತರಗತಿಗಳನ್ನು ನಡೆಸಲು ಬೇರೆ ಕೊಠಡಿಗಳನ್ನು ನಿರ್ಮಿಸಿಕೊಡಲಾಗುತ್ತದೋ ಅಥವಾ ಒಂದೇ ಕೊಠಡಿಯಲ್ಲಿ ಎರಡು ಮಾಧ್ಯಮಗಳ ವಿದ್ಯಾರ್ಥಿಗಳನ್ನೂ ಕೂಡಿಸುತ್ತಾರೋ ? ಈ ಅವಕಾಶವನ್ನು ರಾಜ್ಯದ ೩೪೧ ಶಾಲೆಗಳಲ್ಲಿ ಕಲ್ಪಿಸಲಾಗುತ್ತದಂತೆ. ಅವುಗಳ ಆಯ್ಕೆಗೆ ಆಧಾರವೇನು ? ಇಂತಹ ಹಲವಾರು ಪ್ರಶ್ನೆಗಳಿಗೆ ಉತ್ತರ ದೊರೆಯುತ್ತಿಲ್ಲ.

೧೯೬೬ರಲ್ಲಿ ಕೊಠಾರಿ ಶಿಕ್ಷಣ ಆಯೋಗವು ಸಲ್ಲಿಸಿದ ವರದಿಯನ್ನು ನಿಷ್ಠೆಯಿಂದ ಅನುಷ್ಠಾನಗೊಳಿಸದೆ ಸಮಸ್ಯೆಗಳ ಮಹಾಪೂರವನ್ನು ಸೃಷ್ಟಿಸಿದ್ದು ನಮ್ಮ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು. ಶೈಕ್ಷಣಿಕ ವ್ಯವಸ್ಥೆ ಮತ್ತು ವಾತಾವರಣಗಳೆರಡೂ ಕಲುಷಿತಗೊಳ್ಳಲು ಈ ನಿರ್ಲಕ್ಷ್ಯ ಸಾಕಷ್ಟು ಕಾರಣವಾಗಿದೆ. ಏಕರೂಪ ಶಿಕ್ಷಣ ವ್ಯವಸ್ಥೆಯನ್ನು ಸಾರ್ವಜನಿಕ ಶಿಕ್ಷಣದ ಅವಿಭಾಜ್ಯ ಅಂಗವನ್ನಾಗಿಸಬೇಕೆಂದು ಆಯೋಗವು ನಿರ್ದೇಶಿಸಿತ್ತು. ಆ ವ್ಯವಸ್ಥೆಯು ಸರ್ಕಾರಿ, ಖಾಸಗಿ, ಅನುದಾನಿತ, ಹೀಗೆ ಎಲ್ಲ ಶಾಲೆಗಳಿಗೂ ಅನ್ವಯವಾಗಬೇಕಾಗಿದ್ದಿತು. ಈ ಎಲ್ಲ ಶಾಲೆಗಳ ಗುಣಮಟ್ಟ ಎಷ್ಟಿರಬೇಕೆಂದರೆ ಮಕ್ಕಳನ್ನು ಬೇರೆಲ್ಲಿಗೋ ಕಳಿಸಬೇಕೆಂಬ ಆಸೆಯು ಪೋಷಕರಿಗೆ ಬರಬಾರದೆನಿಸುವಷ್ಟು ಇರಬೇಕೆಂದು ಆಯೋಗವು ನಿರೀಕ್ಷಿಸಿತ್ತು (೧೦.೫). ಇದಕ್ಕೆ ಪೂರಕವಾಗಿ ಆಯೋಗವು ''ಸನಿಹದ ಶಾಲೆಗಳಲ್ಲಿ ಕಲಿಕೆ'' ಎಂಬ ಸೂತ್ರವನ್ನು ಅಳವಡಿಸಬೇಕೆಂದು ತಿಳಿಸಿತ್ತು. ಅದರ ಉದ್ದೇಶವು ಶಾಲೆಗಳಲ್ಲಿ ಸಾಮಾಜಿಕ ಪ್ರತ್ಯೇಕತೆ ಸರ್ವಥಾ ಇರಕೂಡದೆಂಬುದೇ ಆಗಿತ್ತು. ಅಂದರೆ, ಎಲ್ಲಾ ಸ್ತರದ ಮಕ್ಕಳೂ

ಒಟ್ಟಿಗೆ ಕಲಿಯುವಂತಾಗಿ ಭಾವನಾತ್ಮಕ ಬೆಸುಗೆ ಮತ್ತು ಐಕ್ಯತೆ ಉಂಟಾಗಬೇಕೆಂಬ ನಿರೀಕ್ಷೆ ಇತ್ತು. ಕೇವಲ ಇಪ್ಪತ್ತು ವರ್ಷಗಳ ಅವಧಿಯಲ್ಲಿ ಇದನ್ನು ಸಾಧಿಸಬಹುದೆಂಬ ಭರವಸೆಯು ಆಯೋಗಕ್ಕೆ ಇತ್ತು. ಅವಕಾಶ ವಂಚಿತರಾದ ಬಡವರು ಮತ್ತು ಅವಕಾಶಗಳ ದೃಷ್ಟಿಯಿಂದಲೂ ಶ್ರೀಮಂತರಾದ ಉಚ್ಚ ವರ್ಗದವರು, ಇವರ ನಡುವೆ ತಾರತಮ್ಯವಿಲ್ಲದ ಶಿಕ್ಷಣ ವ್ಯವಸ್ಥೆಯನ್ನು ರೂಪಿಸುವುದು ದೇಶದ ಭವಿಷ್ಯಕ್ಕೆ ಅಗತ್ಯ, ಅದೊಂದು ಉನ್ನತ ಮೌಲ್ಯ, ಎಂದು ಆಯೋಗವು ತರ್ಕಿಸಿತ್ತು. ಖಾಸಗಿ ಶಾಲೆಗಳು ಸಾರ್ವಜನಿಕ ಶಿಕ್ಷಣ ವ್ಯವಸ್ಥೆಗೆ ಹೊರತಾದುವಲ್ಲ, ಅಲ್ಲಿಯ ಶಿಕ್ಷಣವು ಏಕರೂಪ ಶಿಕ್ಷಣ ವ್ಯವಸ್ಥೆಯ ಅಂಗವೇ ಆಗಿರಬೇಕೆಂಬುದು ಶೈಕ್ಷಣಿಕ ನೀತಿ ಎಂದು ಸಹ ಆಯೋಗವು ಸ್ಪಷ್ಟಪಡಿಸಿತ್ತು.

ಕಳೆದ ೪೫ ವರ್ಷಗಳಲ್ಲಿ ಈ ಆಕಾಂಕ್ಷೆಗಳನ್ನೆಲ್ಲಾ ಮಣ್ಣುಗೂಡಿಸಿದ ನಮ್ಮ ಕೇಂದ್ರ ಮತ್ತು ರಾಜ್ಯ ಸರ್ಕಾರಗಳಿಗೆ ಎಷ್ಟು ಛೀಮಾರಿ ಹಾಕಿದರೂ ಸಾಲದು. ಒಂದೊಂದು ಆರ್ಥಿಕ ಸ್ತರದವರಿಗೆ ಒಂದೊಂದು ವಿಧದ ಶಾಲೆ ಎನ್ನುವಷ್ಟು ಮಟ್ಟಿಗೆ ನಮ್ಮ ಶೈಕ್ಷಣಿಕ ವ್ಯವಸ್ಥೆಯಲ್ಲಿ ಪ್ರತ್ಯೇಕತೆಯನ್ನು ಹಾಸುಹೊಕ್ಕಾಗಿಸಲಾಗಿದೆ. ನಾಗರಿಕ ಹಕ್ಕುಗಳು ಮತ್ತು ಏಳಿಗೆಯ ಸಾಧ್ಯತೆಗಳನ್ನು ನಿರ್ಧರಿಸುವುದು ಈ ಪ್ರತ್ಯೇಕತೆ, ಏಕೆಂದರೆ ಆಡಳಿತ-ಅಧಿಕಾರ-ಸಾಮಾಜಿಕ ಏಣಿ-ಆರ್ಥಿಕ ಸ್ವಾತಂತ್ರ್ಯ ಎಲ್ಲವೂ ಶಿಕ್ಷಣದಿಂದ ನಿರ್ಧಾರಗೊಳ್ಳುತ್ತವೆ. ಏರುಪೇರಿನ ಶಿಕ್ಷಣವು ಏರುಪೇರು ಸಮಾಜಕ್ಕೆ ಒಂದು ಬುನಾದಿಯನ್ನು ಕಲ್ಪಿಸಿಕೊಡುತ್ತದೆ. ನಮ್ಮ ಪರಂಪರಾಗತ ಸಾಮಾಜಿಕ ಚೌಕಟ್ಟನ್ನು ಸಂವಿಧಾನವು ತಿರಸ್ಕರಿಸಿದೆಯಾದರೂ ವ್ಯಾವಹಾರಿಕವಾಗಿ ಅದು ಸುಭದ್ರವಾಗಿ ನೆಲೆನಿಂತಿದೆ. ಆದ್ದರಿಂದ ಅಂಬಾನಿಯ ಮಗ ಅಂಬಾನಿ, ಜಾಡಮಾಲಿಯ ಮಗಳು ಜಾಡಮಾಲಿ, ವೈದ್ಯನ ಮಗ ವೈದ್ಯ ಮತ್ತು ನ್ಯಾಯಾಧೀಶನ ಮಗಳು ನ್ಯಾಯಾಧೀಶಳು ಎಂಬ ಸಂಪ್ರದಾಯ ಬಹುಮಟ್ಟಿಗೆ ಜೀವಂತವಾಗಿದೆ. ಮೇಲೇರುವ ಹಕ್ಕು ತಮ್ಮದೂ ಆಗಿದೆಯೆಂದು ಭಾವಿಸಿ ಪೋಷಕರು ತಮ್ಮ ಮಕ್ಕಳಿಗೆ ಉಚ್ಚ ವರ್ಗದ ಮಕ್ಕಳು ಪಡೆಯುವ ಶಿಕ್ಷಣವನ್ನು ಕೊಡಿಸಲು ಉತ್ಸುಕರಾಗಿರುವುದು ಅಸಹಜವೇನಲ್ಲ. ಅದರಿಂದಾಗಿ ಎಂತಹ ಶೈಕ್ಷಣಿಕ ವಾತಾವರಣ ಉಂಟಾಗಿದೆಯೆಂಬುದು ಸರ್ವವಿದಿತ. ನಮ್ಮ ಹಳ್ಳಿಗಳಲ್ಲಿರುವ ಸರ್ಕಾರಿ ಶಾಲೆಗಳನ್ನು ತೊರೆದು ಹತ್ತಿರದ ಪಟ್ಟಣಗಳಲ್ಲಿರುವ ಆಂಗ್ಲ ಮಾಧ್ಯಮದ ಖಾಸಗಿ ಶಾಲೆಗಳಿಗೆ ಹಳ್ಳಿಗಳ ಮಕ್ಕಳು ವಾಹನಗಳಲ್ಲಿ ದಿನನಿತ್ಯ ಹೋಗಿಬರುವುದು ಇದರ ಪರಿಣಾಮ. ಅದರ ನಂತರದ ಪರಿಣಾಮ ಸರ್ಕಾರಿ ಶಾಲೆಗಳನ್ನು ಮುಚ್ಚುವುದು. ಎಲ್ಲವೂ ಖಾಸಗಿಯಾದಾಗ ಮಾತ್ರ ಶ್ರೇಷ್ಠವಾಗಿರುತ್ತದೆಂಬ ಇಂದಿನ ಆಳುವ ವರ್ಗದ ಧೋರಣೆಗೆ ಇದು ಸ್ವಾಗತಾರ್ಹ ಬೆಳವಣಿಗೆ; ಆದರೆ ದುಬಾರಿ ಖಾಸಗಿ ಶಾಲೆಗಳಿಗೆ ಹೋಗಲಾಗದಂತಹ ಕುಟುಂಬಗಳ ಮಕ್ಕಳಿಗೆ ಅದು ನೇಣು ಹಗ್ಗ. ಕಲಿಕೆಯು ಯಾವ ಹಾದಿಯಲ್ಲಿ ಸುಗಮ ಮತ್ತು ಅತಿಶಯ ಫಲದಾಯಕ ಎಂಬ ಮನೋವೈಜ್ಞಾನಿಕ ಸಾಮಾನ್ಯ ತಿಳಿವಳಿಕೆಯನ್ನು ಹೂತುಹಾಕಿ, ಯಾವ ಮಾಧ್ಯಮದಲ್ಲಿ ಕಲಿತರೆ ಶ್ರೇಯಸ್ಸು ಲಭಿಸುತ್ತದೆ, ಎಂಬ ಮಾನದಂಡ ನಮ್ಮ ಶಿಕ್ಷಣ ವ್ಯವಸ್ಥೆಯನ್ನು ರೂಪಿಸಿಬಿಟ್ಟಿದೆ. ಕಲಿಕೆಯ ಬಗೆಗಿನ ವೈಜ್ಞಾನಿಕ ತಿಳಿವಳಿಕೆಯು ಅಪ್ರಸ್ತುತವೆಂದು ನ್ಯಾಯಾಲಯ ಸಹ ಘೋಷಿಸಿದಂತಾಗಿದೆ, ಏಕೆಂದರೆ ಅದರ ಪ್ರಕಾರ ಮಕ್ಕಳ ಶಿಕ್ಷಣ ಮಾಧ್ಯಮದ ಆಯ್ಕೆಯ ಹಕ್ಕು ಪೋಷಕರದು. ಕಲಿಕೆಯನ್ನು ಸಮರ್ಪಕವಾಗಿಸುವುದು ಹೇಗೆಂಬ ಶೈಕ್ಷಣಿಕ ತತ್ವದ ಮೂಲಾಧಾರವನ್ನೇ ಕಿತ್ತೊಗೆಯಲಾಗಿದೆ. ವಸಾಹತುಶಾಹಿಯಡಿ ಬೆಳೆದ ಮನೋಭಾವಕ್ಕಿಂತಲೂ ಇಂದಿನ ನವವಸಾಹತುಶಾಹಿಯಡಿ ಬೆಳೆದಿರುವ ಮನೋಭಾವ ಹೆಚ್ಚು ಗಟ್ಟಿಯಾಗಿದೆ, ಆದರೆ ಅಷ್ಟೇ ಕೇಡಿನದೂ ಆಗಿದೆ. ಆಂಗ್ಲ ಮಾಧ್ಯಮ ಮತ್ತು ಬೌದ್ಧಿಕ ಸಾಮರ್ಥ್ಯ ಅವಿನಾಭಾವ ಸಂಬಂಧ ಹೊಂದಿವೆಯೆಂಬ ಮಿಥ್ಯೆ ಎಷ್ಟು ಪ್ರಬಲವಾಗಿದೆಯೆಂದರೆ ನಮ್ಮ ರಾಜ್ಯದ ಯಾವ ಸರ್ಕಾರವೂ ಈವರೆಗೆ ಸರ್ವೋಚ್ಚ ನ್ಯಾಯಾಲಯವು ಮಾಧ್ಯಮವನ್ನು ಕುರಿತ ಆದೇಶಕ್ಕೆ ನೀಡಿರುವ ತಡೆಯಾಜ್ಞೆಯನ್ನು ತೆರವುಗೊಳಿಸಲು ಒಂದು ಪುಟ್ಟ ಹೆಜ್ಜೆಯನ್ನೂ ಇಟ್ಟಿಲ್ಲ, ಆ ಮೊಕದ್ದಮೆಯೇ ಇಲ್ಲವೆನ್ನುವಂತೆ ವರ್ತಿಸುವುದು ಅಭ್ಯಾಸವಾಗಿಹೋಗಿದೆ.

ಕೊಠಾರಿ ಆಯೋಗವು ಏಕರೂಪ ಶಿಕ್ಷಣ ವ್ಯವಸ್ಥೆ ಬೇಕೆಂದಿತ್ತು; ಸರ್ಕಾರಗಳು ಅದನ್ನು ಮಾನ್ಯಮಾಡಿ ಪ್ರಾಯೋಗಿಕವಾಗಿ ಕಾರ್ಯರೂಪಕ್ಕೆ ತರಲು ಯತ್ನಿಸಲಿಲ್ಲ, ಆದರೆ ಏಕರೂಪ ಶಿಕ್ಷಣ ವ್ಯವಸ್ಥೆಯನ್ನು ಖಾಸಗಿ ಶಾಲೆಗಳು ನಿರ್ಮಿಸುತ್ತಿವೆ ಮತ್ತು ಅದನ್ನು ಸರ್ಕಾರವು ಮಾನ್ಯಮಾಡಿ ಮುನ್ನಡೆಸುತ್ತಿದೆ. ಅದೇ ಆಂಗ್ಲ ಮಾಧ್ಯಮದ ಶಿಕ್ಷಣದ ಸಾರ್ವತ್ರಿಕೀಕರಣ, ಸರ್ಕಾರಿ ಶಾಲೆಗಳನ್ನು ಗೌಣವಾಗಿಸುವ ಪ್ರಕರಣ ಮತ್ತು ಕ್ರಮೇಣ ಅವುಗಳನ್ನು ಮುಚ್ಚಿಹಾಕಿ ಸಾರ್ವಜನಿಕ ಶಿಕ್ಷಣ ನೀಡುವ ಜವಾಬ್ದಾರಿಯಿಂದ ಕಳಚಿಕೊಳ್ಳುವ ಹುನ್ನಾರ. ಮಾರುಕಟ್ಟೆಯ ಒತ್ತಡವು ಶೈಕ್ಷಣಿಕ ನೀತಿಯನ್ನು ನಿರ್ಧರಿಸುವ ವಿಚಿತ್ರ ಸಂದರ್ಭ ನಮ್ಮದಾಗಿದೆ. ಶಿಕ್ಷಣ ನೀತಿಯು ಒಂದೊಂದು ಶಾಲೆಗೂ ಬೇರೆ ಬೇರೆಯಾಗಿರುವಂತಹ ಸರಕಲ್ಲ, ಆದರೆ ಅದನ್ನು ನಮ್ಮ ಶಿಕ್ಷಣದ ಉದ್ಯಮವು ಸರಕನ್ನಾಗಿಸಿಕೊಂಡಿದೆ. ''ಸರ್ಕಾರದಿಂದ ಅನುದಾನ ಪಡೆಯದ ಶಾಲೆಗಳಿಗೆ ಈ ಶಿಕ್ಷಣ ನೀತಿಯು ಅನ್ವಯವಾಗುವುದಿಲ್ಲ'' ಎಂದು ಕರ್ನಾಟಕದ ಉಚ್ಚ ನ್ಯಾಯಾಲಯವು ತೀರ್ಪೊಂದನ್ನು ನೀಡಿದೆ. ಅನುದಾನ ಪಡೆಯುವ ಶಾಲೆಯಲ್ಲಿ ಭೌತಶಾಸ್ತ್ರವನ್ನು ಬೋಧಿಸುವ ಕ್ರಮವು ಅನುದಾನ ಪಡೆಯದ ಶಾಲೆಯ ಕ್ರಮದಿಂದ ಭಿನ್ನವಾಗಿರಲು ಅಡ್ಡಿಯಿಲ್ಲ ಎಂಬ ಮಾತಿಗೆ ಸಮನಾದ್ದು ಈ ತೀರ್ಪು! ಆದರೆ ಅದು ''ಮೂಲಭೂತ ಹಕ್ಕು'' ಎಂಬುದರಡಿಯ ಪ್ರಶ್ನೆ, ಶೈಕ್ಷಣಿಕ ನೀತಿಯ ಪ್ರಶ್ನೆಯಲ್ಲ, ಎನ್ನುತ್ತದೆ ನ್ಯಾಯಾಲಯ. ಶಿಕ್ಷಣ ವ್ಯವಸ್ಥೆಯ ಹಲವು ಅಂಗಗಳ ಪೈಕಿ ಶೈಕ್ಷಣಿಕ ಸೌಲಭ್ಯ, ಶಿಕ್ಷಣ ವಿಧಾನ ಮತ್ತು ಶಿಕ್ಷಣ ಮಾಧ್ಯಮ, ಇವು ಪ್ರಮುಖವಾದುವು. ಈ ಮೂರರಲ್ಲೂ ಏರುಪೇರುಗಳಿರುವಂತಹ ಶಾಲೆಗಳು ನಮ್ಮಲ್ಲಿ ಹೇರಳವಾಗಿವೆ. ಹವಾನಿಯಂತ್ರಿತ ಕೊಠಡಿ ಒಂದು ಶಾಲೆಯಲ್ಲಾದರೆ ಯಾದ್ಗೀರ್‌ನ ಒಂದು ಶಾಲೆಯು ಮರದಡಿಯಲ್ಲಿ, ಮಳೆ ಬಂದರೆ ಮರದಡಿಯ ಮಕ್ಕಳಿಗೆ ಅಂದಿನ ಶಿಕ್ಷಣ ರದ್ದು! ಬಿಸಿಲು ಮತ್ತು ಧೂಳಿನ ಜೊತೆಯಲ್ಲೇ ಕಲಿಯಬೇಕಾದ್ದು ಆ ಮಕ್ಕಳಿಗೆ ಸರ್ಕಾರವು ವಿಧಿಸಿರುವ ಕರ್ಮ. ಕೆಲವು ಸರ್ಕಾರಿ ಕಾಲೇಜುಗಳ ವಿದ್ಯಾರ್ಥಿಗಳು ಪ್ರೀ-ಯೂನಿವರ್ಸಿಟಿ ಪರೀಕ್ಷೆಯನ್ನು ನೆಲದ ಮೇಲೆ ಕುಳಿತು ಬರೆಯುತ್ತಾರೆ. ಪ್ರಾಣಿಶಾಸ್ತ್ರದ ಪ್ರಶ್ನೆಗಳಿಗೆ ಉತ್ತರ ಬರೆಯುವಾಗ ಚಿತ್ರಗಳನ್ನು ಸಹ ಅವರು ಹಾಗೆ ಕುಳಿತೇ ಬರೆಯಬೇಕು. ಆದರೆ ಅವರ ಮಾಪನವು ಪ್ರತಿಷ್ಠಿತ ಶಾಲೆಗಳ ವಿದ್ಯಾರ್ಥಿಗಳ ಮಾಪನದ ಮಾದರಿಯಲ್ಲೇ ಇರುತ್ತದೆ. ಇದು ನಾಚಿಕೆಗೇಡಿನ ಸಂಗತಿ, ಆಳವಾದ ಕ್ರೋಧ ಮೂಡಲು ಇದು ಸಾಮಗ್ರಿ ಒದಗಿಸುತ್ತದೆ, ಇದನ್ನು ಸರಿಪಡಿಸಲಾಗದ ಅಯೋಗ್ಯರು ನಮ್ಮನ್ನಾಳುತ್ತಿದ್ದಾರೆ, ಎಂದು ನಮ್ಮ ಜನರಿಗೆ ಇನ್ನೂ ಅನಿಸಿಲ್ಲದಿರುವುದೇ ಒಂದು ವಿಪರ್ಯಾಸ. ಅದಕ್ಕೇ ಸರ್ಕಾರಿ ಶಾಲೆಗಳಲ್ಲಿ ''ನಲಿ-ಕಲಿ ವಿಧಾನ'', ಖಾಸಗಿ ಶಾಲೆಗಳಲ್ಲಿ ಬೇರೆ ವಿಧಾನ! ''ನಲಿಯುವುದೂ ಬೇಡ, ಕಲಿಯುವುದೂ ಬೇಡ, ಅದು ನಿಮ್ಮ ಮೇಲಿನ ಶಾಪ'' ಎಂದು ಸರ್ಕಾರವು ತನ್ನ ಶಾಲೆಗಳ ಮಕ್ಕಳಿಗೆ ಯಾವ ಅಳುಕೂ ಇಲ್ಲದೆ ಹೇಳುತ್ತಿದೆ.

ಖಾಸಗಿ ಶಾಲೆಗಳನ್ನು ನಿಯಂತ್ರಿಸಿ ಏಕರೂಪ ಶಿಕ್ಷಣವನ್ನು ರೂಪಿಸುವುದು ತನ್ನ ಸಾಮರ್ಥ್ಯಕ್ಕೆ ಹೊರತಾದ್ದು, ಖಾಸಗಿ ವಲಯದ ಶಕ್ತಿ ಅಷ್ಟು ಅಪಾರ, ಆ ವಲಯದ ಆಳುಮಂದಿ ತಾನು, ಎಂದು ಒಪ್ಪಿರುವ ಸರ್ಕಾರವು ಈಗ ಖಾಸಗಿ ಶಾಲೆಗಳ ಜೊತೆ ಸ್ಪರ್ಧೆಗಿಳಿದಿದೆ. ಎಲ್ಲ ಪ್ರಾಥಮಿಕ ಶಾಲೆಗಳಲ್ಲೂ ಕನ್ನಡ ಅಥವಾ ಮಾತೃಭಾಷೆಯ ಮಾಧ್ಯಮದಲ್ಲಿ ಶಿಕ್ಷಣವಿರಬೇಕೆಂಬ ಶೈಕ್ಷಣಿಕ ನೀತಿಯನ್ನು ಗಾಳಿಗೆ ತೂರಿ ಎಲ್ಲ ಕಡೆಯೂ ಆಂಗ್ಲಭಾಷಾ ಮಾಧ್ಯಮವೇ ಆಗಿಹೋಗಲಿ, ಅದು ಸರ್ವತೋಮುಖ ಅಭಿವೃದ್ಧಿಗೆ ಹಾದಿ ಮಾಡಿಕೊಡುತ್ತದೆ, ಹಾಗಾದರೂ ಕೆಲವು ಸರ್ಕಾರಿ ಶಾಲೆಗಳನ್ನು ಉಳಿಸಬಹುದೇನೋ, ಎಂಬ ನೀತಿಗೆಟ್ಟ ನಿಲುವನ್ನು ಸರ್ಕಾರ ತಾಳುತ್ತಿದೆ. ಇದೊಂದು ಮೂರ್ಖತನದ ಗೀಳು : ಆಂಗ್ಲ ಮಾಧ್ಯಮವು ತನ್ನಷ್ಟಕ್ಕೆ ತಾನೇ ಏಳಿಗೆಯ ಮುಲಾಮನ್ನು ಹಚ್ಚುವ ಶಕ್ತಿ ಪಡೆದಿದ್ದರೆ ಅದೊಂದು ನಂಬಲಾಗದ ಮಾಂತ್ರಿಕ ಶಕ್ತಿಯಾಗಿಬಿಡುತ್ತಿತ್ತು. ಏಕರೂಪದ ಸೌಲಭ್ಯ ಕಲ್ಪಿಸದೆ ಏಕರೂಪ ಮಾಧ್ಯಮದಿಂದ ಹುಲುಸಾದ ಬೆಳೆ ಬೆಳೆಯಬಹುದೆಂಬ ಊಹೆಯೇ ಹಾಸ್ಯಾಸ್ಪದವಾಗಿದೆ. ಶ್ರೀಮಂತಿಕೆಯ ಹಿನ್ನೆಲೆಯವರ ಆಂಗ್ಲ ಮಾಧ್ಯಮಕ್ಕೆ ಸಾಟಿಯಾಗಿ ನಿಲ್ಲಲು ಸರ್ಕಾರಿ ಶಾಲೆಯ ಆಂಗ್ಲ ಮಾಧ್ಯಮದ ಮಕ್ಕಳಿಗೂ ಶ್ರೀಮಂತಿಕೆಯ ಹಿನ್ನೆಲೆ ಸೃಷ್ಟಿಸಲು ಸರ್ಕಾರವು ಮುಂದಾಗುತ್ತದೆಯೆ? ಹಾಗಿದ್ದರೆ, ಆರನೆಯ ತರಗತಿಯಿಂದೇಕೆ ಆಂಗ್ಲ ಮಾಧ್ಯಮ? ಮೊದಲನೆ ತರಗತಿಯಿಂದಲೇ ಆಗಬಹುದಲ್ಲವೆ? ಅದಕ್ಕೆ ಸಂವಿಧಾನವು ಅಡ್ಡಿಯಾಗಿದೆ ಎಂದಾದರೆ ಖಾಸಗಿ ಶಾಲೆಗಳಿಗೆ ಭಾರತದ ಸಂವಿಧಾನವು ಅನ್ವಯವಾಗುವುದಿಲ್ಲವೆಂದು ತಿಳಿಯಬೇಕೆ? ಏಕರೂಪ ಶಿಕ್ಷಣವನ್ನು ರೂಪಿಸಿಕೊಳ್ಳುವುದು ನಮ್ಮ ಎಂದಿನ ಅವಶ್ಯಕತೆ, ಆದರೆ ಅದನ್ನು ಖಾಸಗಿಯವರ ಆಣತಿಯಂತೆ ರೂಪಿಸಹೊರಡುವುದು ಶಿಕ್ಷಣವನ್ನು ನೀಡುವ ವೈಜ್ಞಾನಿಕ ವಿಧಾನವಲ್ಲ, ಇದರಲ್ಲಿ ಸಾಂಸ್ಕೃತಿಕ ಪ್ರಮೇಯಗಳ ಪ್ರಶ್ನೆಯೂ ಇದೆ. ಇದನ್ನೆಲ್ಲಾ ಗಮನಿಸಿಯೇ ಸಂವಿಧಾನ ಮತ್ತು ಕೊಠಾರಿ ಆಯೋಗ ಒಂದು ವಿಧಿವತ್ತಾದ ಶಿಕ್ಷಣ ನೀತಿಯನ್ನು ಬೆಂಬಲಿಸಿ ಪ್ರಕಟಿಸಿದ್ದು. ''ಜಾಗತೀಕರಣದ ಇಂದಿನ ದಿನಗಳಲ್ಲಿ ಸಂವಿಧಾನ ಮತ್ತು ಶಿಕ್ಷಣ ನೀತಿ ನಮ್ಮ ವ್ಯವಸ್ಥೆಗೆ ಇಂಬುಕೊಡಬೇಕಾಗಿಲ್ಲ, ಇಂಬುಕೊಡಲಾರದು'', ಎಂಬುವವರ ಮಾನಸಿಕ ಸ್ಥಿತಿಯೇ ಬೇರೆ, ''ಸಂವಿಧಾನ ಮತ್ತು ವೈಜ್ಞಾನಿಕ ಶಿಕ್ಷಣ ನೀತಿ ನಮ್ಮ ಅನಿವಾರ್ಯತೆ'' ಎನ್ನುವ ಮಹಾಜನತೆಯ ಬುದ್ಧಿಭಾವವೇ ಬೇರೆ.

ಇಂದಿನ ತಾಕಲಾಟವು ಇದನ್ನು ಕೇಂದ್ರೀಕರಿಸಿದೆ ಎಂಬುದು ಅತ್ಯಂತ ಮೂಲಭೂತವಾದ ಸತ್ಯ.

ಈ ತಿಂಗಳು (೩ನೇ ಪುಟದಿಂದ)

ಶಿಖಂಡಿಯನ್ನು ನೆನೆಸಿಕೊಂಡು ಮನಮೋಹನ ಸಿಂಗರನ್ನು ಆ ಪಾತ್ರದೊಡನೆ ಸಮೀಕರಿಸಿದರು. ಕೇಂದ್ರದ ಕಾಂಗ್ರೆಸ್ ಸರ್ಕಾರದ ಉಚ್ಚ ಮತ್ತು ಭ್ರಷ್ಟ ಮಂತ್ರಿಗಳು ಸಭ್ಯ ಮನಮೋಹನ ಸಿಂಗ್ ಎಂಬ ಶಿಖಂಡಿಯನ್ನು ಮುಂದಿಟ್ಟು ಕೊಂಡು ತಮ್ಮ ಲೂಟಿಯ ಧಂಧೆ ನಡೆಸುತ್ತಿದ್ದಾರೆ, ಹಾಗೆ ಲಂಚಕೋರರಾದ ಮಂತ್ರಿಗಳಿಗೆ ಸಿಂಗ್ ಒಂದು ಗುರಾಣಿ ಯಂತಿದ್ದಾರೆ, ಎಂಬುದು ಪ್ರಶಾಂತಭೂಷಣ್ ಆಪಾದನೆಯ ತಿರುಳು. ಸಿಂಗ್ ಸಭ್ಯರೋ ಅಲ್ಲವೋ ಎಂಬುದಕ್ಕೆ ಪುರಾವೆಗಳು ಅನಗತ್ಯ. ವಿಶ್ವ ಬ್ಯಾಂಕಿನ ವಕ್ತಾರ, ಒಬಾಮ-ಹಿಲರಿ ಆಜ್ಞಾಧಾರಕ, ಎಂಬ ವಿಶೇಷಣಗಳು ಸಭ್ಯತೆಯ ಲಕ್ಷಣಗಳಾದರೆ ಅಸಭ್ಯತೆ ಇನ್ನೆಷ್ಟು ಪಾತಕ ವಾಗಿರುತ್ತದೆಂಬುದು ಊಹೆಗೆ ನಿಲುಕದು. ಅದಿರಲಿ, ಸಮಕಾಲೀನ ರಾಜಕೀಯ ವ್ಯಕ್ತಿಯೊಬ್ಬರಿಗೆ ಪೌರಾಣಿಕ ಲೇಪ ಸೊಗಸುತ್ತದೆಂದು ಭಾವಿಸಿದ ಪ್ರಶಾಂತಭೂಷಣ್ ತಾವೇ ಅಪಹಾಸ್ಯಕ್ಕೀಡಾಗಿದ್ದಾರೆ. ಭೀಷ್ಮ ಪಿತಾಮಹನನ್ನು ರಣರಂಗದಿಂದ ಹೊರಗಿಡಲು ಪಾಂಡವರು ಶಿಖಂಡಿ ಯನ್ನು ತಮ್ಮ ಸೈನ್ಯದ ಮುಂದಿರಿಸಿಕೊಂಡರೆಂಬುದು ಮಹಾಭಾರತದ ಕತೆ. ತಾನು ವೀರ, ಎಂದಿಗೂ ನಪುಂಸಕರ ವಿರುದ್ಧ ಸೆಣೆಸಲು ಮುಂದಾಗುವುದಿಲ್ಲ, ಎಂದು ಭೀಷ್ಮ ಎಂದೋ ಶಪಥ ಮಾಡಿದ್ದುದು ಪಾಂಡವರಿಗೆ ಗೊತ್ತಿತ್ತು; ಆದ್ದರಿಂದ ಅವರು ಅವನನ್ನು ಅಸ್ತ್ರವಾಗಿ ಬಳಸಿಕೊಂಡರು. ಎರಡು ಲಿಂಗಗಳಲ್ಲಿ ಒಂದಕ್ಕೆ ಸೇರದಿದ್ದವರ ಬಗೆಗಿನ ಅವಹೇಳನದ ಪರಂಪರೆ ಇಲ್ಲಿದೆ. ಪ್ರಶಾಂತ್ ಪುರಾಣದ ಪ್ರವಾಹದಲ್ಲಿ ಕೊಚ್ಚಿಹೋಗುವುದು ಹೇಗೆಂದು ಗಮನಿಸಿ : ಶಿಖಂಡಿಯು 'ಧರ್ಮಾತ್ಮ' ಪಾಂಡವರ ಪಕ್ಷದವನು, ಭೀಷ್ಮ 'ದುರಾತ್ಮ' ಕೌರವರ ನೇತಾರ. ಅಂದರೆ, ಮನಮೋಹನ ಸಿಂಗ್ 'ಧರ್ಮಾತ್ಮ'ರ ರಕ್ಷಕ, ಭ್ರಷ್ಟರ ಗುರಾಣಿಯಲ್ಲ. ಶಿಖಂಡಿಯನ್ನು ಎದುರಿಸದೆ ಹಿಂದೆಗೆದ ಭೀಷ್ಮ ಶಸ್ತ್ರಸಂನ್ಯಾಸ ಮಾಡಿ ಶರಶಯ್ಯೆಯಲ್ಲಿ ಮಲಗಿದ, ಉತ್ತರಾಯಣ ಪುಣ್ಯಕಾಲ ಬಂದಾಗ ಪ್ರಾಣತ್ಯಾಗ ಮಾಡುವುದಾಗಿ ನಿರ್ಧರಿಸಿದ. ಹಾಗಿದ್ದರೆ 'ಅಣ್ಣಾ ತಂಡ' ಏನು ಮಾಡಬೇಕೆಂದು ಪ್ರಶಾಂತ ಭೂಷಣರ ಅಭಿಪ್ರಾಯ ? ಸಾವಿನ ನಿರೀಕ್ಷೆಯಲ್ಲಿ ಕಾಲ ದೂಡಬೇಕು, ಯಾರಾದರೂ ಉಪದೇಶ ಕೇಳಲು ಮುಂದಾದರೆ ಸಾಯುವವರೆಗೂ ಉಪದೇಶ ನೀಡುತ್ತಿರಬೇಕು, ಎಂದು. ಒಂದರ್ಥದಲ್ಲಿ ಅದು ಯಥಾರ್ಥವೇ ಇರಬೇಕು, ಏಕೆಂದರೆ ಸ್ವಂತದ ಸಂಘಟನಾ ಸಾಮರ್ಥ್ಯ ಇಲ್ಲದವರು ಬೇರೆಯವರಿಗೆ ಉಪದೇಶ ನೀಡುವ ಸ್ವಾತಂತ್ರ್ಯದಲ್ಲಿ ತೇಲಾಡುತ್ತಾರೆ.

* * *

ಯಥೇಚ್ಛವಾಗಿ ಕುಣಿಯುವ (ಕುಡಿಯುವ ?) ಪಟು ಶಾರುಖ್ ಖಾನ್ ಮಮತಾ ದೀದಿಯ ಪಶ್ಚಿಮ ಬಂಗಾಳಕ್ಕೆ 'ಸೂಡು', ಅಂದರೆ ಕಾದ ಕಬ್ಬಿಣದಿಂದ ಮೂಡಿಸಿದ ಮುದ್ರೆ. 'ಬ್ರಾಂಡ್ ಅಂಬಾಸಿಡರ್'ನಲ್ಲಿ 'ಬ್ರಾಂಡ್'ನ ಒಂದರ್ಥ ಅದು. ಮುಂಬಯಿಯ ವಾನ್‌ಖೇಡೆ ಸ್ಟೇಡಿಯಂನಿಂದ ಹೊರದೂಡಲ್ಪಟ್ಟ ಈ ಮಹಾನಟನಿಗೆ ಕೋಲ್ಕತಾದ ಈಡನ್ ಗಾರ್ಡನ್‌ನಲ್ಲಿ ಅದ್ದೂರಿ ಸ್ವಾಗತವೆಂದರೆ ಅದು ಅಸಾಮಾನ್ಯವೇ. ಮಮತಾ ಅವರಿಗೆ ಹೀಗೊಂದು 'ಬ್ರಾಂಡ್' ಏಕೆ ಬೇಕಾಯಿತೋ ತಿಳಿಯದು, ಆದರೆ ಅವನ ಮಾಲಿಕತ್ವದಲ್ಲಿರುವ ಆಟಗಾರರ ತಂಡ ಪಂದ್ಯವೊಂದರಲ್ಲಿ ಗೆದ್ದಾಗ ದೀದಿಗೆ ಎಲ್ಲಿಲ್ಲದ ಉತ್ಸಾಹ ಮತ್ತು ಶ್ರೇಯಸ್ಸು ಉಕ್ಕಿಬಂತು. ಲಾಠಿ ಏಟು ತಿಂದಾದರೂ ಸರಿ, ಸ್ಟೇಡಿಯಂಗೆ ಬಂದು ತಮ್ಮ 'ಬ್ರಾಂಡ್' ನಟ-ಮಾಲೀಕನನ್ನು ನೋಡಲು ಕೋಲ್ಕತಾದ ನಾಗರಿಕರಿಗೆ ಅವರು ಔತಣದ ಆಹ್ವಾನ ನೀಡಿದರು. 'ಎತ್ತಣ ಮಾಮರ - ಎತ್ತಣ ಕೋಗಿಲೆ' ಎಂದು ಹೇಳಿ ಶರಣರನ್ನು ಅವಮಾನಿಸುವುದು ಬೇಡ; ಇಲ್ಲದಿದ್ದರೆ ಶಾರುಖ್-ಕೋಲ್ಕತಾ ಬಾದರಾಯಣ ಸಂಬಂಧವನ್ನು ಹಾಗೆ ನಿರೂಪಿಸಬಹುದಿತ್ತು. ''ನಮ್ಮದು ಬದರಿ ವೃಕ್ಷ, ನಿಮ್ಮದು ಬದರಿ ತರು; ಬಾದರಾಯಣ ಸಂಬಂಧದಲ್ಲಿ ನಾವು ನಾವೇ, ನೀವು ನೀವೇ'' ಎಂಬಂತಹ ನಂಟು ಕೋಲ್ಕತಾ ಮತ್ತು ಶಾರುಖ್‌ನದು. ಮುಡಿಗೆ ಸಿಗಿಸಿಕೊಳ್ಳಲು ಇನ್ನಾವ ಗರಿಯನ್ನೂ ಶೋಧಿಸದೆ ದಾರಿ ಕಾಣದಾದ ಆಕೆ ನಿಜಾರ್ಥದಲ್ಲಿ ಕಾಂದಿಶೀಕಳು. ಯಾವ ದಾರಿ ಹಿಡಿಯ ಬೇಕೆಂದು ತಿಳಿಯದೆ ಮೂಢನಾದವನಿಗೆ 'ಕಾಂದಿಶೀಕ' ಎಂಬ ಪದವನ್ನು ಸಂಸ್ಕೃತದಲ್ಲಿ ಬಳಸುತ್ತಾರೆ. ಶಾರುಖ್ ತಂಡ ಗೆದ್ದದ್ದು ದೀದಿಗೆ ದಾರಿದೀವಿಗೆ ಎನಿಸಿಬಿಟ್ಟಿತು. ಆದ್ದರಿಂದ ಬೀಭತ್ಸ ಎನಿಸುವ ಮಟ್ಟದಲ್ಲಿ ಆಕೆ ಕ್ರಿಕೆಟಿಗರಿಗೆ ಚಿನ್ನದ ಸರ ಹಾಕಿದರು, ಪದಕ ತೊಡಿಸಿದರು, ಸ್ವರ್ಗಕ್ಕೆ ಮೂರು ಗೇಣು ಎಂದು ಹಿರಿಹಿಗ್ಗಿದರು. ಸಮಾರಂಭಕ್ಕೆ ರಾಜ್ಯಪಾಲ ನಾರಾಯಣನ್‌ರನ್ನೂ ಹಿಡಿದು ತಂದಿದ್ದು ಆಕೆಯ ಪ್ರತಿಭೆಯ ಸೂಚನೆ. ಒಟ್ಟಿನಲ್ಲಿ ಪಶ್ಚಿಮ ಬಂಗಾಲದ 'ಪೊರಿಬೊರ್ತನ್' (ಪರಿವರ್ತನೆ)ಗೆ ನಾಂದಿ ಹಾಡಿದಂತಾಯಿತು. ಮಾಲೀಕರಲ್ಲಿ ಶಾರುಖ್ ಮುಂಬೈ ಅವನು, ಜೂಹಿ ಚಾವ್ಲ ಗುಜರಾತಿನವಳು. ಇಡೀ ಶಾರುಖ್ ತಂಡದಲ್ಲಿ ಒಂದೇ ಒಂದು ಬಂಗಾಲಿ ಪಿಂಡವಿಲ್ಲ, ಅಂದರೆ ಯಾವ ಬಂಗಾಲಿ ಆಟಗಾರನೂ ಇಲ್ಲ. ಹತಾಶರಾದ ಮಮತಾ ಬ್ಯಾನರ್ಜಿಯವರ ಬಾಲಿಶತ್ವಕ್ಕೆ ಪಾರವಿಲ್ಲ. ಮೂರ್ತ ಸನ್ನಿವೇಶದ ಕರಾಳ ಇರವನ್ನು ಮರೆಸಲು ಕ್ರಿಕೆಟ್ ಒಂದು ಸಾಧನವಾಗುತ್ತಿರುವುದು ನಮ್ಮ ಬೌದ್ಧಿಕ ದುರಂತ, ನಮ್ಮ ರಾಷ್ಟ್ರೀಯ ಆಶಯಗಳಿಗೆ ತಗುಲಿರುವ ಅರ್ಬುದ ರೋಗ. ಜೂಜಾಡಲು ಇನ್ನೊಂದು ಮಾರ್ಗದ ಸೃಷ್ಟಿಯಾಗಿದೆ. ಅದರಲ್ಲಿ ವಿಜೃಂಭಣೆಯ ಸಂದರ್ಭ ಎಲ್ಲಿಯದು ?

* * *

ಇನ್ನು ಮುಂದೆ ಪಠ್ಯಪುಸ್ತಕಗಳನ್ನು ರಾಜಕಾರಣಿಗಳೇ ಬರೆದರೆ ಒಳಿತಾದೀತು. ಜನಸಾಮಾನ್ಯರ ಅಗತ್ಯತೆಗಳಿಗೆ ಸ್ಪಂದಿಸಿ ಅವರ ಆಶೋತ್ತರಗಳನ್ನು ಪೂರೈಸುತ್ತಿರುವಂತೆಯೇ ಈ ಮಹಾನುಭಾವರು ವಿದ್ಯಾರ್ಥಿಗಳು ಏನು ಓದಬೇಕು, ಏನು ಕಲಿಯಬೇಕು ಎಂದು ನಿರ್ಧರಿಸಿದರೆ ಆದೀತು. ಅಂಥ ದಿನವೂ ಬಂದರೆ ಆಶ್ಚರ್ಯ ಪಡಬೇಕಾಗಿಲ್ಲ, ಏಕೆಂದರೆ ಇದುವರೆಗೆ ಇತಿಹಾಸದ ಪುಟಗಳನ್ನು ಹರಿದು ಚಿಂದಿಮಾಡಿ ಆಯಿತು. ಈಗ ಅದು ಇತರ ವಿಷಯಗಳಿಗೂ ವ್ಯಾಪಿಸುತ್ತಿದೆ. ನಮ್ಮ ವಿದ್ಯಾರ್ಥಿಗಳ ಜ್ಞಾನವರ್ಧನೆಗೆ ಬೇಕಾದ್ದನ್ನು ಶಿಕ್ಷಣ ವೇತ್ತರು, ಅಧ್ಯಾಪಕರು ನಿರ್ಧರಿಸುತ್ತಿದ್ದರು ಮತ್ತು ವಿಷಯತಜ್ಞರಿಂದ ಬರೆಸುತ್ತಿದ್ದರು. ಈಗ ಅದಕ್ಕೂ ಸಂಚಕಾರ ಬಂದಿದ್ದಾಯಿತು. ಏನು ಬರೆಯಬೇಕು, ಬರೆಯಬಾರದು, ಎಲ್ಲಿಂದ ಆಕ್ಷೇಪ ಬಂದೀತು ಎಂಬ ಭಯದಲ್ಲಿ ಪಠ್ಯಪುಸ್ತಕಗಳ ಗುಣಮಟ್ಟ ಕುಸಿಯುತ್ತಿರುವುದನ್ನು ಕಾಣುತ್ತಿದ್ದೇವೆ. ಸರಕಾರ ತಯಾರಿಸುವ ಪಠ್ಯಪುಸ್ತಕಗಳಲ್ಲಿ ಕಂಡುಬರುವ ದೋಷಗಳನ್ನು ಓದುವುದೇ ಒಂದು ಸ್ವಾರಸ್ಯ. ಈಗ ಪಠ್ಯಪುಸ್ತಕಗಳು ಸಂಸತ್ತು, ಶಾಸನಸಭೆಗಳಲ್ಲಿ ಗಲಾಟೆಗೆ ಸರಕಾಗುತ್ತಿದೆ. ಇವರೆಲ್ಲ ಸರ್ವಜ್ಞರಾಗಿದ್ದಾರಲ್ಲವೆ ? ಈಚೆಗೆ ನಮ್ಮ ಅರವತ್ತು ತುಂಬಿದ ಪಾರ್ಲಿಮೆಂಟಿನಲ್ಲಿ ವ್ಯಂಗ್ಯಚಿತ್ರವೊಂದರ ಕುರಿತು ನಡೆದ ಖಾಲಿ ಗಲಾಟೆ ತಿಳಿದಿರುವ ವಿಷಯ. ಎನ್‌ಸಿಇಆರ್‌ಟಿ ಪ್ರಕಟಿಸಿದ್ದ ಪಠ್ಯಪುಸ್ತಕವೊಂದು ಸಂವಿಧಾನ ಸಭೆ ಕುರಿತಾಗಿ ಪ್ರಕಟಿಸಿದ್ದ ವ್ಯಂಗ್ಯ ಅವಹೇಳನಕಾರಿ ಎಂದು ಬೊಬ್ಬೆ. ಈ ವ್ಯಂಗ್ಯಚಿತ್ರ ಸುಮಾರು ಆರು ದಶಕಗಳ ಹಿಂದಿನದು. ಈಗಿನವರಿಗೆ ಪ್ರಖ್ಯಾತವಾದ ಶಂಕರ್ಸ್ ವೀಕ್ಲಿ ಎಂಬ ವ್ಯಂಗ್ಯಚಿತ್ರ ಮಾಸ ಪತ್ರಿಕೆ ಅತ್ಯಂತ ಜನಪ್ರಿಯವಾಗಿತ್ತು ಎಂಬುದು ತಿಳಿದಿದೆಯೋ ಇಲ್ಲವೋ. ಭಾರತದಲ್ಲಿ ಚಾಲ್ತಿಯಲ್ಲಿದ್ದ ಮೊದಲ ವ್ಯಂಗ್ಯಚಿತ್ರ ಪತ್ರಿಕೆ ಅದು. ನಮ್ಮ ವಿದ್ಯಾರ್ಥಿಗಳು ಅದನ್ನು ತಿಳಿದುಕೊಳ್ಳಬೇಕಾಗಿಲ್ಲವೇನೋ. ಅದರ ಹಿಂದೆಯೇ ತಮಿಳುನಾಡಿನ ದ್ರಾವಿಡ ಪಾರ್ಟಿಗಳು ಖ್ಯಾತ ವ್ಯಂಗ್ಯಚಿತ್ರಕಾರ ಆರ್. ಕೆ. ಲಕ್ಷ್ಮಣ ಅವರು ತಮಿಳುನಾಡಿನಲ್ಲಿ ಹಿಂದಿ ವಿರೋಧಿ ಆಂದೋಳನದ ಬಗ್ಗೆ ರಚಿಸಿದ ವ್ಯಂಗ್ಯಚಿತ್ರ ಕುರಿತು ತಕರಾರು ತೆಗೆದಿದ್ದಾರೆ. ಅದೂ ಕೂಡ ಐದು ದಶಕಗಳಷ್ಟು ಹಳೆಯದು. ಹೇಗಿದೆ ನೋಡಿ ಪಠ್ಯಪುಸ್ತಕಗಳ ಅವಾಂತರ.

ಸೃಜನಶೀಲ ಬರೆಹಗಳಿಗೇ ಬರಹಗಾರರಿಗೇ ಕುತ್ತು ಬರುತ್ತಿದೆ : ಸ್ವಯಂಘೋಷಿತ ಸಂಸ್ಕೃತಿ ರಕ್ಷಕರು, ವಿವಿಧ ಸೇನೆಗಳಿಗೆ ಸೇರಿದ ಪಂಥೀಯರಿಂದ. ಜನ ಏನನ್ನು ಓದಬೇಕು, ಲೇಖಕರು ಏನು ಬರೆಯಬೇಕು ಎನ್ನುವುದನ್ನು ಇವರು ಬೀದಿಗಿಳಿದು ನಿರ್ಧರಿಸುತ್ತಿದ್ದಾರೆ. ಯಾವ ಪುಸ್ತಕವನ್ನು ಸರಕಾರ ನಿಷೇಧಿಸಬೇಕು, ಯಾವ ಲೇಖಕರು, ಕಲಾವಿದರನ್ನು ಈ ನೆಲಕ್ಕೆ ಬರಮಾಡಿಕೊಳ್ಳಕೂಡದು ಎಂದು ತಾಕೀತುಮಾಡುವವರು ಈ ಪಂಥೀಯರೇ ಆಗಿ ಬಿಟ್ಟಿದ್ದಾರೆ. 'ಹೊಸತು' ಈ ಬಗ್ಗೆ ವಿವರವಾಗಿ ಬರೆದಿದೆ. ಇತ್ತೀಚಿನ ಪ್ರಕರಣ ಅಂತರರಾಷ್ಟ್ರೀಯ ಖ್ಯಾತ ಕಲಾವಿದ ಎಂ. ಎಫ್. ಹುಸೇನರು ಪರದೇಶಿಯಾಗಿ ತೀರಿಕೊಂಡು ವರ್ಷವಾಯಿತು. ಆ ಸಂದರ್ಭದಲ್ಲಿ ಏರ್ಪಡಿಸಿದ್ದ ಅವರ ಚಿತ್ರಗಳ ಪ್ರದರ್ಶನ ಹಾಗೂ ಸಭೆಯನ್ನು ಇಂಥ 'ದೇಶಭಕ್ತರ' ವಿರೋಧದಿಂದ ರದ್ದುಗೊಳಿಸಲಾಯಿತು. ಸೃಜನಶೀಲರ ಸ್ವಾತಂತ್ರ್ಯ ಇಂಥವರಿಂದ ಹರಣ ವಾಗುವುದಕ್ಕೆ ಅವಕಾಶ ನೀಡಬಾರದು.

* * *

ಬೆಂಗಳೂರಿನ ಕಾರ್ಪೊರೇಷನ್ ಈಗ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯಾಗಿದೆ. ಚಿಕ್ಕದಾಗಿ ಅದನ್ನು ಇಂಗ್ಲಿಷಿನಲ್ಲಿ 'ಬಿಬಿಎಂಪಿ' ಎನ್ನುತ್ತಾರೆ. ಕನ್ನಡದಲ್ಲಿ 'ಬೃಬೆಮಪಾ' ಆದೀತು. ಆದರೆ ಅದು ಬಾಯಲ್ಲಿ ಹೊರಳುವುದು ಕಷ್ಟ. ಇರಲಿ. ಈ ಬಿಬಿಎಂಪಿ ಈಗ ದಿವಾಳಿಯ ಅಂಚಿನಲ್ಲಿದೆ. ನಮ್ಮ ರಸ್ತೆ ಗುಂಡಿಗಳು, ಡಾಂಬರು ಕಾಣದ ರಸ್ತೆಗಳು, ಕಸದ ರಾಶಿಗಳು, ದುರ್ವಾಸನೆಯ ರಾಜಕಾಲುವೆಗಳನ್ನು ನೋಡಿದರೆ ಸ್ಥಿತಿ ಗೊತ್ತಾಗುತ್ತದೆ. ಬೆಂಗಳೂರು ನಗರದ ಪ್ರತಿಷ್ಠಿತ ಯುಟಿಲಿಟಿ ಕಟ್ಟಡ, ಇದು ನಗರದ ಹೆರಿಟೇಜ್ ಕಟ್ಟಡ ಗಳಲ್ಲಿ ಒಂದಾಗಿರುವ ಮೇಯೋ ಹಾಲ್ ಬಳಿ ಇದೆ, ಮಹಾತ್ಮಗಾಂಧಿ ರಸ್ತೆಯಲ್ಲಿ; ಇನ್ನೊಂದು ನಗರದಲ್ಲಿ

ಸ್ಥಾಪನೆಗೊಂಡ ಮೊದಲ 'ಷಾಪಿಂಗ್ ಕಾಂಪ್ಲೆಕ್ಸ್', ಜಯನಗರ ಷಾಪಿಂಗ್ ಕಾಂಪ್ಲೆಕ್ಸ್'. ಆಗ ಈ ಜಯನಗರ ಬಡಾವಣೆಯನ್ನು 'ಏಷಿಯಾದ ಅತಿದೊಡ್ಡ ವಸತಿ ಸಮುಚ್ಚಯ' ಎಂದು ಬಣ್ಣಿಸಲಾಗಿತ್ತು. ಈಗ ಬೆಂಗಳೂರು ಎಗ್ರಾಬಿಗ್ರಿಯಾಗಿ ಎಲ್ಲ ದಿಕ್ಕುಗಳಲ್ಲೂ ಹರಡಿಕೊಂಡು ಬೇಕಾದಷ್ಟು ಬಡಾವಣೆಗಳು ಬಂದಿವೆ. ಅದು ಹೋಗಲಿ, ಈ ಎರಡು ಕಟ್ಟಡಗಳನ್ನು 'ಹುಡ್ಕೊ' ಎಂಬ ಇನ್ನೊಂದು ಸರಕಾರಿ ಸ್ಥಾಪಿತ ಸಂಸ್ಥೆಗೆ ಅಡಮಾನ ಮಾಡಲಾಗಿದೆ. ಅಂದರೆ ಬಿಬಿಎಂಪಿ ಎಷ್ಟು ಸಾಲದಲ್ಲಿ ಮುಳುಗಿದೆ ಎಂಬುದು ಗೊತ್ತಾಗುತ್ತದೆ. ಕಾರ್ಪೊರೇಟರುಗಳ ವೇತನ ಹೆಚ್ಚಳ ಸದ್ಯಕ್ಕಿಲ್ಲ, ಅವರ ವಿದೇಶಯಾತ್ರೆಯೂ ಮುಂದೆ ಹೋಗಿದೆ ನಾನಾ ಕಾರಣಗಳಿಗೆ. ಆದರೆ ದುಂದುವೆಚ್ಚವನ್ನು ಮಾತ್ರ ಕಡಿಮೆ ಮಾಡಿಲ್ಲ. ಈಗ ನಗರಪಾಲಿಕೆ ಮೇಯರ್ ಮತ್ತು ಡೆಪ್ಯೂಟಿ ಮೇಯರ್‌ಗಳು, ಸ್ಥಾಯಿ ಸಮಿತಿಗಳ ಅಧ್ಯಕ್ಷರುಗಳು ಓಡಾಡಲು ಹೊಸದಾಗಿ 'ಇನ್ನೋವಾ' ಕಾರುಗಳನ್ನು ಕೊಂಡುಕೊಂಡಿದೆ. ಈ ಐಷಾರಾಮಿ ಕಾರುಗಳ ಬೆಲೆ ದುಬಾರಿ, ಹಲವು ಲಕ್ಷಗಳು. ಆಡಳಿತೆ ನೀಡುವ ಸಮಜಾಯಿಷಿ: ಇವೆಲ್ಲ ಡೀಸೆಲ್ ಕಾರುಗಳಾದ್ದರಿಂದ ಪೆಟ್ರೋಲ್ ಉಳಿತಾಯ! ಈ ದುಂದುವೆಚ್ಚದ ಹೊರೆಯನ್ನು ನಗರವಾಸಿಗಳು ಹೊರಬೇಕು.

* * *

ನಮ್ಮ ನಾಡಿನಲ್ಲಿ ಡೋಂಗಿ ಸ್ವಾಮಿಗಳಿಗೆ ಕಡಿಮೆ ಏನಿಲ್ಲ. ಕಾವಿ ಧರಿಸಿ ಕೊರಳಲ್ಲಿ ಮಾಲೆ ಧರಿಸಿರುವವರೆಲ್ಲ ದೇವಾಂಶ ಸಂಭೂತರೆ. ಇಂಥವರ ಸಂಖ್ಯೆ ಬೆಳೆಯುತ್ತಲೇ ಇದೆ, ಹಾಗೆಯೇ 'ಭಕ್ತಾದಿಗಳ' ಸಮೂಹವೂ ಕೂಡ. ಇವರೆಲ್ಲ ಯಾವ ಬಗೆಯಲ್ಲೋ ಸಾಕಷ್ಟು ಜಾಗವನ್ನು ಸರಕಾರದಿಂದ ಮಂಜೂರು ಮಾಡಿಸಿಕೊಂಡು ಬಿಡುತ್ತಾರೆ. ಬೆಂಗಳೂರಿನ ಸುತ್ತಮುತ್ತ ಇಂಥ ಆಶ್ರಮಗಳು ಹಲವು ಇವೆ. ಅವರವರ ಅಂತಸ್ತಿಗೆ ತಕ್ಕ ಹಾಗೆ, ಹಿಂಬಾಲಕರ ಸ್ಥಿತಿಗತಿಗಳಿಗೆ ಅನುಸಾರವಾಗಿ ಆಶ್ರಮಗಳನ್ನು ಕಟ್ಟಿ ಕೊಂಡಿರುತ್ತಾರೆ. ಪ್ರಭಾವಿಗಳು ಸಮೀಪದ ಸರಕಾರಿ ಭೂಮಿಯನ್ನೋ, ರೈತಾಪಿಗಳಿಗೆ ಸೇರಿದ ಜಮೀನನ್ನೋ ಕಬಳಿಸಿರುತ್ತಾರೆ. ಮಾಧ್ಯಮಗಳಲ್ಲಿ, ಪತ್ರಿಕೆಗಳಲ್ಲಿ ಇವು ವರದಿಯಾಗುತ್ತಲೇ ಇರುತ್ತವೆ. ಕೆಲವು ಆಶ್ರಮಗಳು ಅಕ್ರಮಗಳಿಗೆ ಗೂಡಾಗಿರುತ್ತವೆ. ಅಂಥವರ ಪೈಕಿ ಬೆಂಗಳೂರಿನ ಹೊರಗೆ ಬಿಡದಿ ಸಮೀಪದಲ್ಲಿರುವ ನಿತ್ಯಾನಂದ ಮತ್ತು ಅವನು ಕಟ್ಟಿಕೊಂಡಿರುವ ಆಶ್ರಮ ಒಂದು. ಈತ ಹಗರಣದಲ್ಲಿ ಸಿಕ್ಕಿಹಾಕಿಕೊಂಡು ಪೊಲೀಸರ ಅತಿಥಿಯಾಗಿರುವುದು ಎರಡನೇ ಸಲ. ಈತನ ಬಂಧನಕ್ಕೆ ಸ್ವತಃ ಸಿ.ಎಂ. ಸದಾನಂದ ಗೌಡರೇ ಆದೇಶ ನೀಡಿದ್ದಾರಂತೆ. ಯಾವ ಕಾನೂನಿನಡಿ ಎಂಬುದನ್ನು ನ್ಯಾಯವಾದಿಗಳು ಹೇಳಬೇಕು. ಈ ನಿತ್ಯಾನಂದ ಈಚೆಗೆ ಬಂದವನು. ಇಪ್ಪತ್ತೊಂದನೇ ಶತಮಾನದ ಅವತಾರಿ. ಇನ್ನೂ ಚಿಗುರುಮೀಸೆಯ ಯುವಕ. ಇಪ್ಪತ್ತೆರಡು ಎಕರೆ ಜಮೀನಿನಲ್ಲಿ ಹರಡಿಕೊಂಡಿದ್ದಾನೆ. ಸಾಕಷ್ಟು 'ಭಕ್ತಾದಿ ಗಳನ್ನು' ಸಂಪಾದಿಸಿದ್ದಾನೆ. ಸುಮಾರು ಏಳೆಂಟು ವರ್ಷಗಳ ಹಿಂದೆ ಈತನ ಆಶ್ರಮ ಉದ್ಘಾಟನೆಯಾದಾಗ ನಾನು ಆ ಜಾಗದ ಆಸುಪಾಸಿನಲ್ಲಿದ್ದೆ. ಉದ್ಘಾಟನೆ ಅಂದು ಭಾಜಪದ ವರಿಷ್ಠರಾಗಿದ್ದ ಅಡ್ವಾನಿಯವರಿಂದ ಜರಗಿತು. ಸಾಕಷ್ಟು ಭಾಜಪ ನಾಯಕರು, ಆರೆಸ್ಸೆಸ್ ನಾಯಕರು ಸೇರಿದ್ದರು. ಕುತೂಹಲದಿಂದ ನಾನೂ ನೋಡಲು ಹೋಗಿದ್ದೆ. ಈಗ ಪಾಪ ಕಷ್ಟದಲ್ಲಿ ಸಿಕ್ಕಿಕೊಂಡಿದ್ದಾನೆ, ಎರಡು ಬಾರಿ ಕಂಬಿ ಎಣಿಸಿ ಹೊರಬಂದಿದ್ದಾನೆ. ಸಾಕಷ್ಟು ಹಣ ಬಲ ಜನ ಬಲ ಹೊಂದಿರುವ ಈತ ಎಲ್ಲಿಂದ ಬಂದವನು ? ಋಷಿಮೂಲ ನದಿಮೂಲ ಕೆದಕಬಾರದು ಎನ್ನುತ್ತಾರೆ. ಈತ ತಮಿಳುನಾಡಿನ ಮೂಲದವ ಎಂದು ತೋರುತ್ತದೆ, ಅವನ ಅನುಚರರಲ್ಲಿ ತಮಿಳರೇ ಹೆಚ್ಚು. ಕರವೇ ಇವನ ವಿರುದ್ಧ ಕಿಡಿಕಾರಿ ಹಲ್ಲೆ ನಡೆಸಿದ್ದು ಈ ಅನುಮಾನ ಗಟ್ಟಿಗೊಳಿಸಿದೆ. ಕಾನೂನು ಹೋರಾಟ ಶುರು ವಾಗಿದೆ. ಎಲ್ಲಿಗೆ ಮುಗಿಯುತ್ತೊ ನೋಡಬೇಕು. ಅಂದ ಹಾಗೆ ಇಂಥ ಸ್ವಾಮೀಜಿಗಳೆಲ್ಲ ವಿದೇಶಗಳಲ್ಲಿ, ಮುಖ್ಯವಾಗಿ ಅಮೆರಿಕ, ಯೂರೋಪುಗಳಲ್ಲಿ ಹಿಂಬಾಲಕರನ್ನು ಹೊಂದಿರುತ್ತಾರೆ. ಅವರೂ ಕೇವಲ ಮನುಷ್ಯರು ತಾನೆ !

* * *

ಗಾಲಿ ಜನಾರ್ದನ ರೆಡ್ಡಿಯ ಗಾಲಿ ಎತ್ತೆತ್ತ ತಿರುಗೀತೋ ಹೇಳುವಂತಿಲ್ಲ, ಅದನ್ನು ಊಹಿಸಲೂ ಸಾಧ್ಯವಿಲ್ಲ. ಅಕ್ರಮ ಗಣಿಗಾರಿಕೆಯ ಸಂಪಾದನೆ ಎಷ್ಟೆಂದು ಅಂದಾಜು ಮಾಡಲೂ ಆಗುವುದಿಲ್ಲ. ಈತ ಜೈಲಿನಲ್ಲಿ ಇದ್ದುಕೊಂಡೇ ಕಾರುಬಾರು ನಡೆಸುತ್ತಿದ್ದಾನೆ. 'ಜನಾರ್ದನ' ತಾನೆ. ಪೌರಾಣಿಕ ಜನಾರ್ದನ ಹುಟ್ಟಿದ್ದು ಕಾರಾಗೃಹದಲ್ಲೇ. ಈತ ಬೆಳೆದು ಬಲಿತಮೇಲೆ ಜೈಲು ಸೇರಿದ್ದಾನೆ. ಬಳ್ಳಾರಿಯಾಚೆಗೂ ಇವನ ಪ್ರಭಾವ ಪಸರಿಸಿ ನೆರೆಯ ಆಂಧ್ರಪ್ರದೇಶಕ್ಕೂ ವಿಸ್ತರಿಸಿದೆ. ಈತ ಕೋಟಿಗಟ್ಟಲೆ ಹಣ ಹರಿಸಿ ಯಡಿಯೂರಪ್ಪ ಸರಕಾರ ಉಳಿಸಿದ್ದು ಈಗ ಹಳೆಯ ಕತೆ. ಜೈಲಿನಿಂದ ಹೊರಗೆ ಬರಲು ಹರಸಾಹಸ ನಡೆಸುತ್ತಿದ್ದಾನೆ. ವಕೀಲರಿಗೆ ಹಣದ ಹೊಳೆಹರಿಸಿ ಜಾಮೀನಿಗಾಗಿ ಪ್ರಯತ್ನಿಸುತ್ತಿದ್ದಾನೆ. ಇವನ ಭ್ರಷ್ಟತೆಯ ಕಾವು ಈಗ ನ್ಯಾಯಾಲಯದ ಬಾಗಿಲನ್ನೂ ತಟ್ಟಿದೆ. ಲಂಚಕೊಟ್ಟು ಶಾಸಕರನ್ನು ಕೊಂಡುಕೊಂಡ ಈ ರೆಡ್ಡಿ ನ್ಯಾಯಾಧೀಶರನ್ನು ಕೊಳ್ಳಲು ಹೋಗಿ ಕೈ ಸುಟ್ಟು ಕೊಂಡಿದ್ದಾನೆ. ಆಂಧ್ರಪ್ರದೇಶದ ನ್ಯಾಯಾಧೀಶರೊಬ್ಬರಿಗೆ ೬೦ ಕೋಟಿ ರೂ.ಗಳ ಲಂಚ ನೀಡಲು ಏರ್ಪಾಟು ಮಾಡಿದ್ದುದು ಈಗ ಬೆಳಕಿಗೆ ಬಂದಿದೆ. ಈಗ ಆ ಭ್ರಷ್ಟ ನ್ಯಾಯಾಧೀಶ ಮತ್ತು ಈ ಪ್ರಕರಣದಲ್ಲಿ ತೊಡಗಿದ್ದವರೂ ಬಂಧನದಲ್ಲಿದ್ದಾರೆ. ರೆಡ್ಡಿ ಈ ಪ್ರಯತ್ನ ನಡೆಸಿದ್ದು ಜಾಮೀನು ಪಡೆಯಲು. ಈತ ಜೈಲಿನಲ್ಲಿದ್ದುಕೊಂಡೇ ಇಷ್ಟು ಅವ್ಯವಹಾರ ನಡೆಸುತ್ತಿದ್ದರೆ, ಹೊರಗೆ ಬಂದರೇನು ಮಾಡುವನೊ ! ಇಂಥವರು ಖಾಯಂ ಆಗಿ ಕಂಬಿ ಎಣಿಸುತ್ತಿರುವುದೇ ಕ್ಷೇಮ. ಮೊನ್ನೆ ಮೊನ್ನೆ ಬಂದ ಸುದ್ದಿ. ಬಳ್ಳಾರಿಯ ಗಣಿಗಾರಿಕೆ ಪ್ರದೇಶದಲ್ಲಿ ಮೂಟೆಗಟ್ಟಲೆ ನೋಟುಗಳು ದೊರೆತವಂತೆ. ಅದು ಯಾರಿಗೆ ಸೇರಿದ್ದೊ ಪೊಲೀಸರಿಗೆ ಗೊತ್ತಾಗಿಲ್ಲ. ಈ ಭೂಗರ್ಭದಲ್ಲಿ ಇನ್ನೆಷ್ಟು ಅಕ್ರಮ ಹಣ ಹುದುಗಿದೆಯೋ.

* * *

ಇನ್‌ಫೋಸಿಸ್ ನಾರಾಯಣಮೂರ್ತಿಗಳು ರಾಷ್ಟ್ರದ ಅಧ್ಯಕ್ಷರಾಗುವ ಅವಕಾಶ ಬರಲೇ‌ಇಲ್ಲ. ಅದರಿಂದ ಅವರೂ ಸೇರಿದಂತೆ ಅನೇಕರು ನೊಂದಿದ್ದಾರೆಂದು ಹೇಳುತ್ತಾರೆ. ಅಧ್ಯಕ್ಷರಾಗದಿದ್ದರೇನಂತೆ, ಅವರ ಮಹಾನ್ ಗುಣಗಳು ಮತ್ತು ಕೊಡುಗೆ ಅಪಾರವೆಂದು ಸಮಾಧಾನ ತಂದುಕೊಳ್ಳುವವರೂ ಇದ್ದಾರೆ. ಸೋಮನಾಥ ಚಟರ್ಜಿ ಯಾವುದೇ ದೃಷ್ಟಿಯಿಂದಲೂ ಅಧ್ಯಕ್ಷರಾಗಲು ಮೂರ್ತಿಯ ವರಿಗಿಂತ ಹೆಚ್ಚು ಅರ್ಹರೆಂದು ಬಿಸುಸುಯ್ಯುವವರು ಸಹ ಬಹಳ ಮಂದಿ ಇದ್ದಾರೆ. ಚಟರ್ಜಿ ಎಂದೂ ಮಾಡಲಾರ ದಂತಹ ಕೆಲಸವೊಂದನ್ನು ನಾರಾಯಣಮೂರ್ತಿ ಮಾಡಿದ್ದಾರೆ. ಅದನ್ನು ತಿಳಿದೇ ಮೂರ್ತಿಯವರ ಕೀರ್ತಿ ಕಿರೀಟವನ್ನು ವಿಶ್ಲೇಷಿಸುವುದು ಅಗತ್ಯ. ಅಮೆರಿಕಾದ ಮೋರ್ಗನ್ ಸ್ಟ್ಯಾನ್ಲೆ ಕಂಪನಿ ಹೆಸರು ಕೇಳಿರಬೇಕಲ್ಲ? ಕೇಳಿಲ್ಲದಿರಲು ಹೇಗೆ ಸಾಧ್ಯ ! ಇತ್ತೀಚೆಗಷ್ಟೆ ಈ ಬಂಡವಾಳ ಹೂಡಿಕೆಯ ಅಗ್ರೇಸರ ಕಂಪನಿ ಮತ್ತು ಅಂಥದೇ ಲೇಮನ್ ಬ್ರದರ್ಸ್ ಎಂಬ ಕಂಪನಿ ಅಮೆರಿಕಾದಲ್ಲಿ ಅರ್ಥವ್ಯವಸ್ಥೆಯನ್ನು ಅಲುಗಾಡಿಸಿದ್ದುವಲ್ಲ, ಅದು ದೊಡ್ಡ ಸಮಾಚಾರವಾಗಿತ್ತು. ಮೋರ್ಗನ್‌ಗೆ ಭಾರತದ ಆರ್ಥಿಕ ಸನ್ನಿವೇಶ ಕುರಿತ ಒಂದು ಪರಿಣತ ಅವಲೋಕನ ಬೇಕಿತ್ತಂತೆ. ಆಗ ಮೊದಲು ಅದರ ಕಣ್ಣಿಗೆ ಬಿದ್ದದ್ದು ಮಾನ್ಯ ಮೂರ್ತಿಯವರು. ಅವರು ತಮ್ಮ ವರದಿಯೋ ಲೇಖನವೋ ಏನೋ ಒಂದು ಕಂಪ್ಯೂಟರ್‌ನಲ್ಲಿ ಬರೆದು ಕಳಿಸಿದ್ದಾರೆ. ಅದರ ಸಾರಾಂಶ ಇದು : ಭಾರತದ ಆರ್ಥಿಕ ಸ್ಥಿತಿ ಚಿಂತಾಜನಕವಾಗಿದೆ, ಅದನ್ನು ಸರಿಯಾದ ಕ್ರಮದಿಂದ ಸುಧಾರಿಸುವ ಯತ್ನ ನಡೆಯುತ್ತಿಲ್ಲ; ದೇಶದ ನಿವ್ವಳ ಉತ್ಪಾದನೆ ಕುಸಿದಿದೆ, ಅದನ್ನು ಮೇಲಕ್ಕೆತ್ತಲು ಅಗತ್ಯವಾದ ನೀತಿಯನ್ನು ಅನುಸರಿಸುತ್ತಿಲ್ಲ, ಉದಾರೀಕರಣದ ಪ್ರಕ್ರಿಯೆಯು ನಿರೀಕ್ಷೆಯಂತೆ ಮುಂದೆ ಸಾಗದೆ ಸ್ಥಗಿತಗೊಂಡಿದೆ. ಅದೇ ಕುಸಿತಕ್ಕೆ ಮೂಲ ಕಾರಣ. ವಿದೇಶಿ ಬಂಡವಾಳವು ಹೇರಳವಾಗಿ ಹರಿದು ಬರಲು ಬೇಕಾದ ವಾತಾವರಣ ನಿರ್ಮಿಸಿ ಅದನ್ನು ಸ್ವಾಗತಿಸಿದ್ದರೆ ಇಂತಹ ಬಿಕ್ಕಟ್ಟು ಉಂಟಾಗುತ್ತಿರಲಿಲ್ಲ. ಈಗಲೂ ಭಾರತಕ್ಕಿರುವ ದಾರಿ ಒಂದೇ: ಅದೆಂದರೆ ವಿದೇಶಿ ಬಂಡವಾಳದ ಪ್ರವೇಶಕ್ಕೆ ಅನುವಾಗುವಂತೆ ಭಾರತ ಸರ್ಕಾರವು ಸ್ವಾಗತ ಸಮಿತಿಯಂತೆ ಸಜ್ಜಾಗಬೇಕು.

– ಇದೆಲ್ಲಾ ಅವರೇ ಬಳಸಿದ ಪದಗಳಲ್ಲ, ಆದರೆ ಅದರ ಸಾರ ಅದೇ. ಮೂರ್ತಿಯವರ ಲಾಭದ ಸೆಲೆ ಭಾರತದಲ್ಲಿದೆ, ಆದರೆ ಅವರ ಹೃದಯ ಅಮೆರಿಕಾದಲ್ಲಿ ನಾಟಿದೆ. ಅವರಿಗೆ ನಮ್ಮ ದೇಶದ ಭೂಮಿ ಮತ್ತು ಇಂಜಿನಿಯರುಗಳು ಬೇಕು; ಆದರೆ ಅವನ್ನು ಅಮೆರಿಕಾದ ಲಾಭಕ್ಕಾಗಿ ತೊಡಗಿಸಬೇಕೆಂಬ ಮಹದಾಸೆ ಅವರದು. ಉದಾರೀಕರಣದಿಂದ ಕಳೆದ ಇಪ್ಪತ್ತು ವರ್ಷಗಳಲ್ಲಿ ಯಾರ ಉದರಗಳು ಉಬ್ಬಿ ನಿಂತಿವೆಯೆಂದು ತಿಳಿಯದೇನು ? ವಿದೇಶಿ ಬಂಡವಾಳವು ಲೆಕ್ಕದ ಪುಸ್ತಕ ಗಳಲ್ಲಿ ಜಿ.ಡಿ.ಪಿ.ಯನ್ನು ಹೆಚ್ಚಿಸಿ ತೋರಿಸುತ್ತವೆ, ಆದರೆ ದೇಶದ ಜನರ ತುತ್ತಿನ ಪ್ರಮಾಣದಲ್ಲಿ ಯಾವ ಬದಲಾವಣೆಯೂ ಇರುವುದಿಲ್ಲ. ಬದಲಾವಣೆಯೆಲ್ಲಾ ದೇಶವು ತುತ್ತಿನ ಆಗರವಾಗುವುದರಲ್ಲೇ ಇರುತ್ತದೆ. ಜಿಡಿಪಿ ದೇಶದ ಸರ್ವಸ್ವವಲ್ಲ, ಜನರು ದೇಶದ ಸರ್ವಸ್ವ. ನಾರಾಯಣಮೂರ್ತಿಗಳ ಆರ್ಥಿಕ ''ಸುಧಾರಣೆ'' ಜನರನ್ನು ಇನ್ನೂ ಹೆಚ್ಚು ಸೊರಗಿಸುತ್ತದೆ. ಅಂತಹ ''ಆರ್ಥಿಕ ಪರಿಣತ'' ಮೂರ್ತಿಯವರು ಅಧ್ಯಕ್ಷರಾಗುವು ದಿಲ್ಲವಲ್ಲಾ ಎಂದು ನಾವೇನೂ ಪರಿತಪಿಸಬೇಕಾಗಿಲ್ಲ. ಅವರು ಮೋರ್ಗನ್ ಸ್ಟ್ಯಾನ್ಲೆ ಕಂಪನಿಗೆ ಪಂಪು ಹೊಡೆದು ಬೆಳೆಸಿ ಹಾಲು ಕುಡಿಯಲಿ ! ●




**ಮೇ ಸಂಚಿಕೆ**

ಮೇ ೨೦೧೨ರ 'ಹೊಸತು'ನಲ್ಲಿ ಪ್ರಕಟವಾದ ಡಾ|| ಚಂದ್ರಶೇಖರ ಕಂಬಾರ ಅವರ 'ಶಿಖರ ಸೂರ್ಯ' ಕಾದಂಬರಿ ಬಗ್ಗೆ ಪ್ರೊ|| ಶಿವರಾಮಯ್ಯನವರ ಲೇಖನ ಓದಿದೆ.

ತುಂಬ ವ್ಯವಧಾನಶೀಲತೆಯಿಂದ ಇಡೀ ಕಾದಂಬರಿಯನ್ನು ಓದಿ, ಓದಿಸಿಕೊಳ್ಳಲಾರದ ಕೃತಿಯ ಬಗ್ಗೆ, ಸಾಮಾನ್ಯನಿಗೂ ತಿಳಿಯುವಂತೆ ವಿವರಣಾತ್ಮಕವಾಗಿ ಬರೆದಿದ್ದಾರೆ. ಕಾದಂಬರಿ ವ್ಯವಧಾನದಿಂದ ಓದಲಾಗದವರಿಗೆ ತಿಳಿಯುವುದು ಕಷ್ಟ. ತುಂಬ ಗೊಂದಲವುಂಟುಮಾಡುವ ಗಂಭೀರವೆನಿಸುವ ಈ ಕಾದಂಬರಿಯನ್ನು ಜನಪದೀಯ ರೀತಿಯಲ್ಲಿ ಪೂರ್ಣ ತಿಳಿಯುವಂತೆ ಬರೆದಿರುವುದು ಮೆಚ್ಚುವಂಥದ್ದು. ಜೊತೆಗೆ, ತಮ್ಮ ಚಿಂತನೆಯೊಂದಿಗೆ - ವಿಮರ್ಶೆಯೊಂದಿಗೆ ಕಾದಂಬರಿಯ ವಸ್ತುಸ್ಥಿತಿಯ ನಾಯಕನ ನಿಲುವಿನ ಬಗ್ಗೆ ತುಂಬ ಗಂಭೀರವಾಗಿ ಚಿಂತನೆ ಮಾಡಿದ್ದಾರೆ. ಕಾದಂಬರಿ ಕುರಿತು ಈವರೆಗೆ ಬಂದಿರುವ ವಿಮರ್ಶೆಗಳನ್ನು ಕೂಡ ತಲಸ್ಪರ್ಶಿಯಾಗಿ ಕೈಯಾಡಿಸಿ ತಮ್ಮದೇ ಆದ ತಿಳಿವಳಿಕೆಯನ್ನು ವ್ಯಕ್ತಪಡಿಸಿದ್ದಾರೆ. ಈ ಪ್ರಸ್ತಾಪದಿಂದ ಓದಲಾರದವರನ್ನು ಈ ಕಾದಂಬರಿಯನ್ನು ಓದುವ ಸಾಹಸಕ್ಕೆ ಇಳಿಸಿದ್ದಾರೆ.

ಇದುವರೆಗೆ ಕಾದಂಬರಿಯನ್ನು ಇಷ್ಟು ವಿವರವಾಗಿ ಮತ್ತು ಸ್ಪಷ್ಟವಾಗಿ ನಿರ್ಭೀತಿಯಿಂದ ಸ್ಪಷ್ಟಪಡಿಸಿದ್ದು ಮೆಚ್ಚುವಂಥದು. ಈ ಕೃತಿ ಕುರಿತು ಬರೆದ ವಿಮರ್ಶೆ ಮಾಡಿದವರೂ ಮರುಚಿಂತನೆಗೆ ತೊಡಗುವಂತೆ ಮಾಡಿದ್ದು ಮೆಚ್ಚುವಂಥದು. ಕೆಲವು ವಿಮರ್ಶಕರಂತೂ ತಾವು ವಿಶೇಷವಾಗಿ ಆಯ್ದುಕೊಂಡವರ ಕೃತಿ ವಿಮರ್ಶೆ ಮಾಡುತ್ತ ಬಂದಿರುವುದು ನಿಜ. ಅದು ಅವರವರ ಸ್ವಾತಂತ್ರ್ಯಕ್ಕೆ ಸೇರಿದ ಮಾತಾದರೂ ಕೆಲವರಿಗಾಗಿ ತಾವು ಬರೆಯಲು ಇರುವಂತೆ ಆಗಿಬಿಟ್ಟಿದ್ದಾರೆ. ನಮ್ಮ ನಾಡಿನಲ್ಲಿ ವಿಮರ್ಶಕರ ಬಗ್ಗೆ ಇಂಥ ಅಸಮಾಧಾನ ಸಹಜವಾದದ್ದು. ಶಿವರಾಮಯ್ಯನವರ ವ್ಯವಧಾನಶೀಲ ಚಿಂತನೆ ಸ್ವಾಗತಾರ್ಹವಾದುದಾಗಿದೆ.

ಜಮಖಂಡಿ *ಅರ್ಜುನ ಕೋರಟಕರ*

ಪ್ರೊ|| ಶಿವರಾಮಯ್ಯನವರ '...ಒಂದಿಷ್ಟು ಹೇಳತೇನೆ ಕೇಳ' ಸಾಕಷ್ಟು ವಸ್ತುನಿಷ್ಠವಾದ ವಿರಳ ಲೇಖನ. ನಮ್ಮಲ್ಲಿ ಪ್ರಶಂಸೆ ಎಷ್ಟೋ ಸಂದರ್ಭಗಳಲ್ಲಿ 'ಗತಾನುಗತಿಕ'ವಾಗಿ ಇರುತ್ತದೆ! (ಕಂಬಾರರು ಒಳ್ಳೆಯ ಲೇಖಕ ಅಲ್ಲವೆಂದಲ್ಲ)

ಮೈಸೂರು *ಸಿ.ಪಿ.ಕೆ.*

ಸರ್ವಜನರ ಸಮೀಪವರ್ತಿ ಎನ್ನಿಸಿದ ಸೀಯಾರ್ಕೆಯವರ ಅಸ್ಖಲಿತ ಭಾಷಾ ಲೇಖನದ ಸೊಗಸಲ್ಲಿ ಸೊಂಪಾಗಿ ಮೂಡಿಬಂದ ಮೇ ದಿನದ ಸಂಭ್ರಮದಲ್ಲಿ ಭಾಗಿಯಾದ 'ಹೊಸತು' ಹಳೆಯ ಕಳೆದ ಕಾಲಸ್ಥಿತಿಗೆ ಓದುಗರನ್ನು ಮರಳಿಸಿ ಮೆಲುಕು ಹಾಕಿಸಿದುದು ಹೊಸತಿನ ಹೊಸತಿಲಲ್ಲೇ ನಡೆದ ನಿಜ ಘಟನೆಯೇ ಹೌದು. ಹಳತು ಹೊಸತಿನ ನವಿರಾದ ವಿಮರ್ಶಾ ಕೂಟಕ್ಕೂ ವೇದಿಕೆಯಾಗಿ ಹೋಯಿತು.

ನಿನಗೆ ಹೇಗೆ ಹೇಳಲಿ ಎಂದು ಗಜಲ್‌ನಲ್ಲಿ ಸಾಲು ಸಾಲಾಗಿ ಹೇಳುತ್ತಾ ಹೋಗಿ ಕೇಳುಗರಿಗೆ ಮುಜುಗರೆಯನ್ನುಂಟುಮಾಡಿ ಆಗಸದ ಹುಣ್ಣಿಮೆ ಚಂದ್ರನೆಡೆಗೆ ಕೈತೋರಿಸಿ ಕಣ್ತಪ್ಪಿಸಿ ಭುರ್‍ರೆಂದು ಹಕ್ಕಿಯ ಹಾಗೆ ನಮ್ಮನ್ನು ಅರೆಕ್ಷಣ ಗುರುಗುಟ್ಟಿಸಿ ಹುರ್ರೇ ಎಂದು ಬೆರಗುಗೊಳಿಸಿದವರು ಕೂಡ್ಲಿಗಿಯ ಸಿದ್ಧರಾಮ ಹಿರೇಮಠ ಅವರು.




'ಬಸವಣ್ಣನವರ ಚಾರಿತ್ರ್ಯಕ್ಕೆ, ಚ್ಯುತಿ ತರುವ ವಚನಗಳು' – ಎಂದು ಆಧಾರಸಹಿತವಾದ ನಾಲ್ಕಾರು ವಚನ ಹೇಳಿಕೆಗಳ ಪಟ್ಟಿಯೊಂದಿಗೆ ನೇರವಾಗಿ ವಾದಮಂಟಪದ ಕಡೆಗೆ ಬರುವಂತೆ ಸವಾಲು ಒಡ್ಡಿದವರು ಸೂರ್ಯಕಾಂತ ಎಂ. ಸೊನ್ನದ ಅವರು. ಮೇಲುನೋಟಕ್ಕೇ ವಾದದ ಒಳಗಿನ ತಿರುಳು ಹೊರತೋರುತ್ತಿರುವುದರಿಂದ ವಾದ ಪಂಡಿತರೆಲ್ಲರೂ ಗಮನಿಸಿ ಶಾಂತಿ ಕೆಡದಂತೆ ಪ್ರತಿಕ್ರಿಯಿಸುವ ಅಗತ್ಯವಿದೆ.

'ಮೇ ಒಂದು' ಎಂಬ ಕವನದಲ್ಲಿ ಜಂಬಣ್ಣ ಅಮರಚಿಂತ ಅವರು ಕಾರ್ಮಿಕರ ದಿನ ಅದೊಂದೇ ಅಲ್ಲ ಎಂದು ಕವನದಲ್ಲೇ ಹೇಳುತ್ತಾ ಹೋಗಿ ಮಾರ್ಮಿಕವಾಗಿ ಆಚರಣೆಗೊಂದು ದಿನ ಎಂಬ ನಂಬುಗೆಯ ಮೇಲೆಯೇ ಅಪನಂಬಿಕೆ ವ್ಯಕ್ತಪಡಿಸಿ ಓದುಗರಿಗೆ ಚಿಂತನೆಗೆ ಅವಕಾಶ ನೀಡಿದ್ದಾರೆ.

ಕಾಸರಗೋಡು *ಕೀರಿಕ್ಕಾಡು ವನಮಾಲ ಕೇಶವ ಭಟ್ಟ*

**'ಹೊಸತು' ಪತ್ರಿಕೆಯನ್ನು ತಪ್ಪದೆ ಓದುತ್ತಿದ್ದು ಅದಕ್ಕೆ ಬೆಂಬಲ ನೀಡುತ್ತಿದ್ದ ಶ್ರೀಮತಿ ಯು. ಎಸ್. ಸಾಕಮ್ಮನವರ ನೆನಪಿನಲ್ಲಿ ಅವರ ಮಕ್ಕಳು ಶ್ರೀ ಯು. ಎಸ್. ಶ್ರೀನಿವಾಸನ್ ಮತ್ತು ಶ್ರೀಮತಿ ಯು. ಎಸ್. ಪಾರ್ವತಿ ಪ್ರತಿವರ್ಷವೂ 'ಹೊಸತು'ವಿನಲ್ಲಿ ಪ್ರಕಟವಾಗುವ ಮಹಿಳಾ ಅಧ್ಯಯನ ಕುರಿತ ಎರಡು ಬರಹಗಳಿಗೆ ಬಹುಮಾನ ನೀಡಬೇಕೆಂದು ಎರಡು ಸಾವಿರ ರೂಪಾಯಿಗಳನ್ನು ನೀಡಿದ್ದಾರೆ. ಕಳೆದ ಮೂರು ವರ್ಷಗಳಿಂದ ಬಹುಮಾನಗಳನ್ನು ನೀಡುತ್ತಾ ಬರಲಾಗಿದೆ. ಆಗಸ್ಟ್ ೨೦೧೦ರಿಂದ ಜುಲೈ ೨೦೧೧ರ ಸಾಲಿನ ಬಹುಮಾನಗಳನ್ನು ೧. ಸ್ತ್ರೀಲೋಕ – *ನಾಟಕದ ಹೆಜ್ಜೆಗಳು;* ಲೇಖಕಿ – ನಂದಾ ಕುಮಾರಸ್ವಾಮಿ (ಸೆಪ್ಟೆಂಬರ್ ೨೦೧೦); *೨. ಕೊಡವ ಪ್ರತಿಭೆ ಬುಟ್ಟಿಯಂಡ ದೇವಕಿಯಮ್ಮ;* ಲೇಖಕಿ – ಡಾ|| ಎಂ. ಪಿ. ರೇಖಾ (ಸೆಪ್ಟೆಂಬರ್ ೨೦೧೦), ಇವರಿಗೆ ನೀಡಲಾಗುತ್ತದೆ. ಈ ಲೇಖಕಿಯರಿಗೆ ಅಭಿನಂದನೆಗಳು. ಬಹುಮಾನಿತ ಬರಹಗಳನ್ನು ಆಯ್ದುಕೊಟ್ಟ ತೀರ್ಪುಗಾರರಿಗೆ 'ಹೊಸತು' ಋಣಿಯಾಗಿದೆ.**

**– ಸಂಪಾದಕ**

ಮುಖಪುಟ ''ಸಂಸತ್ತಿಗೆ ಅರವತ್ತು ಕುಸಿಯುತ್ತಿರುವ ಮೌಲ್ಯ'' ಎಂಬ ಸಂಪಾದಕೀಯಕ್ಕೆ ಅನ್ವರ್ಥವಾಗಿ ಚೆನ್ನಾಗಿ ಮೂಡಿಬಂದಿದೆ. ಡಾ|| ಇಂದಿರಾ ಹೆಗ್ಗಡೆ ಬರೆದ ''ವಿಶ್ವಪ್ರಸಿದ್ಧ ಅಡಲಾಜ್, ಸೋಪಾನಗಳ ಬಾವಿ'', ಅದೇ ರೀತಿ ಎಲ್ಲ ಪ್ರಚಲಿತ ವಿಷಯಗಳನ್ನಾಧರಿಸಿದ ಬೇರೆ ಲೇಖನಗಳು ಚೆನ್ನಾಗಿ ಮೂಡಿಬಂದಿವೆ. ಇನ್ನೂ ಹೊಸ ಹೊಸ ಬರಹಗಾರರ ಬರಹಗಳಿಗೂ ಹೆಚ್ಚಿನ ಆದ್ಯತೆ ನೀಡಿ ಪ್ರಕಟಿಸಿರಿ.

*ಶಿರೋಳ* *ಚಿದಂಬರ ಪಿ. ನಿಂಬರಗಿ*

ಸಂಪಾದಕೀಯದಲ್ಲಿ ನಮ್ಮ ಸಂಸತ್ತು ಹಾಗೂ ಸಂಸದರ ಬಗ್ಗೆ ಸಹಸಂಪಾದಕ ಸಿ. ಆರ್. ಕೃಷ್ಣರಾವ್ ಅವರ ಅಭಿಪ್ರಾಯಗಳು ಕೋಟಿಗಟ್ಟಲೆ ಸಂಖ್ಯೆಯ ಭಾರತೀಯರ ಅನಿಸಿಕೆಗಳೇ ಆಗಿವೆ.

ಮೊದಲ ವರ್ಷದಲ್ಲಿ ಹಾಜರಿ ಕಡಿಮೆ ಇರುವ ಸಂಸದರನ್ನು ವಾಪಸ್ಸು ಮನೆಗೆ ಕಳಿಸಲು ಆಗುವಂತೆ ನಮ್ಮ ಪ್ರಜಾ ಪ್ರತಿನಿಧಿ ಕಾಯ್ದೆಗೆ ತಿದ್ದುಪಡಿ ತರುವ ಅಗತ್ಯವಿದೆ.

ಕನ್ನಡ ಸಾಹಿತ್ಯ ಪರಿಷತ್ ಕೂಡ ಇಂದು ಜಾತ್ಯತೀತವಾಗಿ ಉಳಿದಿಲ್ಲವೆಂಬುದನ್ನು ಇತ್ತೀಚಿನ ಅಧ್ಯಕ್ಷೀಯ ಚುನಾವಣೆಗಳು ತೋರಿಸಿಕೊಟ್ಟಿವೆ. ಈ

ಬಗ್ಗೆ ಸಂಪಾದಕೀಯ ಕೂಡ ಸ್ವಾಗತಾರ್ಹ.

ಪಿಕಳಾರ ಲೇಖನದ ಚಿತ್ರಗಳು ವರ್ಣದಲ್ಲಿದ್ದಿದ್ದರೆ ಚೆನ್ನಾಗಿತ್ತು!

ಸೀತಾರಾಮು ಅವರ ಪರಿಚಯದೊಂದಿಗೆ ಪ್ರಕಟವಾದ ಚಿತ್ರಗಳು ಸಂಚಿಕೆಗೆ ಶೋಭೆ ತಂದಿದೆ.

ಮೈಸೂರು **ಕೊ. ಸು. ನರಸಿಂಹಮೂರ್ತಿ**

**ಜೂನ್ ಸಂಚಿಕೆ**

ಡಾ|| ಮಹಾಬಲೇಶ್ವರ ರಾವ್ ಅವರ ''ಶಿಕ್ಷಕನ ಮೌಲ್ಯ ಕುಸಿಯುತ್ತಿದೆಯೆ?'' ಲೇಖನದಲ್ಲಿ ವೃತ್ತಿ ಮತ್ತು ವೃತ್ತಿನಿರತರ ಸುತ್ತಮುತ್ತ ಹೆಣೆದುಕೊಂಡಿರುವ ಎಲ್ಲ ಸಂಗತಿಗಳನ್ನು ಪ್ರಸ್ತಾಪಿಸಲಾಗಿದೆ. ಪ್ರಸಕ್ತ ಇದು ಮೌಲ್ಯದ ಹಾಗೂ ಸಮತೂಕದ ಲೇಖನವೇ ಆಗಿದೆ ಎನ್ನಬಹುದು. ಆದರೆ ವೃತ್ತಿಯ ಬಗ್ಗೆ ಮತ್ತು ವೃತ್ತಿನಿರತರ ಹಾಗೂ ನಿವೃತ್ತರಾದ ಕೆಲವರ ಬಗ್ಗೆ ಶ್ರೀಯುತರಿಗಿರುವ ಗೌರವಾದರಗಳಿಂದಾಗಿ, ಲೇಖನವನ್ನು ಸದಭಿಪ್ರಾಯದಿಂದಲೇ ಮುಗಿಸಿದ್ದಾರೆಂದೂ ಹೇಳಬಹುದು.

ಸ್ಥಿತ್ಯಂತರ ಗತಿಯಲ್ಲಿರುವ ನಮ್ಮ ವ್ಯವಸ್ಥೆಯಲ್ಲಿ ಶಿಕ್ಷಕರ ಮೌಲ್ಯ ಕುಸಿಯುತ್ತಿದೆ, ನಿಜ. ನಮ್ಮ ಶಿಕ್ಷಕ ಬಂಧುಗಳು ಮುಖ್ಯವಾಗಿ ಸರಕಾರಿ ಮತ್ತು ಖಾಸಗಿ ವ್ಯವಸ್ಥೆಗಳಿಗೆ ಒಳಪಟ್ಟು ಕರ್ತವ್ಯ ನಿರ್ವಹಿಸುತ್ತಿರುವುದು ಸರಿಯಷ್ಟೆ. ಅಂಕಾರ್ಹತೆ ದೃಷ್ಟಿಯಿಂದ ಉತ್ತಮ ಸ್ಥಿತಿಯಲ್ಲಿರುವವರು (ಪ್ರತೀ ವರ್ಗದಲ್ಲಿ) ಸರಕಾರಿ ವ್ಯವಸ್ಥೆಗೆ ಸೇರಿಕೊಳ್ಳುತ್ತಾರೆ; ಅಲ್ಲಿ ಅವಕಾಶ ಪಡೆಯಲಾರದವರು ಎರಡನೆ ದರ್ಜೆಯವರು (ಅಂಕಾರ್ಹತೆ ಲೆಕ್ಕಾಚಾರದಲ್ಲಿ) ಖಾಸಗಿ ವಲಯದ ಅನುದಾನ ಸಹಿತ/ರಹಿತ ಶಾಲೆಗಳಿಗೆ ಸೇರಿಕೊಳ್ಳುತ್ತಾರೆ. ಸೇವಾ ಭದ್ರತೆ ಮತ್ತಿತರ ಎಲ್ಲ ಸೌಲಭ್ಯಗಳ ಪ್ರಪ್ರಥಮ ಫಲಾನುಭವಿಗಳಾಗುವ ಸರ್ಕಾರಿ ವಲಯದ ಶಿಕ್ಷಕರು, ಶಿಕ್ಷಣ ಇಲಾಖೆಯ ಮೇಲ್ವಿಚಾರಣೆ - ನಿಯಂತ್ರಣಗಳಿಂದ ಹಾಗೂ ವೃತ್ತಿ ಬದ್ಧತೆಯಿಂದ ದೂರವಾಗಿ – ''ಊದೋ ಶಂಖವನ್ನು ಊದುವವರಾಗುತ್ತಾರೆ'' ಎಂಬುದು ನಿಜಾಂಶಕ್ಕೆ ಹತ್ತಿರವಾದ ಸಂಗತಿ. ಎಲ್ಲರೂ ಅಲ್ಲ; ಬಹಳ ಮಂದಿ. ವಿವಿಧ ಸಂಘಟನೆಗಳ ಹೆಸರು-ನೆರಳುಗಳಲ್ಲಿ ಕಾಲಹರಣ ಮಾಡುವ ಮತ್ತು ಸಲ್ಲದ ರೀತಿಯಲ್ಲಿ ಸುದ್ದಿ ಮಾಡುವವರೂ ಇದ್ದಾರೆ.

ಖಾಸಗಿ ಆಡಳಿತ ಮಂಡಲಿಗಳ ದಿನನಿತ್ಯದ ಗಮನ-ಸಂಪರ್ಕಗಳಿಂದಾಗಿ ಖಾಸಗಿ ವಲಯದ ಶಿಕ್ಷಕರು ವೃತ್ತಿಬದ್ಧತೆ, ವೃತ್ತಿ ನೈಪುಣ್ಯತೆ ಮೇಲಾಗಿ ಕಲಿಕಾರ್ಥಿಗಳ ಬಗ್ಗೆ ಕಾಳಜಿಗಳನ್ನು ಬೆಳೆಸಿಕೊಂಡು ಕರ್ತವ್ಯ ನಿರ್ವಹಿಸುವುದು ಅನಿವಾರ್ಯವಾಗುತ್ತದೆ. ಕ್ರಮೇಣ ಅದು ವೃತ್ತಿವಿಧಾನವೇ ಆಗುತ್ತದೆ. ಈ ಮೂರಂಶಗಳೂ ''ವೃತ್ತಿಯ ಮೌಲ್ಯಗಳು'' ಎಂದೊಪ್ಪಿಕೊಳ್ಳುವುದಾದರೆ ಅವರಲ್ಲಿ ಮೌಲ್ಯ ಕುಸಿಯುತ್ತಿದೆ, ಇವರಲ್ಲಿ ಕುಸಿಯಲು ಅವಕಾಶವಾಗುವುದಿಲ್ಲ. ಗ್ರಾಮಾಂತರದ ಸಾರ್ವಜನಿಕ ಮಕ್ಕಳಿಗಾಗಿ ಕರ್ತವ್ಯ ನಿರ್ವಹಿಸುವ ಅವರ ಸಂಖ್ಯೆಯೂ ಹೆಚ್ಚು ಎಂಬುದು ಗಮನಾರ್ಹ!

ಒಂದು ಕಾಲಕ್ಕೆ ಆಸಕ್ತಿ ಇದ್ದವರು, ಅಧ್ಯಯನಶೀಲರಾದವರು ಮಾತ್ರ ಶಿಕ್ಷಕ ವೃತ್ತಿಗೆ ಸೇರುತ್ತಿದ್ದರು. ದಿನಮಾನಗಳು ಬದಲಾಗಿ, ಶ್ರೇಣೀಕೃತ ವ್ಯವಸ್ಥೆಯಲ್ಲಿ ಸಾಮಾಜಿಕ ನ್ಯಾಯದ ನಿಮಿತ್ತ ಎಲ್ಲರಿಗೂ ಅವಕಾಶಗಳಿರುವುದರಿಂದ, ವೃತ್ತಿಗೆ ಅಥವಾ ವೃತ್ತಿ ಶಿಕ್ಷಣಕ್ಕೆ ಆಯ್ಕೆ ಮಾಡುವ ಪೂರ್ವದಲ್ಲಿ, ವೃತ್ತಿನಿಷ್ಠೆ-ನೈಪುಣ್ಯತೆಗಳು, ಕಲಿಕಾರ್ಥಿಗಳ ಬಗ್ಗೆ ಕಾಳಜಿ, ಸಾಮಾಜಿಕ ಬದ್ಧತೆ, ಸೃಜನಶೀಲತೆ ಮೇಲಾಗಿ ವೈಯಕ್ತಿಕ ನಡವಳಿಕೆ – ಇವುಗಳನ್ನು ಕುರಿತಂತೆ ತರಬೇತಿ ನೀಡುವ ಮತ್ತು ಅನುಪಾಲನೆ ಕೈಗೆತ್ತಿಕೊಳ್ಳುವ ವ್ಯವಸ್ಥೆ ಆದಾಗ ಮಾತ್ರ, ಶಿಕ್ಷಕರ (ವೃತ್ತಿಯ) ಮೌಲ್ಯ, ಅಪಮೌಲ್ಯವಾಗುವುದಿಲ್ಲ.

ತುಮಕೂರು ***ಎಲ್. ನರಸಿಂಹಯ್ಯ ತೊಂಡೋಟಿ***

'ಹೊಸತು' ಜೂನ್ ಸಂಚಿಕೆಯಲ್ಲಿ ಕಾಸರವಳ್ಳಿಯವರ 'ಕೂರ್ಮಾವತಾರ' ಚಿತ್ರದ ಕುರಿತು ಎಸ್. ಸುರೇಂದ್ರರವರ ಪರಿಚಯ ಲೇಖನ ಸಮಯೋಚಿತ. ಮೌಲ್ಯಗಳ ಮೈದಾಳುವಿಕೆಯಾಗಿರುವ ಗಾಂಧಿಯವರ ಸಮಕಾಲೀನ ಪ್ರಸ್ತುತತೆ - ಅಪ್ರಸ್ತುತತೆ

---

'ಹೊಸತು' ಪತ್ರಿಕೆಯ ಗೌರವ ಸಂಪಾದಕ
ಡಾ|| ಜಿ. ರಾಮಕೃಷ್ಣ ಅವರಿಗೆ ಅವರ
ಇತ್ತೀಚಿನ ಕೃತಿ 'ಲೋಕಾಯತ'
(ಡಾ|| ದೇವಿಪ್ರಸಾದ ಚಟ್ಟೋಪಾಧ್ಯಾಯ
ಅವರ ಕೃತಿಯ ಸಂಗ್ರಹಾನುವಾದ)ಕ್ಕಾಗಿ
ಕನ್ನಡ ಸಾಹಿತ್ಯ ಪರಿಷತ್ತಿನ
ಡಾ|| ಹಾ. ಮಾ. ನಾಯಕ ದತ್ತಿ
ಪ್ರಶಸ್ತಿ ನೀಡಿ ಗೌರವಿಸಲಾಗಿದೆ.
ಅವರಿಗೆ ನಮ್ಮ ಅಭಿನಂದನೆ ಸಲ್ಲುತ್ತದೆ.



---

## 'ಹೊಸತು' ಪತ್ರಿಕೆಯ ಆಹ್ವಾನ

**ಆಹಾರ ಪದ್ಧತಿ ಬದಲಾಯಿಸಿ, ರೋಗಮುಕ್ತರಾಗಿ**

''ಸಕ್ಕರೆ ಕಾಯಿಲೆಯನ್ನು ಇನ್ಸುಲಿನ್ - ಮಾತ್ರೆಗಳಿಲ್ಲದೆ ನಿಯಂತ್ರಣದಲ್ಲಿರಿಸಿಕೊಳ್ಳಬಹುದು.''

**ಉಪನ್ಯಾಸ ಮತ್ತು ಪ್ರಾತ್ಯಕ್ಷಿಕೆ (ಸ್ಲೈಡ್ ಷೋ)**

**ಡಾ|| ಬಿ. ಎಸ್. ಕಕ್ಕಿಲ್ಲಾಯ**

(ಖ್ಯಾತ ವೈದ್ಯರು ಹಾಗೂ ಪರ್ಯಾಯ ಆಹಾರ ಪದ್ಧತಿ ತಜ್ಞರು)

**ಸಂವಾದದಲ್ಲಿ ಭಾಗವಹಿಸುವ ವೈದ್ಯರು**

**ಡಾ|| ಪ್ರಕಾಶ ಸಿ. ರಾವ್**

**ಡಾ|| ನಾ. ಸೋಮೇಶ್ವರ**

**ನೀವೂ ನಿಮ್ಮ ಸಮಸ್ಯೆಯ ವಿವರಗಳೊಂದಿಗೆ ಸಂವಾದದಲ್ಲಿ ಭಾಗವಹಿಸಬಹುದು.**

**ದಿನಾಂಕ ೧೯.೮.೨೦೧೨ ಭಾನುವಾರ. ಬೆಳಗಿನ ೧೦ ಗಂಟೆಯಿಂದ ೨ ಗಂಟೆಯವರೆಗೆ**

**ಸ್ಥಳ : ಗಾಂಧೀ ಭವನ, ಶಿವಾನಂದ ವೃತ್ತ, ಕುಮಾರ ಕೃಪಾ ರಸ್ತೆ, ಬೆಂಗಳೂರು – ೫೬೦ ೦೦೧**

ಆಸಕ್ತರು ತಮ್ಮ ಹೆಸರನ್ನು ಕೂಡಲೇ ನೋಂದಾಯಿಸಬೇಕು. ಪ್ರವೇಶ ಉಚಿತ.
ನಿಮ್ಮ ಮೊಬೈಲ್, ಈಮೇಲ್ ಅಥವಾ ಅಂಚೆ ವಿಳಾಸ ತಿಳಿಸಿದರೆ
ಕಾರ್ಯಕ್ರಮ ವಿವರ ಕಳಿಸಲಾಗುವುದು.
ಸಂಪರ್ಕಕ್ಕಾಗಿ ದೂರವಾಣಿ : (೦೮೦) ೩೦೫೬೮೦೯೯, ೨೨೨೦೩೫೮೦
navakarnataka@gmail.com hosathu@gmail.com

**– ಸಂಪಾದಕ**

ಕುರಿತು ಸೂಕ್ಷ್ಮವಾಗಿ ಅಭಿವ್ಯಕ್ತಿಸಿದ್ದಾರೆ. ವಿಷಾದಕರ ಸಂಗತಿ ಏನೆಂದರೆ ಇಷ್ಟೆಲ್ಲಾ ಮೌಲ್ಯಗಳ ಬಗ್ಗೆ ಚರ್ಚಿಸುವ ಲೇಖಕರು ತಮ್ಮ ಲೇಖನದ ಪ್ರಾರಂಭಕ್ಕೆ ಶ್ರೀ ವಿ. ಎನ್. ಲಕ್ಷ್ಮೀನಾರಾಯಣರವರು ಬರೆದಿರುವ 'ಸಿನಿಮಾಂತರಂಗ' ಚಿತ್ರ ರಸಗ್ರಹಣ ಕೈಪಿಡಿಯಿಂದ ಒಂದು ಇಡೀ ಪ್ಯಾರಾ ಬಳಸಿಕೊಳ್ಳುವಾಗ ಆಕರವನ್ನು ನಮೂದಿಸಿಲ್ಲ. ಇದು ಸರಿಯಲ್ಲ. ಇಂತಹ ಪುನರಾವೃತ್ತಿ ಆಗಬಾರದು.

ಮೈಸೂರು **ಮಂಜುನಾಥ ಜೆ. ಆರ್.**

**ಜಯಪಾಲ್ ಹೆಚ್. ಆರ್.**

### ಬಸವಣ್ಣ

ಈಗ ನಾನು ಬರೆಯುತ್ತಿರುವುದು ಪ್ರತಿಕ್ರಿಯೆಗೆ ಪ್ರತಿಕ್ರಿಯೆಯಾಗಿರುವುದರಿಂದ, ಅದು ಸೂಕ್ತವೋ ಗೊತ್ತಿಲ್ಲ. ಬಸವಣ್ಣನವರ ವಚನಗಳಲ್ಲಿ ಕೆಲವು ಅನ್‌ಪಾರ್ಲಿಮೆಂಟರಿ ಪದಗಳು ಬಂದರೆ ಏನೋ ಆಕಾಶವೇ ತಲೆಯ ಮೇಲೆ ಬಿದ್ದಹಾಗೆ ಬರೆಯುವದು ಎಷ್ಟು ಸೂಕ್ತ? ಯಾಕೆ, ಬಸವಣ್ಣ ಓರ್ವ ಮಾನವ ನಲ್ಲವೆ ? ಬಸವಣ್ಣ ಅವತಾರಿ ಪುರುಷ, ದೇವಮಾನವ ಎನ್ನುವ ನಮ್ಮ ತಲೆಯಲ್ಲಿರುವ ವಿಚಾರಗಳನ್ನು ತೆಗೆದು ಹಾಕಬೇಕು. ಅವನು ಮಾನವನಾಗಿಯೇ ಏನೆಲ್ಲ ಮಾಡಿದ ಎನ್ನುವದು ಮುಖ್ಯ. ಅವನು ನಮ್ಮ ಹಾಗೆ ಬದುಕಿದ, ಕಾರ್ಯ ಮಾಡಿದ ಎನ್ನುವದನ್ನು ತಿಳಿದು ಕೊಳ್ಳಬೇಕು. ಆ ಕಾಲವೇ ಹಾಗಿತ್ತು. ಜಂಗಮರಿಗೆ ಬಹು ಪ್ರಾಧಾನ್ಯತೆ ಇತ್ತು. ಆದ್ದರಿಂದ ಅವನು 'ಚಾಂಡಲಗಿತ್ತಿ' ಎಂದು ಬೈದ. ಅದು ಮನುಷ್ಯ ಗುಣ. ಬಸವಣ್ಣನೆಂದರೆ ಯಾವುದೇ ದೌರ್ಬಲ್ಯವಿಲ್ಲದ ಸಂತ ಎಂದು ತಿಳಿದುಕೊಳ್ಳುವುದು ಸರಿಯಲ್ಲ.

ಈ ಹಿಂದೆ ಶರಣರ ಬಗ್ಗೆ ಬಹುತೇಕ ಪುಸ್ತಕಗಳಲ್ಲಿ, ಬಸವಣ್ಣ ಶಿವಮತ ಉದ್ಧಾರಕ್ಕಾಗಿ ಕೈಲಾಸದಿಂದ ಬಂದ, ಬಂದು ಶಿವಮತವನ್ನು ಮತ್ತೆ ಪಾವನವ ಮಾಡಿದ ಎನ್ನುವ ವಿಚಾರ ಬರುತ್ತದೆ. ಇದು ಕೃಷ್ಣನು ಗೀತೆಯಲ್ಲಿ ಧರ್ಮಗ್ಲಾನಿಯಾದಾಗ ಯುಗಯುಗದಲ್ಲಿ ತಾನು ಅವತರಿಸಿ ಧರ್ಮವನ್ನು ಶುದ್ಧ ಮಾಡುತ್ತೇನೆ, ಎಂದು ಹೇಳಿದ ಮಾತಿನ ಪ್ರಭಾವ. ಹಾಗಾದರೆ ಕೃಷ್ಣ ಅವತರಿಸಿ, ಚಾತುರ್ವರ್ಣ್ಯವನ್ನು ಎತ್ತಿಹಿಡಿದ. ಬಸವಣ್ಣ ಸಮಾನತೆಯನ್ನು ಎತ್ತಿಹಿಡಿದ. ಇಬ್ಬರ ವಿಚಾರಗಳು ಒಂದೇಯೆ ? ಅಲ್ಲ. ತಾನು ಮಾದಾರ, ದೋಹರ ಆಳುಗಳ ಮಕ್ಕಳ ಅನೈತಿಕ ಸಂಗದಿಂದ ಹುಟ್ಟಿದೆ ಎನ್ನುತ್ತಾನೆ ಬಸವಣ್ಣ. ಎಷ್ಟೊಂದು ಅದ್ಭುತ ವಿಚಾರ. ಇದನ್ನು ಹೇಳಿಕೊಳ್ಳಲು ಎಲ್ಲರಿಂದ ಸಾಧ್ಯವೇ ? ಇಲ್ಲ. ಬಸವಣ್ಣ ಮಾತ್ರ ಹೀಗೆ ಹೇಳಬಲ್ಲ. ಇದರ ಅರ್ಥ, ನಾವೆಲ್ಲಾ ಹಾದರಕ್ಕೆ ಹುಟ್ಟಿದವರು ಎಂದು ಹೇಳಿಕೊಳ್ಳುವದಲ್ಲ. ಆದರೆ ಬಸವಣ್ಣನಿಗೆ ಅಂತ್ಯಜರ ಬಗ್ಗೆ ಎಷ್ಟು ಕಾಳಜಿ ಇತ್ತು ಎನ್ನುವದು ಗೊತ್ತಾಗುತ್ತದೆ. ಒಬ್ಬ ದಲಿತ ಬರಹಗಾರರು ಬರೆಯುತ್ತಾರೆ, ಈ ದೇಶದಲ್ಲಿ ನೊಂದವರ ಕಣ್ಣೀರು ಒರೆಸಿದವರು ಮೂವರೆ : ಬುದ್ಧ, ಬಸವಣ್ಣ ಮತ್ತು ಅಂಬೇಡ್ಕರ್, ಎಂದು. ಮಾನವನನ್ನಾಗಿ ಬಸವಣ್ಣನನ್ನು ನೋಡಬೇಕೇ ವಿನಾ ಅವತಾರಿ ಪುರುಷನಾಗಿ ಅಲ್ಲ.

ರಾಣೇಬೆನ್ನೂರು **ಎ. ಸಿ. ಹಿರೇಒಡೆಯರ**

## ಅನಭಿಜ್ಞ ಶಾಕುಂತಲವೆಂಬ ದೃಶ್ಯಕಾವ್ಯ

ಕೆ. ವೈ. ನಾರಾಯಣಸ್ವಾಮಿ ಅವರ ಹೊಸ ನಾಟಕ 'ಅನಭಿಜ್ಞ ಶಾಕುಂತಲ' ಈಚೆಗೆ ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರದಲ್ಲಿ ದಿನಾಂಕ ೨೫-೦೫-೨೦೧೨ರಂದು ಎರಡನೇ ಪ್ರದರ್ಶನ ಕಂಡಿತು. ಇನ್ನೂ ಹಲವು ಪ್ರದರ್ಶನಗಳು ಈಗಾಗಲೆ ಆಯೋಜಿತಗೊಂಡಿವೆ. ಇದನ್ನು ಪ್ರಕಾಶ್ ಪಿ. ಶೆಟ್ಟಿ ಅವರು ನಿರ್ದೇಶಿಸಿದ್ದಾರೆ. ಇತ್ತೀಚೆಗೆ ನೋಡಿದ ನಾಟಕಗಳಲ್ಲೇ ಇದೊಂದು ಅಪರೂಪದ ನಾಟಕ. ಪಠ್ಯ ಹಾಗೂ ಪ್ರದರ್ಶನ ಎರಡೂ ನೆಲೆಯಿಂದಲೂ ಈ ಮಾತನ್ನು ಹೇಳಬಹುದು.

ಮರೆವು ಹಾಗೂ ನೆನಪುಗಳ ಕಣ್ಣಾಮುಚ್ಚಾಲೆಯೊಂದು ಭಾರತದ ಎಲ್ಲ ಸಂಸ್ಕೃತಿಗಳಲ್ಲಿ ಅಂತರ್ಗತವಾಗಿದೆ. ಮರೆವಿನ ರಾಜಕಾರಣದಿಂದ ಹೆಣ್ಣಿನ ಅಸ್ತಿತ್ವವನ್ನೇ ನಿರಾಕರಿಸುವ ತಂತ್ರವೊಂದು ಹುಟ್ಟಿಕೊಂಡಿರುವುದೇನೂ ಅಚ್ಚರಿಯ ಸಂಗತಿಯಲ್ಲ. ಅನಾದಿ ಕಾಲಗಳ ಸಮುದಾಯಗಳಿಂದ ಹಿಡಿದು ಇವತ್ತಿನ ಪ್ರಜಾಪ್ರಭುತ್ವದ ಸಮಾಜಗಳಲ್ಲೂ ಇಂತಹ ತಂತ್ರಗಳನ್ನು ನೋಡಲು ಸಾಧ್ಯ. ಒಟ್ಟು ಭಾರತದ ಸಾಮಾಜಿಕ-ಸಾಂಸ್ಕೃತಿಕ ಸನ್ನಿವೇಶದಲ್ಲಿಯೇ ಹೆಣ್ಣೆಂದರೆ ಮರೆವು ಇಲ್ಲವೇ ಮರೆವು ಅಂದರೆ ಹೆಣ್ಣು ಎಂಬ ನಿಲುವನ್ನು ಕಾಣುತ್ತೇವೆ. ಇದೇನೂ ಆರೋಪವಲ್ಲ, ಸಾಂಸ್ಕೃತಿಕ ಲಜ್ಜತನದ ಪರಮಾವಧಿಯೆಷ್ಟು ಎಂಬುದನ್ನು ಸಾಬೀತುಪಡಿಸಲು ಈ ಮಾತನ್ನು ಹೇಳಿದೆ. ಇಂತಹ ಪುರುಷ ಮರೆವಿನ ರಾಜಕಾರಣಕ್ಕೆ ಜ್ವಲಂತ ಸಾಕ್ಷಿಯಂತೆ ಇರುವ ಅಭಿಜ್ಞಾನ ಶಾಕುಂತಲಾದಂತಹ ಮಹಾನ್ ಪ್ರೇಮ ದೃಶ್ಯಕಾವ್ಯವನ್ನು ಬರೆದ ಮಹಾಕವಿ ಕಾಳಿದಾಸನನ್ನೇ ಸುತ್ತಿಕೊಂಡ ಮತ್ತೊಂದು ಪ್ರೇಮ ಪುರಾಣವೇ ಕೆ. ವೈ. ನಾರಾಯಣಸ್ವಾಮಿ ಅವರ ಹೊಸ ನಾಟಕ ಈ ಅನಭಿಜ್ಞ ಶಾಕುಂತಲ. ಇದು ಕೂಡ ಮತ್ತೊಂದು ದೃಶ್ಯಕಾವ್ಯ ಎಂಬುದರಲ್ಲಿ ಎರಡು ಮಾತಿಲ್ಲ.

ಕಾಶ್ಮೀರ ಕಣಿವೆಯ ಹಾಡಿಯ ಜನರ ನಡುವೆ ಬೆಳೆದ ಒಬ್ಬ ಸಾಮಾನ್ಯ ವ್ಯಕ್ತಿಯೇ ಈ ಕವಿ ಕಾಳಿದಾಸ. ಈತನ ಒಡನಾಡಿ ಮಲ್ಲಿಕಾಳಿಗೆ ಕಾಳಿಯಲ್ಲಿ ಅನುರಾಗ ಹುಟ್ಟುತ್ತದೆ. ತನ್ನ ಜೀವವೇ ಮಲ್ಲಿಕಾಯೆಂದು ನಂಬಿದ ಕಾಳಿಗೆ, ತನ್ನನ್ನೇ ತಾನು ಹೇಗೆ ಪ್ರೀತಿಸುವುದು ? **ತಾನಲ್ಲದ್ದನ್ನು ಮಾತ್ರ ಮನುಷ್ಯ ಪ್ರೀತಿಸಬಲ್ಲ** ಎಂಬ ಸವಾಲು ಎದುರಾಗುತ್ತದೆ. ಈ ಇಕ್ಕಟ್ಟಿನಿಂದ ತಪ್ಪಿಸಿಕೊಳ್ಳಲು ಬೇರೆ ದಾರಿಯಿಲ್ಲದೆ ತನಗೆ ಗಂಧರ್ವ ಕನ್ಯೆಯೊಬ್ಬಳಲ್ಲಿ ಅನುರಕ್ತಿ ಉಂಟಾಗಿದೆ ಎಂದು ಮಲ್ಲಿಕಾಳಿಗೆ ಸುಳ್ಳು ಹೇಳುತ್ತಾನೆ. ಈ ಪ್ರಕ್ರಿಯೆಯಲ್ಲಿಯೇ ಉಜ್ಜಯಿನಿಯ ರಾಜನ ಅಧಿಕಾರಿಗಳು ರಾಜಧನವನ್ನು ಸಂಗ್ರಹಿಸಲು ಕಾಳಿ ಇರುವ ಹಾಡಿಗೆ ಬಂದಾಗ, ಅಲ್ಲಿ ಕಾಳಿ ಬಲವಂತದಿಂದ ತನ್ನ ಕಾವ್ಯವನ್ನು ಓದುತ್ತಾನೆ. ಕಾಳಿಯ ಈ ಕಾವ್ಯ ವಾಚನಕ್ಕೆ ಮನಸೋತು, ಇವನು ಕೇವಲ ಕಾಳಿಯಲ್ಲ, ಕಾಳಿದಾಸನೆಂದು ಆ ರಾಜಪ್ರಮುಖರು ಘೋಷಿಸುತ್ತಾರೆ. ಹಾಗೂ ಶ್ರೇಷ್ಠವಾಗಿರುವುದೆಲ್ಲವೂ ರಾಜನಿಗೇ ಸೇರಬೇಕೆಂಬ ಪ್ರಭುತ್ವದ ಬಲದಿಂದ ಹಕ್ಕೊತ್ತಾಯ ಮಾಡುತ್ತಾರೆ ಮತ್ತು ಕಾಳಿದಾಸನನ್ನು ರಾಜನ ಆಸ್ಥಾನಕ್ಕೆ ನಡೆಯುವಂತೆ ಒತ್ತಾಯಿಸುತ್ತಾರೆ. ಹೀಗೆ ಪ್ರಭುತ್ವ ತನ್ನ ಹಿರಿಮೆಯನ್ನು ಹೆಚ್ಚಿಸಿಕೊಳ್ಳಲು ಕಾಳಿದಾಸನನ್ನು ಸಾಧನ ವಾಗಿಸಿಕೊಂಡರೆ, ಇನ್ನೊಂದು ಕಡೆ ಭೋಜರಾಜನ ಮಗಳು ತನ್ನನ್ನೇ ಪ್ರೀತಿಸುವಂತೆ ಕಾಳಿದಾಸನನ್ನು ಪೀಡಿಸುತ್ತಾಳೆ, ಆಗ್ರಹಿಸುತ್ತಾಳೆ ಹಾಗೂ ಕಟ್ಟಪ್ಪಣೆ ಮಾಡುತ್ತಾಳೆ. ಇದೆಲ್ಲವನ್ನು ಕಾಳಿದಾಸ ನಿರಾಕರಿಸಿದಾಗ ಅವನನ್ನು ರಹಸ್ಯವಾಗಿ ಬಂಧಿಸಿ ಇಡುತ್ತಾಳೆ. ಈ ನಡುವೆ, ಕಾಳಿದಾಸ ತಾನು ಗಂಧರ್ವ ಕನ್ಯೆಯೊಂದಿಗೆ ಅನುರಕ್ತಿ ಹೊಂದಿರುವೆ ಎಂದು ಹೇಳಿದ ಸುಳ್ಳೇ ನಿಜವಾಗಿ ಬಿಡುತ್ತದೆ. ತಮ್ಮ ಈ ಪ್ರೀತಿಯ ಕುರುಹು ಹಾಗೂ ನೆನಪಿಗಾಗಿ ಕಾಳಿದಾಸ ಗಂಧರ್ವ ಕನ್ಯೆಯ ಕೈಯಲ್ಲಿರುವ ಉಂಗುರವನ್ನು ಪಡೆಯುತ್ತಾನೆ. ಪ್ರತೀ ಹುಣ್ಣಿಮೆಯ ದಿನ ಆ ಗಂಧರ್ವ ಕನ್ಯೆಯನ್ನು ಭೇಟಿಯಾಗುತ್ತೇನೆಂದು ಮಾತುಕೊಡುತ್ತಾನೆ. ಕಾಳಿದಾಸನು ರಾಜನ ಮಗಳಿಂದ ಬಂಧಿ ತನಾಗಿದ್ದರಿಂದ, ತಾನು ಗಂಧರ್ವ ಕನ್ಯೆಗೆ ಕೊಟ್ಟ ಮಾತಿನಂತೆ ನಡೆದುಕೊಳ್ಳಲು ಸಾಧ್ಯವಾಗುವುದಿಲ್ಲ. ಆ ನಡುವೆ ಗಂಧರ್ವ ಕನ್ಯೆ



ಗರ್ಭಿಣಿಯಾಗಿ, ಸಾಕಷ್ಟು ಇಕ್ಕಟ್ಟಿಗೆ ಒಳಗಾಗುತ್ತಾಳೆ. ನಾಗಸಾನಿಯರ ಸಹಾಯದಿಂದ ಬದುಕುಳಿದು ಗಂಡು ಮಗುವನ್ನು ಹೆತ್ತಿರುತ್ತಾಳೆ. ಈ ಮಗು ನಾಗಸಾನಿಗಳ ಮನೆಯಲ್ಲಿಯೇ ಬೆಳೆಯುತ್ತದೆ. ಮುದುಕಿಯೊಬ್ಬಳು ಕೊಟ್ಟಿರಬಹುದಾದ ಮಾಹಿತಿಯಂತೆ ಕಾಳಿದಾಸ ಗಂಧರ್ವ ಕನ್ಯೆಯನ್ನು ಹುಡುಕಿಕೊಂಡು ಸೂಳಿಗೇರಿಗಳಲ್ಲಿ ಸುತ್ತುತ್ತಿರುತ್ತಾನೆ. ಹೀಗೊಂದು ದಿನ ಸೂಳಿಗೇರಿಯ ನಾಗಸಾನಿಯ ಮನೆಯಲ್ಲಿ ಕಾಳಿದಾಸ ತನ್ನ ಅಭಿಜ್ಞಾನ ಶಾಕುಂತಲಾ ನಾಟಕವನ್ನು ವಾಚಿಸುತ್ತಿರುವಾಗಲೇ ಅವನ ಕೊಲೆಯಾಗುತ್ತದೆ. ಈ ನಾಟಕದ ರೋಚಕ ತಿರುವೇ ಕಾಳಿದಾಸನ ಈ ಕೊಲೆ.

ಕಾಳಿದಾಸನ ಸುತ್ತ ಸುತ್ತಿಕೊಂಡಿರುವ ಪ್ರಭುತ್ವದ ಪ್ರಾಬಲ್ಯ, ಪುರುಷಕೇಂದ್ರಿತ ನಿಲುವುಗಳು, ಪ್ರಣಯ, ಪ್ರಭುತ್ವ ಹಾಗೂ ಅಧಿಕಾರ ಸಂಬಂಧಗಳು, ಮೇಲ್ನೋಟಕ್ಕೆ ಕಾಳಿದಾಸನನ್ನು ಶೋಷಣೆ ಮಾಡಿದಂತೆ ಕಂಡರೂ, ದಿಟವಾಗಿಯೂ ಅಂತಹ ಶೋಷಣೆಗೆ ಬಲಿಯಾಗುವವಳು ಹೆಣ್ಣೇ. ಹೆಣ್ಣು ಹೆಣ್ಣಿಗೆ ಶತ್ರುವೆಂಬ ಸಾಂಪ್ರದಾಯಿಕ ತಂತ್ರವೊಂದು ಅನಭಿಜ್ಞ ಶಾಕುಂತಲದಲ್ಲಿ ಕಂಡರೂ, ಅದು ಪುರುಷಕೇಂದ್ರಿತ ಆಲೋಚನಾಕ್ರಮದಿಂದ ಪ್ರೇರಿತವಾದ ನೆಲೆ ಎಂಬುದು ನಿಚ್ಚಳವಾಗಿಯೇ ಕಾಣುತ್ತದೆ. ಈ ನಾಟಕದಲ್ಲಿ ಉಂಗುರದ ಕತೆ ತಿರುವು ಮುರುವಾಗಿದೆ. ಅಭಿಜ್ಞಾನ ಶಾಕುಂತಲಾ ನಾಟಕದಲ್ಲಿ ದುಷ್ಯಂತ ಶಕುಂತಲಾಗೆ ತನ್ನ ನೆನಪಿಗಾಗಿ ಉಂಗುರವನ್ನು ಕೊಟ್ಟರೆ, ಈ ನಾಟಕದಲ್ಲಿ ಗಂಧರ್ವಕನ್ಯೆಯ ಕೈಯಲ್ಲಿ ಇರುವ ಉಂಗುರವನ್ನೇ ಕಾಳಿದಾಸ ಅವಳ ನೆನಪಿಗಾಗಿ ಕೇಳಿ ಪಡೆಯುತ್ತಾನೆ. ಇದರಿಂದ ಮತ್ತೆ ಶಕುಂತಲಾ (ಗಂಧರ್ವಕನ್ಯೆ)ಗೆ ತೊಂದರೆಯಾಗುತ್ತದೆ. ಈ ಎರಡೂ ನಾಟಕಗಳಲ್ಲಿ ಉಂಗುರವನ್ನು ಯಾರು ಯಾರಿಂದ ಪಡೆದರೂ ಅದರ ಪರಿಣಾಮ ಮಾತ್ರ ಹೆಣ್ಣನ್ನೆ ಸುತ್ತಿಕೊಂಡಿರುವುದು ಗಮನಾರ್ಹ.




ಗಂಧರ್ವ ಕನ್ಯೆಯ ಪ್ರವೇಶದಿಂದ ಈ ನಾಟಕಕ್ಕೆ ಒಂದು ಮುಖ್ಯ ತಿರುವು ಸಿಗುತ್ತದೆ ದಿಟ. ಆದರೆ ಈ ತಿರುವಿಗೆ ನಾಟಕಕಾರ ''ನೆಸ್ತನೆ ನೆಲ ಬಾಲನೆ ಸರಿಯಲ್ಲವೋ ಏಕಾಂತನೆ/ ಬಾಲೆ ನನ್ನಯ ಚಿನ್ನದುಂಗುರ/ ಬಾವಿ ನೀರೊಳು ಜಾರಿತೋ॥'' ಎಂಬ ತೆಲುಗು ಜಾನಪದ ಹಾಡಿನಿಂದ ಈ ನಾಟಕದ ಆಶಯವನ್ನು ಕಟ್ಟಿಕೊಳ್ಳುತ್ತಾನೆ. ಚರಿತ್ರೆ, ಪುರಾಣ ಇಲ್ಲವೇ ಪ್ರಾಚೀನ ಕಾವ್ಯಗಳನ್ನು ಮುರಿದು ಕಟ್ಟುವ ಇರಾದೆ ಮಾತ್ರ ನಾಟಕಕಾರನದ್ದಲ್ಲ. ಬದಲಾಗಿ ಇಂತಹ ಚಾರಿತ್ರಿಕ, ಸಾಂಸ್ಕೃತಿಕ ನಿಲುವುಗಳು ಮಂಡಿಸುತ್ತಿರುವ ಚಿಂತನೆಗಳು ಹೇಗೆ ಹೆಣ್ಣಿನ/ಜನರ ಬದುಕನ್ನು ಬಾಧಿಸುತ್ತವೆ ಎಂಬುದೇ ಇಲ್ಲಿ ಮುಖ್ಯವಾಗುತ್ತದೆ. ಅಧಿಕಾರ ಕೇಂದ್ರಗಳನ್ನು, ಪುರುಷ ಮರೆವಿನ ರಾಜಕಾರಣದ ಷಡ್ಯಂತ್ರವನ್ನು ಬಯಲುಗೊಳಿಸುವ ನಿಲುವುಗಳು ಕೂಡ ಸಂಸ್ಕೃತಿಗಳಲ್ಲಿ ಹೇಗೆ ಹುದುಗಿರುತ್ತವೆ ಎಂಬ ಸಂಗತಿಗಳು ಇಲ್ಲಿ ಮುಂಚೂಣಿಗೆ ಬರುತ್ತವೆ.

ಸಂಸ್ಕೃತ ನಾಟಕಗಳಲ್ಲಿಯೇ ಹೆಚ್ಚು ಬಳಕೆಯಾಗಿರುವ ಸೂತ್ರಧಾರನ ತಂತ್ರವನ್ನು ಈ ನಾಟಕದಲ್ಲಿಯೂ ಬಳಸಿಕೊಂಡಿದ್ದರೂ, ಈ ತಂತ್ರಕ್ಕೆ ನಿಷ್ಠರಾಗದೆ ಸೂತ್ರಧಾರನನ್ನು ನ್ಯಾಯಾಧೀಶನನ್ನಾಗಿ ರೂಪಾಂತರಿಸುವ ಬಗೆಯೇ ಈ ನಾಟಕದ ಮತ್ತೊಂದು ವಿಶೇಷ. ಇಡೀ ನಾಟಕವೇ ನ್ಯಾಯಾಧೀಶರ ವಿಚಾರಣೆ ಮೂಲಕ ತೆರೆದುಕೊಳ್ಳುತ್ತದೆ. ಇಲ್ಲಿ ಬಿಚ್ಚಿಕೊಳ್ಳುವ ನಾಟಕದ ವಿವರಗಳನ್ನು ಬಹಳ ಸೂಕ್ಷ್ಮವಾಗಿ ಬಿಡಿಸಿ ನೋಡಬೇಕಾಗುತ್ತದೆ. ಇಲ್ಲವಾದರೆ ಅವುಗಳು ಮಧ್ಯಮ ವರ್ಗದ ಈಡೇರಿಕೆಗಳನ್ನು ಬಗೆಹರಿಸುವ ತಂತ್ರಗಳಂತೆ ಕಾಣುತ್ತವೆ. ಇಂತಹ ಅಪಾಯಗಳನ್ನು ಮೀರುವ ಹೊಣೆಗಾರಿಕೆ ನೋಡುಗರ ಮೇಲಿದೆ. ಗಂಧರ್ವ ಕನ್ಯೆ ಹಾಡಿಯ ನಾಯಕನ ಸೊಸೆಯೆಂಬುದು ಮತ್ತು ಕಾಳಿದಾಸನ ಕೊಲೆ ಮಾಡಿದ್ದು ಅವ(ಳ)ನ ಮಗನೇ ಎಂಬ ಕುತೂಹಲದ ವಿವರಗಳು ಈ ವಿಚಾರಣೆ ಪ್ರಕ್ರಿಯೆಯಲ್ಲಿ ಬಿಚ್ಚಿಕೊಳ್ಳುತ್ತವೆ. ನಾಗಸಾನಿಯ ಮನೆಯಲ್ಲಿ ಕಾಳಿದಾಸ ತನ್ನ ಅಭಿಜ್ಞಾನ ಶಾಕುಂತಲಾ ನಾಟಕವನ್ನು ವಾಚಿಸುವಾಗ, ಶಕುಂತಲೆಯು ತುಂಬು ಬಸಿರಾಗಿರುವುದನ್ನು ಲೆಕ್ಕಿಸದೆ ಅರಮನೆಯಿಂದ ಹೊರ ಕಳಿಸಿದ ದುಷ್ಯಂತನ ಕತೆ ಕೇಳಿ ರೋಸಿಹೋದ ಮಗ ದ್ವೇಷದಿಂದ ಕಾಳಿದಾಸನ ಕೊಲೆ ಮಾಡುತ್ತಾನೆ. ಗಂಧರ್ವ ಕನ್ಯೆಯ ಈ ಮಾತುಗಳಿಂದ ಈ ನಿಲುವು ಇನ್ನೂ ನಿಚ್ಚಳವಾಗುತ್ತದೆ, **ನಾನು ಪಾಪಿ... ನನ್ನ ಕ್ಷಮಿಸಿ ಎಂದು ಯಾರನ್ನ ಕೇಳುವುದು? ನನ್ನ ಮಗ ಹುಟ್ಟಿನಿಂದಲೂ ತಂದೆ ಇಲ್ಲದೆ ನಾಗಸಾನಿಯರ ಮನೆಯಲ್ಲಿ ಬೆಳೆದ. ನಾಗಸಾನಿಯರು ಅವನಿಗೆ ನಿನ್ನ ತಾಯಿಯನ್ನು ತುಂಬು ಬಸಿರಿ ಇರುವಾಗ ನಿನ್ನ ತಂದೆ ಮನೆಯಿಂದ ಹೊರ ಹಾಕಿದನೆಂದು – ಅಡವಿಯಲ್ಲಿ ಬಿಟ್ಟುಹೋದನೆಂದು ಕರುಳು ಕತ್ತರಿಸುವಂತೆ ಕತೆ ಹೇಳಿ ಬೆಳೆಸಿದರು. ನಾನು ತಾನೇ ಅವನಿಗೆ 'ನನ್ನ ಗಂಡ ಬೇರೆ ನಿನ್ನ ತಂದೆ ಬೇರೆ' ಎಂದು ಹೇಗೆ ಹೇಳಲಿ? ಅವನ ಹೃದಯದಲ್ಲಿ ತಂದೆಯೆನ್ನಿಸಿಕೊಂಡವನ ಕುರಿತು ಅಷ್ಟು ದ್ವೇಷ ಹುಟ್ಟಿಕೊಳ್ಳುತ್ತದೆ ಅಂತ ನನಗೆ ತಾನೇ ಹೇಗೆ ಗೊತ್ತಿತ್ತು?** ಕೊಲೆಯಾದವ ತಂದೆ, ಕೊಲೆಗೈದವ ಮಗ, ಇದರ ಪರಿಣಾಮವನ್ನು ಮಾತ್ರ ತಾಯಿ ಎದುರಿಸಬೇಕೆ? ಇಂತಹ ಚಾರಿತ್ರಿಕ ವ್ಯಂಗ್ಯವನ್ನು ಈ ನಾಟಕ ನಮ್ಮುಂದಿಡುತ್ತದೆ. ಈ ನಾಟಕದ ಆನಂದ, ಭಯ, ಈರ್ಷೆ, ಅಪಮಾನ, ಬೀಭತ್ಸ, ಶೃಂಗಾರ ಎಲ್ಲವೂ ಹೆಣ್ಣಿನ ಅಸ್ತಿತ್ವದ ನಿರಾಕರಣೆಯ ಸೂಚಕಗಳಾಗಿಯೇ ಇಲ್ಲಿ ಕಾಣಿಸುತ್ತವೆ. ಗಂಡು ಅಭಿಜ್ಞಾನವಾದರೆ ಹೆಣ್ಣು ಅನಭಿಜ್ಞಯೆಂಬ ನಂಬಿಕೆಯನ್ನು ಈ ನಾಟಕ ಮತ್ತೆ ಸಾಬೀತುಗೊಳಿಸುತ್ತದೆ.

**ಮೇಟಿ ಮಲ್ಲಿಕಾರ್ಜುನ**
ಸಹ್ಯಾದ್ರಿ ಆರ್ಟ್ಸ್ ಕಾಲೇಜು, ಕುವೆಂಪು ವಿಶ್ವವಿದ್ಯಾಲಯ
ವಿದ್ಯಾನಗರ - ೫೭೭ ೨೦೩, ಶಿವಮೊಗ್ಗ ಜಿಲ್ಲೆ

## ಜನ್ನಾ ಸನದಿ ಸಾಹಿತ್ಯ ಪ್ರಶಸ್ತಿಗೆ ಕೃತಿ ಆಹ್ವಾನ

**ಬೆಳಗಾವಿಯ ಬಿ. ಎ. ಸನದಿ ಸಾಂಸ್ಕೃತಿಕ ಪ್ರತಿಷ್ಠಾನವು ನೀಡುವ ಜನ್ನಾ ಸನದಿ ರಾಜ್ಯಮಟ್ಟದ ಸಾಹಿತ್ಯ ಪ್ರಶಸ್ತಿಗೆ ೨೦೧೧ರಲ್ಲಿ ಪ್ರಥಮ ಆವೃತ್ತಿಯಾಗಿ ಪ್ರಕಟವಾದ ಕಥಾ ಸಂಕಲನಗಳನ್ನು ಆಹ್ವಾನಿಸಲಾಗಿದೆ. ಕಥಾ ಸಂಕಲನವು ಸ್ವತಂತ್ರವಾಗಿದ್ದು, ಮಾನವೀಯ ಮೌಲ್ಯಗಳನ್ನು ಬಿಂಬಿಸುವಂತಿರಬೇಕು. ಈ ಪ್ರಶಸ್ತಿಯು ಉದಯೋನ್ಮುಖ ಲೇಖಕರಿಗೆ ಮೀಸಲಾಗಿದ್ದು, ೩೫ ವರ್ಷದ ಒಳಗಿನವರು ಮಾತ್ರ ತಮ್ಮ ಕೃತಿಗಳನ್ನು ಸಲ್ಲಿಸಬೇಕು.**

**ಪ್ರಶಸ್ತಿಯು ರೂ. ೫೦೦೦ ನಗದು, ಗೌರವ ಸಂಮಾನ ಹಾಗೂ ಪ್ರಶಸ್ತಿ ಪತ್ರವನ್ನು ಒಳಗೊಂಡಿದೆ. ಆಸಕ್ತ ಕತೆಗಾರರು ತಮ್ಮ ಕಥಾಸಂಕಲನದ ಮೂರು ಪ್ರತಿಗಳನ್ನು ವಯಸ್ಸಿನ ದಾಖಲೆ, ವಿಳಾಸ ಹಾಗೂ ದೂರವಾಣಿ ಇತ್ಯಾದಿ ವಿವರಗಳೊಂದಿಗೆ ಈ ಕೆಳಗಿನ ವಿಳಾಸಕ್ಕೆ ಜುಲೈ ೩೧ರೊಳಗೆ ತಲುಪುವಂತೆ ಕಳುಹಿಸಬೇಕೆಂದು ಕೋರಲಾಗಿದೆ.**

**ಶ್ರೀ ಡಿ. ಬಿ. ಪಾಟೀಲ**
**'ಕಸ್ತೂರಿ', ೩೭೬, ಸೆಕ್ಟರ್-೩, ಶಿವಬಸವ ನಗರ, ಬೆಳಗಾವಿ - ೧೦**
**ಜಂಗಮವಾಣಿ : ೯೬೮೬೧೨೭೧೩೪**

# ಮನದ ಮುಂದಣ ಆಸೆ...



''ಹೌದೌದು, ನಿಜಾನೆ ಸಾರ್ ನೀವು ಹೇಳ್ತಿರೋದು. ಅಂಥಾದ್ದು ಆ ಉದ್ದಿನ ವಡೇಲಿ ಏನಿದೆ ಅಂತ ನಂಗಂತು ಈ ತನಕ ಅರ್ಥವಾಗಿಲ್ಲ, ಹನ್ನೆರಡು ವರ್ಷದಿಂದ ನಾನು ಅದರ ಅಭಿಮಾನಿ ಸಾರ್'' ಅಂದ. ಇಬ್ಬರೂ ನಮ್ಮ ನಮ್ಮ ಕಾಲುಗಳನ್ನು ಎಳೆದುಕೊಂಡು ಹೋಗಿದ್ದರಿಂದ ಸರಿಸುಮಾರು ಎಲ್ಲರಿಗಿಂತ ಮೊದಲೇ ಒಳಗೆ ಹೋಗಿ ಒಟ್ಟು ಅರ್ಧ ಡಜ಼ನ್ ವಡೆ ಮುಗಿಸಿದ್ದೆವು. ಆ ಮಾತು ಬೇರೆ. ನಾನೂ ಈಗ ಅಭಿಮಾನಿ.

✶ ✶ ✶

ಮಹಾನಗರದ ಪ್ರಮುಖ ಬಡಾವಣೆ. ಅಂಗಡಿ ಮುಂಗಟ್ಟುಗಳ ಸಾಲು. ನಾನು ಮನೆಯಿಂದ ಬೆಳಗ್ಗೆ ಹತ್ತಕ್ಕೆಲ್ಲ ಹೊರಟು ಸುತ್ತಾಡಿ ಅಲ್ಲಿ ತರಕಾರಿ, ಹಿಟ್ಟು ಖರೀದಿಸಲು ಅಡ್ಡಾಡುತ್ತಿದ್ದೆ. ಒಂದೆಡೆ ಇನ್ನೂ ಬಾಗಿಲಿರಲಿ, ಮುಂಗೇಟನ್ನೇ ತೆರೆದಿಲ್ಲ, ಆದರೂ ಆಗಲೇ ಜನರ ನೂಕುನುಗ್ಗಲು. ಇದೇನಿದು ? ಕ್ಲಿನಿಕ್ಕೇ, ದುರಸ್ತಿಗೆ ಕೊಟ್ಟ ದ್ವಿಚಕ್ರ ವಾಹನಗಳನ್ನು ಹಿಂಪಡೆಯಲು ಸರದಿ ನಿಂತಿರಬಹುದೇ ಅಥವಾ ಕಜ್ಜಾಯಕ್ಕೆ ಹಸಿಹಿಟ್ಟು ರುಬ್ಬಿಸಿಕೊಳ್ಳಲು ಮುಗಿಬಿದ್ದಿದ್ದಾರೆಯೇ ಮುಂತಾಗಿ ಕುತೂಹಲ ವಾಯಿತು. ನನ್ನ ಅಂದಾಜು ನಿಜಕ್ಕೆ ಹತ್ತಿರವಾಗಿತ್ತು, ಅದು ಪ್ರಸಿದ್ಧ ಫಲಾಹಾರ ಮಂದಿರವಂತೆ. ಅಲ್ಲಿ ಹೆಚ್ಚಿಗೆ ಐಟಂಗಳನ್ನೇನೂ ತಯಾರಿಸುವುದಿಲ್ಲ. ಗರಿಗರಿ ಉದ್ದಿನ ವಡೆ ಅಲ್ಲಿನ ವಿಶೇಷ, ಅತಿ ವಿಶೇಷ. ಅದರೊಂದಿಗೆ ನಂಚಿಕೊಳ್ಳಲು ಇಡ್ಲಿ, ಅಷ್ಟೆ! ವಡೆಗಿಂತಲೂ ಅಲ್ಲಿನ ಚಟ್ನಿಯನ್ನೇ ಬಹುತೇಕ ಅಭಿಮಾನಿಗಳು ಇಷ್ಟಪಡುತ್ತಾರೆ. ಆಗ ಸಮಯ ಒಂದೂಕಾಲು ಗಂಟೆ. ಒಂದೂ ಮುಕ್ಕಾಲಿಗೆ ಸರಿಯಾಗಿ ಮುಂಗೇಟು ತೆರೆಯುತ್ತಿದ್ದಂತೆ ಗ್ರಾಹಕರು ಒಳಗೆ ಧಾವಿಸುತ್ತಾರಂತೆ. ನಂತರ ಹದಿನೈದು ನಿಮಿಷಗಳಲ್ಲಿ ಬಾಗಿಲು ತೆಗೆಯುತ್ತೆ. ಜನ ಎದ್ದೆನೊ ಬಿದ್ದೆನೊ ಅಂತ ಒಳಗೆ ನುಗ್ಗುತ್ತಾರೆಂದು ಬೇರೆ ಹೇಳಬೇಕಿಲ್ಲ. ನನ್ನ ಅಚ್ಚರಿ, ಅಭಿಮತವನ್ನು ಯಾರಲ್ಲಿ ಹಂಚಿಕೊಳ್ಳಲಿ ಅಂತ ತಳಮಳಿಸಿದೆ. 'ನೆನೆದಾತ ಎದುರಿನಲ್ಲಿ' ಎನ್ನುವ ಹಾಗೆ ನಾಣಿ ಸಿಕ್ಕ. ಆತ ನನ್ನ ಹಳೆಯ ಶಿಷ್ಯೋತ್ತಮ. ''ಪರ್ವಾಗಿಲ್ಲ ಸಾರ್, ನಾನು ನಿಮ್ಮನ್ನು ನೋಡಿದೆ ಅಂತ ಸಂಕೋಚ ಬೇಡ. ಹೋಗಿ ಆರಾಮವಾಗಿ ಉದ್ದಿನ ವಡೆ ಚಪ್ಪರಿಸಿ ಬನ್ನಿ'' ಎಂದು ಕೆಣಕಿದ. ''ನೋಡು, ಅದೆಲ್ಲ ಹಾಗಿರ್ಲಿ... ಈ ಹೋಟೆಲ್ ಅಷ್ಟೊಂದು ರುಚಿಯಾಗಿ ಉದ್ದಿನ ವಡೆ ಮಾಡುತ್ತಲ್ಲ, ಅದರ ಕಲಾತ್ಮಕತೆ, ಅಚ್ಚುಕಟ್ಟುತನವನ್ನ ಖಂಡಿತವಾಗಿ ನಾನು ಮೆಚ್ತೀನಿ. ಆದರೆ ಇಷ್ಟೊಂದು ಮಂದಿ ಕ್ಯೂ ನಿಂತಿದಾರಲ್ಲ, ಅವರ ಪೈಕಿ ಯಾರಾದ್ರು ಇಬ್ಬರು ಮೂವರಾದ್ರೂ ಸರೀನೆ... ಹೀಗೆ ವಡೆ ಹೇಗೆ ಮಾಡೋದು? ಎಷ್ಟು ಪ್ರಮಾಣದಲ್ಲಿ ಏನೇನು ಹಾಕಿ ಎಷ್ಟು ಕಾಲ ನಾದಿಸಬೇಕು ಅಂತ ಯೋಚನೆ ಮಾಡಿದಾರೆಯೆ...'' ಎಂದೆ. ನಾಣಿ,

ನಮ್ಮ ಶೇಷು ಅಂಕಲ್‌ಗೆ ಅದು ಏನು ಮೋಡಿ ಮಾಡಿತೊ ಕಾಣೆ. ಅವರ ಒಬ್ಬನೇ ಮಗ ಅಮೆರಿಕೆಯಲ್ಲಿ. ಅಲ್ಪ ಸ್ವಲ್ಪ ಹಣ ಕೂಡಿಸಿಕೊಂಡು ಒಂದು ಫ್ಲ್ಯಾಟ್ ಖರೀದಿಸಿದರು. ಇದ್ದ ಹದಿನೈದು ಇನ್‌ಟು ಮೂವತ್ತು ನಿವೇಶನ ಮಾರಿದ್ದರು. ಆಗಿದ್ದೇನು ಅಂದುಕೊಂಡಿದ್ದೀರಿ ! ಫ್ಲ್ಯಾಟ್ ಪ್ರತಿಷ್ಠಿತ ಜಾಗದಲ್ಲಿದೆ ಅನ್ನುವುದನ್ನು ಬಿಟ್ಟರೆ ಸಮರ್ಪಕ ನೀರು ಸರಬರಾಜಿಲ್ಲ, ವಿದ್ಯುತ್ ಕೈಕೊಟ್ಟರೆ ಜನರೇಟರ್ ಇದೆ, ಸೆಕ್ಯುರಿಟಿ ಇದೆ ಎಂದೆಲ್ಲ ಭರವಸೆ ನೀಡಲಾಗಿತ್ತು. ಆದರೆ ತಾಂತ್ರಿಕ ಕಾರಣವೊಡ್ಡಿ ನಾಳೆ ನಾಡಿದ್ದು ಅನ್ನುತ್ತಿತ್ತು ಅಂಕಲ್‌ಗೆ ಮನೆ ಮಾರಾಟ ಮಾಡಿದ್ದ ಕಂಪನಿ. ಮರೆತಿದ್ದೆ. ಈಜುಕೊಳ, ಆಟೋಟದ ಕಿರು ಮೈದಾನ, ಉದ್ಯಾನವನ್ನೂ ಆಕರ್ಷಕ ಜಾಹೀರಾತಿನಲ್ಲಿ ತೋರಿಸಲಾಗಿತ್ತು. ಅಬ್ಬ ! ಆ ಜಾಹೀರಾತು ಕಂಡು ಆಗಸದಲ್ಲಿ ತೇಲಿಹೋಗದವರು ತಾನೆ ಯಾರು ? ಸದ್ಯ, ಕುಡಿಯಲೂ ಸಹ ನೀರಿಲ್ಲದಿರುವಾಗ ಇನ್ನೆಂತು ಈಜುಕೊಳ ಹೇಳಿ. ಎಲ್ಲ ಫ್ಲ್ಯಾಟ್‌ಗಳೂ ಈ ದುರವಸ್ಥೆಯಲ್ಲಿದ್ದವು ಅಂತ ನಾನು ಹೇಳುತ್ತಿಲ್ಲ. ಆದರೆ ಶೇಷು ಅಂಕಲ್ ಮತ್ತು ರುಕ್ಕು ಆ್ಯಂಟಿ, ''ನೋಡಪ್ಪ, ನಮ್ಮ ಪಾಡು ಹೇಗಾಯ್ತು? ಹಾಯಾಗಿ ಇದ್ದಿದ್ದ ನಾಲ್ಕೂವರೆ ನೆಲ ಕಳ್ಕೊಂಡು ಆಗಸದ ಹೂವಿಗೆ ಆಸೆಪಟ್ವಲ್ಲ, ಯಾರಿಗೂ ಬೇಡ ನಮ್ಮೀ ಅವಸ್ಥೆ, ಹಾಡು ಪಾಡು'' ಎಂದು ಪರಿತಪಿಸುತ್ತಿದ್ದಾರೆ, ಸೀಮೆಎಣ್ಣೆ ಬುಡ್ಡಿ ಹೊತ್ತಿಸ್ಕೊಂಡು ! ಅಂಕಲ್ ಅಡಿಗರ ಪ್ರಸಿದ್ಧ ಕವನದ ಸಾಲು 'ಇರುವುದೆಲ್ಲವ ಬಿಟ್ಟು ಇರದುದರ ಕಡೆಗೆ ತುಡಿವುದೇ ಜೀವನ' ಎಂಬುದನ್ನು ಅದೆಷ್ಟು ಬಾರಿ ಉದ್ಗರಿಸಿದ್ದಾರೊ ಕಾಣೆ.

✶ ✶ ✶

ಇವೊತ್ತಿಗೆ, ಸರಿಯಾಗಿ ಒಂದು ವಾರದ ಹಿಂದೆ, ನಮ್ಮ ಎದಿರು ಮನೆಯಲ್ಲಿ ಎಲ್ಲಿಲ್ಲದ ಸಡಗರ. ಗಂಡ, ಹೆಂಡತಿ, ಇಬ್ಬರು ಮಕ್ಕಳು (ಒಂದು ಗಂಡು, ಇನ್ನೊಂದು ಹೆಣ್ಣು) ಮನೆಯನ್ನೆಲ್ಲ ಗುಡಿಸಿ ಸಾರಿಸಿ ಒಪ್ಪ ಓರಣವಾಗಿಸಿದ್ದರು. ಸಂಜೆ ಬೇಡ, ಮಧ್ಯಾಹ್ನವೇ ತಂದುಬಿಡೋಣ ನಾ ಹೇಳಿದ ಬಣ್ಣದ್ದೇ, ಅಂದರೆ ಎಣ್ಣೆಗೆಂಪು ರಂಗಿನ ಕಾರನ್ನು ಎಂದಿದ್ದಳು ಪತಿಗೆ ಆಕೆ. ಅದೇನು ಉತ್ಸಾಹದಿಂದ ನಿಖಿಲ್ ಮತ್ತು ವರ್ಷ ಅಪ್ಪನೊಂದಿಗೆ ಕಾರಿನಲ್ಲಿ ಬಂದಿಳಿದರು ಮನೆ ಮುಂದೆ?! ಸೌಜನ್ಯ ಪತಿಯೊಂದಿಗೆ ಕಾರಿಗೆ ಆರತಿ ಬೆಳಗಿದ್ದಳು. ನೆರೆಹೊರೆಯವರಿಗೆ ಲಾಡು, ಖಾರ ಹಂಚಿಕೆಯಾಯಿತು. ನಿಂಬೆ ಪಾನಕ ಕುಡಿದು, ತಣ್ಣಗಿರಿ ಅಂತ ಎಲ್ಲರೂ ಹಾರೈಸಿದರು. ಈ 'ಆದರೆ' ಎನ್ನುವುದೊಂದುಂಟಲ್ಲ, ಅದೇ ಮೇಲುಗೈ ಸಾಧಿಸಿತ್ತು. ಏಕೆಂದರೆ ಕಾರು ನಿಲ್ಲಿಸಲು ಜಾಗದ ಅಭಾವ. ಹೇಳಿಕೇಳಿ ಇವರದು ಚಿಕ್ಕ ಮನೆ. ತಮ್ಮದೇ ಮನೆ ಮುಂದೆ ಕಾರು ನಿಲ್ಲಿಸಿದರೂ ಅಕ್ಕಪಕ್ಕದ ಮನೆಯವರು ಅವರ ಬೈಕ್ ಅಥವಾ ಕಾರನ್ನು ಒಳಗೆ ತರಲು, ಹೊರಗೆ ತೆಗೆದುಕೊಂಡು ಹೋಗಲು ಆಗದು. ಶುರುವಾಗಿದೆ ಆಗಲೇ ಪರಸ್ಪರ ವಾದ, ವ್ಯಾಜ್ಯ, ಕಟಕಿ ಮಾತು. ಸೌಜನ್ಯ ತನ್ನ ಪತಿಗೆ ''ರೀ, ನಂಗೆ ಬುದ್ಧಿ ಇಲ್ಲ ಅಂದ್ರೆ ನಿಮಗೇನಾಗಿತ್ತು? ಕಾರು ತರೋಕೆ ಮುಂಚೆ ಪಾರ್ಕಿಂಗಿಗೆ ಜಾಗ ಎಲ್ಲಿ ಅಂತ ಯೋಚ್ನೆ ಮಾಡೋದಲ್ವ, ?'' ಮುಂತಾಗಿ ತರಾಟೆ ಮಾಮೂಲು.

✶ ✶ ✶

ಮೇಲಿನ ಮೂರು ಸಂಗತಿಗಳನ್ನು ಅವಲೋಕಿಸಿದಾಗ ಸಹಜವಾಗಿ ಒಂದು ಪ್ರಶ್ನೆ; ಉದ್ದಿನ ವಡೆ, ಫ್ಲ್ಯಾಟ್, ಕಾರು ಆ ಪರಿ ಮೋಡಿ ಮಾಡಿತಲ್ಲ, ಖಂಡಿತ ಅವು ಮಾಯೆಯೇ ಇರಬೇಕಲ್ಲವೆ ? ಉತ್ತರವಿತ್ತಿದ್ದಾನೆ ಎಂಟೂವರೆ ಶತಮಾನಗಳ ಹಿಂದೆಯೆ ಮಹಾನುಭಾವ ಅಲ್ಲಮ. '... ಮನದ ಮುಂದಣ ಆಸೆ ಮಾಯೆ.'

**ಬಿಂಡಿಗನವಿಲೆ ಭಗವಾನ್**

೩೬-ಬಿ, ೯ನೇ ಮುಖ್ಯರಸ್ತೆ, ಬನಶಂಕರಿ ಮೊದಲ ಹಂತ, ಎರಡನೇ ಬ್ಲಾಕ್ ಬೆಂಗಳೂರು - ೫೬೦ ೦೫೦

# ಹಿರಿಯ ಕಮ್ಯುನಿಸ್ಟ್ ನಾಯಕ

# ಕಕ್ಕಿಲ್ಲಾಯ



**ಕ**ಳೆದ ತಿಂಗಳು 'ಹೊಸತು'ನಲ್ಲಿ ಪ್ರಕಟವಾದ 'ಮೊದಲ ಪಾರ್ಲಿಮೆಂಟ್ ಸದಸ್ಯನಾಗಿ ನನ್ನ ಅನುಭವ' ಬಿ. ವಿ. ಕಕ್ಕಿಲ್ಲಾಯರವರ ಕೊನೆಯ ಲೇಖನ. ಈ ಹಿರಿಯ ಕಮ್ಯುನಿಸ್ಟ್ ನಾಯಕ 'ಹೊಸತು' ಪತ್ರಿಕೆ ಪ್ರಾರಂಭವಾದಂದಿನಿಂದ ಅದರೊಂದಿಗೆ ನಿಕಟವಾದ ಸಂಪರ್ಕ ಇರಿಸಿಕೊಂಡಿದ್ದು, ಆಗಾಗ ಲೇಖನಗಳನ್ನು ನೀಡುತ್ತಿದ್ದರು. ತೊಂಬತ್ತಮೂರರ ಹರೆಯದಲ್ಲೂ ಚುರುಕಾಗಿ ಚಿಂತಿಸುತ್ತಿದ್ದ ಕರ್ನಾಟಕದ ಮಾರ್ಕ್ಸ್‌ವಾದಿ ಚಿಂತಕರಲ್ಲೊಬ್ಬರಾದ ಬೇವಿಂಜೆ ವಿಷ್ಣು ಕಕ್ಕಿಲ್ಲಾಯ (೧೯೧೯ ಏಪ್ರಿಲ್ ೧೧ರಿಂದ ೨೦೧೨ ಜೂನ್ ೪) ಅವರು ಜೂನ್ ೪ರಂದು ಸೋಮವಾರ ಮುಂಜಾವಿನಲ್ಲಿ ನಿಧನ ಹೊಂದಿದರೆಂದು ತಿಳಿಸಲು ವಿಷಾದಿಸುತ್ತೇವೆ. ನಮ್ಮನ್ನಗಲಿದ ಈ ಹಿರಿಯ ಚೇತನಕ್ಕೆ 'ಹೊಸತು' ಅಂತಿಮ ನಮನ ಸಲ್ಲಿಸುತ್ತದೆ. ಗೌರವಪೂರ್ಣವಾದ ವಿದಾಯ ಹೇಳುತ್ತದೆ.

ಬೇವಿಂಜೆ ವಿಷ್ಣು ಕಕ್ಕಿಲ್ಲಾಯ, ನಮಗೆಲ್ಲ ಕಕ್ಕಿಲ್ಲಾಯರು ಇಲ್ಲವೆ ಚಿಕ್ಕದಾಗಿ 'ಬಿ.ವಿ.ಕೆ.' ಕಳೆದ ಸಲ ನಾನು ಅವರನ್ನು ಭೇಟಿಯಾದದ್ದು, ಜೊತೆಯಲ್ಲಿ ಕುಳಿತು ಹೋಟೆಲಿನಲ್ಲಿ ಊಟ ಮಾಡಿದ್ದು ಅವರ ತೊಂಬತ್ತನೆ ವಯಸ್ಸಿನ ಹುಟ್ಟುಹಬ್ಬದ ಸಮಾರಂಭದಲ್ಲಿ ಬೆಂಗಳೂರಿನಲ್ಲಿ. ಈ ಸಮಾರಂಭ ನಡೆದದ್ದು ಕರ್ನಾಟಕದ ಇನ್ನೊಬ್ಬ ಕಮ್ಯುನಿಸ್ಟ್ ನಾಯಕರ ಗೌರವಾರ್ಥ ಸ್ಥಾಪಿತವಾಗಿರುವ ಎಂ. ಎಸ್. ಕೃಷ್ಣನ್ ಸ್ಮರಣಸಂಸ್ಥೆ ಆಶ್ರಯದಲ್ಲಿ. ಅಂದು ಅತ್ಯಂತ ಭಾವುಕರಾಗಿದ್ದ ಕಕ್ಕಿಲ್ಲಾಯ ಸುಮಾರು ಒಂದು ಗಂಟೆ ಮಾತನಾಡಿದ್ದು ಇನ್ನೂ ನೆನಪಿನಲ್ಲಿದೆ. ಈ ಸಂದರ್ಭದಲ್ಲಿ ಅವರನ್ನು ಗೌರವಿಸಲು 'ನಿರಂತರ' ಎಂಬ ಸಂಭಾವನಾ ಗ್ರಂಥವನ್ನು ಅರ್ಪಿಸಲಾಯಿತು. ಸಾಕಷ್ಟು ದಣಿವಾಗಿದ್ದ ಅವರೊಂದಿಗೆ ಊಟ ಮಾಡಿ ಹಿಂದಿನ ದಿನಗಳನ್ನು ನೆನಪು ಮಾಡಿಕೊಳ್ಳಲು ಅಂದು ನನ್ನ ಜೊತೆಗಿದ್ದುದು ಎಂ. ಸಿ. ನರಸಿಂಹನ್, ಕೆ. ಪಿ. ಸ್ವಾಮಿ, ಮೋಹನಶೆಟ್ಟಿ ಮತ್ತು ಕಕ್ಕಿಲ್ಲಾಯರ ಹಿರಿಯ ಮಗ ಡಾ|| ಶ್ರೀನಿವಾಸ. ತುಂಬ ದಣಿದಿದ್ದರೂ ಅವರು ತೋರಿದ ಉತ್ಸಾಹ ಅಚ್ಚರಿ ಮೂಡಿಸುತ್ತಿತ್ತು. ತುಂಬು ಬದುಕನ್ನು, ಕೊನೆಯವರೆಗೂ ಜೀವನೋತ್ಸಾಹ ಮತ್ತು ಜನಪರ ಕಾಳಜಿಯನ್ನು ಹೊಂದಿದ್ದ ಅವರು ಇಂದು ನಮ್ಮೊಡನಿಲ್ಲ. ಅವರ ಆದರ್ಶಗಳು, ನಡೆಸಿದ ಹೋರಾಟಗಳು, ಅವರ ಚಿಂತನೆಗಳು ಸದಾ ನಮ್ಮ ನೆನಪಿನಲ್ಲಿ ಉಳಿದಿರುತ್ತವೆ. ಅವರ ನಿಧನದಿಂದ ಕರ್ನಾಟಕ ರಾಜ್ಯ ಒಬ್ಬ ಹಿರಿಯ ಮುತ್ಸದ್ದಿಯನ್ನು ಕಳೆದುಕೊಂಡಿದೆ. ಭಾರತ ಕಮ್ಯುನಿಸ್ಟ್ ಪಕ್ಷಕ್ಕೆ ಅಪಾರ ನಷ್ಟವಾಗಿದೆ. ವೈಯಕ್ತಿಕವಾಗಿ ನನಗೆ ಹಿರಿಯಣ್ಣನಂತೆ ಇದ್ದ ಮಿತ್ರನನ್ನು ಕಳೆದುಕೊಂಡಂತಾಗಿದೆ. ನನ್ನ ಅವರ ಒಡನಾಟ ಆರು ದಶಕಗಳಿಗೂ ಹೆಚ್ಚಿನದು.

ಕಕ್ಕಿಲ್ಲಾಯರನ್ನು ನಾನು ಮೊದಲು ಭೇಟಿಯಾದದ್ದು ಸಾವಿರದ ಒಂಬೈನೂರ ನಲವತ್ತೊಂಬತ್ತರಲ್ಲಿ. ಇನ್ನೂ ವಿದ್ಯಾರ್ಥಿಯಾಗಿದ್ದ ನನಗೆ ಮಾರ್ಕ್ಸ್‌ವಾದ ಬೋಧಿಸಿದ ಪ್ರಥಮ ಗುರು. ದಾವಣಗೆರೆಯಲ್ಲಿ ಸುಮಾರು ಹತ್ತು ದಿನಗಳು ನಡೆದ ಪಾರ್ಟಿ ಶಾಲೆಯಲ್ಲಿ ಹೊಸದಾಗಿ ಪಾರ್ಟಿಗೆ ಬಂದಿದ್ದ ನಾನು, ಕೆ. ಎಲ್. ಗೋಪಾಲಕೃಷ್ಣರಾವ್, ಬಳ್ಳಾರಿಯ ಮಲೆಬೆನ್ನೂರ ಮುಂತಾದ ಹತ್ತು ಹನ್ನೆರಡು ಮಂದಿಗೆ ಪಾಠ ಹೇಳಿದ ಗುರುಗಳಲ್ಲೊಬ್ಬರು ಅವರು. ದ್ವಂದ್ವಮಾನ ಭೌತವಾದ ಕುರಿತು ಅವರು ಮಾಡಿದ ಪಾಠ ಈಗಲೂ ನನ್ನ ನೆನಪಿನಲ್ಲಿದೆ. ಒಂದೇ ಸೂರಿನಡಿ ಇದ್ದ ಆ ಭೂಗತ ದಿನಗಳಲ್ಲಿ ಬೆಳೆದ ಆತ್ಮೀಯತೆ ಕೊನೆಯ ದಿನಗಳವರೆಗೆ ಇತ್ತು. ಅವರ ಜೊತೆಯಲ್ಲಿ ಕೆಲಸ ಮಾಡಲು ಅವಕಾಶ ದೊರೆತದ್ದು 'ಜನಶಕ್ತಿ' ಪತ್ರಿಕೆ ಪ್ರಾರಂಭಿಸಿದಾಗ, ೧೯೫೦ರ ಕೊನೆಯಲ್ಲಿ. ಸಂಪಾದಕ ಮಂಡಳಿಯಲ್ಲಿದ್ದ ಕಕ್ಕಿಲ್ಲಾಯ ಲೇಖನ ಬರೆದುಕೊಡುವುದರಿಂದ ಹಿಡಿದು ಪ್ರೂಫ್ ತಿದ್ದುವುದು, ಪತ್ರಿಕೆ ಮಡಚುವುದು, ಬಂಡಲುಗಳನ್ನು ಕಟ್ಟುವುದು, ರವಾನಿಸುವುದು ಹೀಗೆ ಪತ್ರಿಕೆಯ ಎಲ್ಲ ಕೆಲಸಗಳಲ್ಲೂ ಉತ್ಸಾಹದಿಂದ ಭಾಗವಹಿಸುತ್ತಿದ್ದರು. ಎಂ. ಸಿ. ನರಸಿಂಹನ್ ಪತ್ರಿಕೆಯ ಸಂಪಾದಕ ರಾಗಿದ್ದರು. ನಾನು ಸಹ ಸಂಪಾದಕನಾಗಿ ಪೂರ್ಣ ಕಾಲದ ಪಾರ್ಟಿ ಕಾರ್ಯಕರ್ತನಾಗಿದ್ದೆ.

ಕರ್ನಾಟಕದಲ್ಲಿ ಭಾರತ ಕಮ್ಯುನಿಸ್ಟ್ ಪಕ್ಷವನ್ನು ಕಟ್ಟಿ ಬೆಳೆಸಿದವರಲ್ಲಿ ಒಬ್ಬರಾದ ಕಕ್ಕಿಲ್ಲಾಯರ ಮುಖ್ಯ ಕಾರ್ಯಕ್ಷೇತ್ರ ದಕ್ಷಿಣ ಕನ್ನಡ ಜಿಲ್ಲೆ. ಕಾಸರಗೋಡಿನ ಸಂಪ್ರದಾಯಸ್ಥ ಶ್ರೀಮಂತ ಭೂಮಾಲಿಕರ ಕುಟುಂಬದಿಂದ ಬಂದ ಅವರು ಆಯ್ಕೆಮಾಡಿಕೊಂಡಿದ್ದ ಶೋಷಿತ ವರ್ಗದ ಹೋರಾಟದ ಮುಂಚೂಣಿಯಲ್ಲಿದ್ದದ್ದು ಕಮ್ಯುನಿಸ್ಟ್ ಪಾರ್ಟಿ. ವಿದ್ಯಾರ್ಥಿದೆಸೆಯಲ್ಲಿಯೇ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ್ದ ಅವರು ಕಮ್ಯುನಿಸ್ಟ್ ತತ್ವಗಳಿಗೆ ಆಕರ್ಷಿತರಾದದ್ದು ೧೯೪೦ರಲ್ಲಿ. ತಮ್ಮ ಆತ್ಮಕಥನ 'ಬರೆಯದ ದಿನಚರಿಯ ಮರೆಯದ

ರಾಜ್ಯದಲ್ಲಿ ಪ್ರಮುಖ ಪ್ರಕಾಶನ ಸಂಸ್ಥೆಯಾಗಿ ಪ್ರವರ್ಧಮಾನಕ್ಕೆ ಬಂದಿರುವ ನವಕರ್ನಾಟಕ ಪ್ರಕಾಶನ ಸಂಸ್ಥೆಯ ಸ್ಥಾಪನೆಗೆ ಕಾರಣಕರ್ತರು ಅವರು. ೧೯೬೦ರಲ್ಲಿ ಸ್ಥಾಪನೆಗೊಂಡ ಈ ಪ್ರಕಾಶನ ಸಂಸ್ಥೆಗೆ ಅಗತ್ಯವಾದ ವೇದಿಕೆ ಸಿದ್ಧಗೊಳಿಸಿದವರು. ಕಂಪೆನಿಯ ನಿಯಮಾವಳಿಯ ರಚನೆಯಿಂದ ಅದು ರಿಜಿಸ್ಟರ್ ಆಗುವವರೆಗೆ ಅವರು ಆಗ ಪಟ್ಟುಬಿಡದೆ ಕೆಲಸ ಮಾಡಿದ್ದನ್ನು ನಾನು ಕಂಡಿದ್ದೇನೆ. ಪೂರ್ವಭಾವಿಯಾಗಿ ನಡೆದ ಸಭೆಗಳಲ್ಲಿ ಭಾಗವಹಿಸಿದ್ದೇನೆ. ಸಂಸ್ಥೆಯ ಅಧ್ಯಕ್ಷರಾಗಿ ಐವತ್ತು ವರ್ಷಗಳಲ್ಲಿ ಅವರು ನೀಡಿದ ಸಹಕಾರ ಮತ್ತು ಮಾರ್ಗದರ್ಶನವನ್ನು ವ್ಯವಸ್ಥಾಪಕ ನಿರ್ದೇಶಕ ಆರ್. ಎಸ್. ರಾಜಾರಾಮ್ ಅವರು, ಅವರಿಗೆ ಅರ್ಪಿಸಿದ ಸಂಭಾವನಾ ಗ್ರಂಥ 'ನಿರಂತರ'ದಲ್ಲಿ ಬರೆದಿರುವ ತಮ್ಮ ಲೇಖನದಲ್ಲಿ ಸ್ಮರಿಸಿಕೊಂಡಿದ್ದಾರೆ.

ಸರಳ ವ್ಯಕ್ತಿತ್ವದ ಅವರು ಎಂದೂ ತಾನೊಬ್ಬ ನಾಯಕನೆಂಬ ಹಿರಿಮೆ ತೋರಿದವರಲ್ಲ. ನಮ್ಮ ಜೊತೆಯಲ್ಲಿ ಸರಿಸಮಾನವಾಗಿ ಕೆಲಸ ಮಾಡುತ್ತಿದ್ದ ಅವರು ಎಂದೂ ತಾವು ಹಿರಿಯರೆಂದು ಪ್ರತಿಷ್ಠೆ ತೋರಲಿಲ್ಲ. ಕಟುವಾದ, ಸ್ಪಷ್ಟವಾದ ನಿಲುವು ತಳೆಯುತ್ತಿದ್ದ ಅವರು ಎಂದೂ ತಮ್ಮ ನಿಲುವೇ ಸರಿ ಎಂದು ಪಟ್ಟುಹಿಡಿದವರಲ್ಲ. ಮುಕ್ತವಾಗಿ ವಿಷಯಗಳನ್ನು ಚರ್ಚಿಸುತ್ತಿದ್ದರು. ಹಿರಿಯರಾದರೂ ನಮ್ಮ ವಾದಗಳನ್ನು ತಾಳ್ಮೆಯಿಂದ ಆಲಿಸುತ್ತಿದ್ದರು. ಪಾರ್ಟಿ ಸದಸ್ಯನಾಗಿ ಅರವತ್ತು ವರ್ಷಗಳು ನನಗೆ ಅವರೊಂದಿಗೆ ಇದ್ದ ಒಡನಾಟ ಈಗ ನೆನಪು ಮಾತ್ರ. ಆ ಹಿರಿಯ ಚೇತನಕ್ಕೆ ನನ್ನ ನುಡಿ ನಮನ.

**ಸಿ. ಆರ್. ಕೃಷ್ಣರಾವ್**

ಪುಟಗಳು' ಗ್ರಂಥದಲ್ಲಿ ಅದನ್ನು ವಿವರಿಸಿದ್ದಾರೆ. ಈ ಗ್ರಂಥ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕಮ್ಯುನಿಸ್ಟ್ ಚಳವಳಿಯ ಇತಿಹಾಸವನ್ನು, ನಡೆಸಿದ ಜನಪರ ಹೋರಾಟಗಳನ್ನು ಹಾಗೂ ಕರ್ನಾಟಕದಲ್ಲಿ ಪಾರ್ಟಿ ಬೆಳವಣಿಗೆಯನ್ನು ದಾಖಲಿಸಿದೆ. ಮುಂದೆ ಕರ್ನಾಟಕದಲ್ಲಿ ಕಮ್ಯುನಿಸ್ಟ್ ಪಾರ್ಟಿ ಇತಿಹಾಸ ಬರೆಯುವವರಿಗೆ ಇದು ಒಂದು ಆಕರಗ್ರಂಥ.

ಕರ್ನಾಟಕ ಪ್ರಾಂತ ಕಮ್ಯುನಿಸ್ಟ್ ಪಾರ್ಟಿಯ ಸೆಕ್ರೆಟೇರಿಯಟ್ ಸದಸ್ಯರಾಗಿದ್ದ ಕಕ್ಕಿಲ್ಲಾಯ ೧೯೫೨ರಲ್ಲಿ ರಚನೆಯಾದ ಮೊದಲ ರಾಜ್ಯಸಭೆಗೆ ಅಂದಿನ ಮದರಾಸು ಪ್ರಾಂತದ ಶಾಸನ ಸಭೆಯಿಂದ ಆಯ್ಕೆಯಾದರು. ಕರ್ನಾಟಕ ಏಕೀಕರಣದ ಕುರಿತು ದೇಶದ ಪಾರ್ಲಿಮೆಂಟ್ ಸದನದಲ್ಲಿ ಕಹಳೆ ಊದಿದ ಮೊದಲ ಕನ್ನಡಿಗರಾದ ಅವರು ಆ ಗುರಿಯ ಸಾಧನೆಗಾಗಿ ಸತತವಾಗಿ ಶ್ರಮಿಸಿದವರು. ಕರ್ನಾಟಕ ಏಕೀಕರಣಕ್ಕಾಗಿ ಹೋರಾಟ ನಡೆಸುತ್ತಿದ್ದ ಅಖಿಲ ಕರ್ನಾಟಕ ರಾಜ್ಯ ನಿರ್ಮಾಣ ಪರಿಷತ್ತಿನ ಪ್ರಧಾನ ಕಾರ್ಯದರ್ಶಿಯಾಗಿದ್ದರು. ಹಂಪಿಯಲ್ಲಿ ಜರುಗಿದ 'ಅಕರಾನಿ' ಪರಿಷತ್ತಿನ ಸಮ್ಮೇಳನದಲ್ಲಿ ಅವರು ಪ್ರಮುಖ ಪಾತ್ರ ವಹಿಸಿದ್ದರು. ಸಮ್ಮೇಳನದಲ್ಲಿ ನಾನೂ ಭಾಗವಹಿಸಿದ್ದೆನಾದ್ದರಿಂದ ಕಕ್ಕಿಲ್ಲಾಯರ ಕಾರ್ಯಚಟುವಟಿಕೆಯನ್ನು ವೀಕ್ಷಿಸಲು ಅವಕಾಶವಾಯಿತು. ರಾಜ್ಯಸಭೆಯ ಸದಸ್ಯರಾಗಿದ್ದ ಕಕ್ಕಿಲ್ಲಾಯ ರಾಜ್ಯದಾದ್ಯಂತ ಪ್ರವಾಸ ಮಾಡಿದರು. ರಾಜ್ಯದಲ್ಲಿ ಪರಿಚಿತರಾದ ಕಮ್ಯುನಿಸ್ಟ್ ನಾಯಕರಲ್ಲೊಬ್ಬರಾದರು. ಅವರು ಭಾಗವಹಿಸಿದ್ದ ಇನ್ನೊಂದು ಮುಖ್ಯ ಹೋರಾಟ ಗೋವಾ ವಿಮೋಚನೆಗಾಗಿ ನಡೆಸಿದ ಸತ್ಯಾಗ್ರಹ. ಮಂಗಳೂರಿನಿಂದ ಹೊರಟ ತಂಡದ ನೇತೃತ್ವ ವಹಿಸಿದ್ದ ಅವರು ಗೋವಾದ ಗಡಿಯನ್ನು ತಲುಪಿ ಸತ್ಯಾಗ್ರಹದಲ್ಲಿ ಪಾಲ್ಗೊಂಡಿದ್ದರು.

ಕರ್ನಾಟಕ ಪ್ರಾಂತ ರೈತ ಸಂಘದ ಅಧ್ಯಕ್ಷರಾಗಿದ್ದ ಕಕ್ಕಿಲ್ಲಾಯರಿಗೆ ಭೂಸುಧಾರಣೆಗಳಲ್ಲಿ ಅತೀವವಾದ ಆಸಕ್ತಿ ಇತ್ತು. ಪಾರ್ಟಿಯ ಪ್ರಾಂತ ಸಮಿತಿಯ ಕಚೇರಿಯಲ್ಲಿದ್ದ ನಾನು ಅವರು ರಾಜ್ಯದಲ್ಲಿ ಭೂಸುಧಾರಣೆಗಳಿಗಾಗಿ ರಚನೆಯಾಗಿದ್ದ 'ಜತ್ತಿ ಸಮಿತಿ'ಗೆ ಮೆಮೋರಾಂಡಮ್ ಒಂದನ್ನು ಸಲ್ಲಿಸಲು ಹಗಲು-ರಾತ್ರಿ ಶ್ರಮಿಸುತ್ತಿದ್ದುದನ್ನು ಕಂಡಿದ್ದೇನೆ. ಅದೇ ರೀತಿಯಲ್ಲಿ ಪಾರ್ಟಿಯ ಪರವಾಗಿ ರಾಜ್ಯ ಪುನರ್ವಿಂಗಡಣಾ ಸಮಿತಿಗೆ ಮನವಿ ತಯಾರಿಸುವುದರಲ್ಲೂ ಬಹುಮುಖ್ಯ ಪಾತ್ರ ವಹಿಸಿದ್ದರು. ಭೂದಾನ ಚಳವಳಿಯನ್ನು ನಡೆಸುತ್ತಿದ್ದ ವಿನೋಬಾ ಭಾವೆ ಅವರು ಬೆಂಗಳೂರಿಗೆ ಭೇಟಿ ನೀಡಿದ್ದಾಗ ಕರ್ನಾಟಕ ಕಮ್ಯುನಿಸ್ಟ್ ಪಕ್ಷದ ಪರವಾಗಿ ನಾವು ನಡೆಸಿದ ಸಂದರ್ಶನ ಇನ್ನೂ ನನ್ನ ನೆನಪಿನಲ್ಲಿ ಹಸಿರಾಗಿದೆ. ವಿನೋಬಾ ಭಾವೆ ಅವರನ್ನು ಭೇಟಿಯಾದ ತಂಡದಲ್ಲಿ ಎನ್. ಎಲ್. ಉಪಾಧ್ಯಾಯ, ಕಕ್ಕಿಲ್ಲಾಯ, ಎಂ. ಸಿ. ನರಸಿಂಹನ್ ಮತ್ತು ನಾನು ಇದ್ದೆವು. ಅವರೊಂದಿಗೆ ನಡೆಸಿದ ಮಾತುಕತೆಗಳಲ್ಲಿ ಕಕ್ಕಿಲ್ಲಾಯ ಪ್ರಧಾನ ಪಾತ್ರ ವಹಿಸಿದ್ದರು. ೧೯೫೬ರಲ್ಲಿ 'ಜನಶಕ್ತಿ' ಪುನರಾರಂಭವಾದಾಗ ನಾನು ಸಂಪಾದಕನಾದೆ. ಅವರು ಆಗ ನನಗೆ ನೀಡಿದ ಸಹಕಾರ ಮತ್ತು ಮಾರ್ಗದರ್ಶನವನ್ನು ಎಂದಿಗೂ ಮರೆಯಲಾರೆ. ಸಂಪಾದಕನ ಹೊಣೆ ಹೊತ್ತು ನನಗೆ ಧೈರ್ಯ ನೀಡಿದವರು ಅವರೇ. ಪತ್ರಿಕೆಗೆ ಅವರು ತಪ್ಪದೆ ಲೇಖನಗಳನ್ನು ಬರೆಯುತ್ತಿದ್ದರು. ಭೂಸುಧಾರಣೆಗಳ ಕುರಿತು ಅವರು 'ಜನಶಕ್ತಿ'ಗೆ ಬರೆದ ಲೇಖನಗಳ ಸಂಗ್ರಹ ಆ ವಿಷಯದಲ್ಲಿ ಒಂದು ಉತ್ತಮ ಗ್ರಂಥವಾಗುತ್ತಿತ್ತು. ಮಂಗಳೂರಿನಿಂದ ಆಗ ಪ್ರಕಟವಾಗುತ್ತಿದ್ದ 'ಅರುಣ' ವಾರಪತ್ರಿಕೆಗೂ ಅವರು ಲೇಖನಗಳನ್ನು ಬರೆಯುತ್ತಿದ್ದರು. ಸೈದ್ಧಾಂತಿಕ ವಿಚಾರಗಳನ್ನು ಕುರಿತು ಅವರು ಹೆಚ್ಚಾಗಿ ಲೇಖನಗಳನ್ನು ನೀಡುತ್ತಿದ್ದರು. ಪಾರ್ಟಿಯಲ್ಲಿ ಬರಹವನ್ನು ರೂಢಿಸಿಕೊಂಡವರು ಕಕ್ಕಿಲ್ಲಾಯರೇ. ಮುಂದೆ ಅವರು ಹಲವು ಕೃತಿಗಳನ್ನು ರಚಿಸಿ ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ಹಾಗೂ ಇತರ ಪುರಸ್ಕಾರಗಳಿಗೂ ಪಾತ್ರರಾದರು. ನನಗೆ ತುಂಬ ಮೆಚ್ಚುಗೆಯಾದ ಅವರ ಕೃತಿ 'ಕಮ್ಯುನಿಸಂ'. ಈ ಕಿರುಹೊತ್ತಿಗೆಯು ಕಮ್ಯುನಿಸ್ಟ್ ಕಾರ್ಯಕರ್ತರೆಲ್ಲರೂ ಈಗಲೂ ಪಠ್ಯಪುಸ್ತಕದಂತೆ ಓದಲೇ ಬೇಕಾದ್ದು. ಅವರ ಇತರ ಕೃತಿಗಳಲ್ಲಿ ಮುಖ್ಯವಾದುವು ಕಾರ್ಲ್ ಮಾರ್ಕ್ಸ್ ಬದುಕು-ಬರಹ, ಫ್ರೆಡರಿಕ್ ಎಂಗೆಲ್ಸ್ ಜೀವನ-ಚಿಂತನ. ಭಾರತೀಯ ದರ್ಶನಗಳು, ಪ್ರಾಚೀನ ಭಾರತದಲ್ಲಿ ಭೌತಿಕವಾದ. ಪಾರ್ಟಿ ಇಬ್ಭಾಗವಾದಮೇಲೆ ಕಕ್ಕಿಲ್ಲಾಯ ಕೆಲ ಕಾಲ ಪ್ರಾಂತ ಸಮಿತಿಯ



ಆರ್. ಎಸ್. ರಾಜಾರಾಮ್, ಬಿ. ವಿ. ಕಕ್ಕಿಲ್ಲಾಯ, ಸಿ. ಆರ್. ಕೃಷ್ಣರಾವ್, ಎಂ. ಸಿ. ನರಸಿಂಹನ್




ಕಾರ್ಯದರ್ಶಿಯಾಗಿದ್ದರು. ಪಾರ್ಟಿಯ ಮುಖ ಪತ್ರ 'ಕೆಂಬಾವುಟ'ದ ಸಂಪಾದಕರಾಗಿದ್ದರು.

೧೯೬೨ರಲ್ಲಿ ಚೀಣೀ ದುರಾಕ್ರಮಣ ನಡೆದಾಗ ಕಮ್ಯುನಿಸ್ಟರಾಗಿದ್ದ ನಾವೆಲ್ಲ ಬೆಂಗಳೂರು ಸೆಂಟ್ರಲ್ ಜೈಲಿನಲ್ಲಿ ಬಂಧಿಗಳಾಗಿದ್ದೆವು. ಕಕ್ಕಿಲ್ಲಾಯರು ನಮ್ಮೊಂದಿಗಿದ್ದರು. ಸುಮಾರು ಆರು ತಿಂಗಳ ಅವಧಿಯಲ್ಲಿ ಪಾರ್ಟಿಯಲ್ಲಿ ಮುಂದೆ ಆಗಬಹುದಾದ ಸೂಚನೆಗಳು ಎದ್ದು ಕಾಣುತ್ತಿತ್ತು. ಬೇಸರದ ಆ ದಿನಗಳಲ್ಲಿ ನಮಗೆ ಉತ್ಸಾಹ ತುಂಬುತ್ತಿದ್ದುದು ಕಕ್ಕಿಲ್ಲಾಯರೆ. ಅಧ್ಯಯನಕ್ಕೆ ಹೆಚ್ಚು ಒತ್ತುಕೊಡುತ್ತಿದ್ದ ಅವರು ನಮಗೆ ಹೇಳುತ್ತಿದ್ದುದು ಸೈದ್ಧಾಂತಿಕವಾಗಿ ಸಜ್ಜುಗೊಂಡಿದ್ದು, ದೃಢವಾಗಿ ಬದ್ಧರಾಗಿದ್ದರೆ ಎಂಥ ಪರಿಸ್ಥಿತಿಯನ್ನಾದರೂ ಎದುರಿಸಬಹುದು ಎಂಬುದಾಗಿ. ತಮ್ಮ ಇಡೀ ಜೀವಿತದಲ್ಲಿ ಇದನ್ನೇ ಅವರು ಸೂತ್ರವಾಗಿರಿಸಿಕೊಂಡಿದ್ದರಿಂದ ಎಂದೂ ಧೃತಿಗೆಡಲಿಲ್ಲ ಎಂದು ಕಾಣುತ್ತದೆ. ಕರ್ನಾಟಕದ ಮೊದಲ ರಾಜ್ಯಸಭೆ ಸದಸ್ಯರಾಗಿ ಚರ್ಚೆಗಳಲ್ಲಿ ಭಾಗವಹಿಸಿ ಹೆಸರು ಗಳಿಸಿದ್ದ ಕಕ್ಕಿಲ್ಲಾಯ ಉತ್ತಮ ಶಾಸಕರಾಗಿಯೂ ಖ್ಯಾತಿ ಗಳಿಸಿದ್ದರು. ದಕ್ಷಿಣ ಕನ್ನಡ ಜಿಲ್ಲೆಯಿಂದ ಎರಡು ಬಾರಿ ಅವರು ರಾಜ್ಯ ವಿಧಾನಸಭೆಯ ಸದಸ್ಯರಾಗಿ ಆಯ್ಕೆಯಾಗಿದ್ದರು. ನವಕರ್ನಾಟಕ ಪ್ರಕಾಶನ ಸಂಸ್ಥೆ 'ಕರ್ನಾಟಕ ಏಕೀಕರಣ ಇತಿಹಾಸ' ಗ್ರಂಥ ಪ್ರಕಟಣೆಯ ಯೋಜನೆ ಕೈಗೊಂಡಾಗ ಅವರು ಪೂರ್ಣ ಸಹಕಾರ ನೀಡಿದರು. ಲೇಖಕ ಗೋಪಾಲ ರಾವ್ ಮತ್ತು ನಾನು ಮಂಗಳೂರಿಗೆ ಹೋಗಿ ಅವರನ್ನು ಸಂದರ್ಶಿಸಿದ್ದೆವು. ಆಗ ಅವರು ತುಂಬ ಉತ್ಸಾಹದಿಂದ ನಮ್ಮೊಡನೆ ಎರಡು ದಿನ ಓಡಾಡಿ ಕಾಸರಗೋಡಿನ ಕೈಯಾರ ಕಿಞ್ಞಣ್ಣ ರೈ ಮತ್ತು ಏಕೀಕರಣಕ್ಕಾಗಿ ಹೋರಾಡಿದ ಇತರ ಪ್ರಮುಖರನ್ನು ಪರಿಚಯಿಸಿದರು.

ರಾಜ್ಯದಲ್ಲಿ ಪ್ರಮುಖ ಪ್ರಕಾಶನ ಸಂಸ್ಥೆಯಾಗಿ ಪ್ರವರ್ಧಮಾನಕ್ಕೆ ಬಂದಿರುವ ನವಕರ್ನಾಟಕ ಪ್ರಕಾಶನ ಸಂಸ್ಥೆಯ ಸ್ಥಾಪನೆಗೆ ಕಾರಣಕರ್ತರು ಅವರು. ೧೯೬೦ರಲ್ಲಿ ಸ್ಥಾಪನೆಗೊಂಡ ಈ ಪ್ರಕಾಶನ ಸಂಸ್ಥೆಗೆ ಅಗತ್ಯವಾದ ವೇದಿಕೆ ಸಿದ್ಧಗೊಳಿಸಿದವರು ಅವರು. ಕಂಪೆನಿಯ ನಿಯಮಾವಳಿಯ ರಚನೆಯಿಂದ ಅದು ರಿಜಿಸ್ಟರ್ ಆಗುವವರೆಗೆ ಅವರು ಆಗ ಪಟ್ಟುಬಿಡದೆ ಕೆಲಸ ಮಾಡಿದ್ದನ್ನು ನಾನು ಕಂಡಿದ್ದೇನೆ. ಪೂರ್ವಭಾವಿಯಾಗಿ ನಡೆದ ಸಭೆಗಳಲ್ಲಿ ಭಾಗವಹಿಸಿದ್ದೇನೆ. ನಿಧನರಾಗುವ ಒಂದು ತಿಂಗಳ ಹಿಂದೆ ಏಪ್ರಿಲ್ ಒಂದರಂದು ಮಂಗಳೂರಿನ ಬಲ್ಮಠ ರಸ್ತೆಯಲ್ಲಿ ನವಕರ್ನಾಟಕದ ಹೊಸಮಳಿಗೆಯ ಉದ್ಘಾಟನಾ ಸಮಾರಂಭದಲ್ಲಿ ದೀಪ ಬೆಳಗಿ ಭಾಗವಹಿಸಿದ್ದರು. 'ಹೊಸತು'ವಿನಲ್ಲಿ ಕೊನೆಯ ಲೇಖನ, ನವಕರ್ನಾಟಕದಲ್ಲಿ ಕೊನೆಯ ಕಾರ್ಯಕ್ರಮ. ಸಂಸ್ಥೆಯ ಅಧ್ಯಕ್ಷರಾಗಿ ಐವತ್ತು ವರ್ಷಗಳಲ್ಲಿ ಅವರು ನೀಡಿದ ಸಹಕಾರ ಮತ್ತು ಮಾರ್ಗದರ್ಶನವನ್ನು ವ್ಯವಸ್ಥಾಪಕ ನಿರ್ದೇಶಕ ಆರ್. ಎಸ್. ರಾಜಾರಾಮ್ ಅವರು, ಅವರಿಗೆ ಅರ್ಪಿಸಿದ ಸಂಭಾವನಾ ಗ್ರಂಥ 'ನಿರಂತರ'ದಲ್ಲಿ ಬರೆದಿರುವ ತಮ್ಮ ಲೇಖನದಲ್ಲಿ ಸ್ಮರಿಸಿಕೊಂಡಿದ್ದಾರೆ.

ಅವರು ಭಾಗವಹಿಸಿದ್ದ ಕೊನೆಯ ಹೋರಾಟ ಮೇ ೧೮ರಂದು ಮಂಗಳೂರಿನಲ್ಲಿ ನಕ್ಸಲ್ ಹಣೆಪಟ್ಟಿ ಹಚ್ಚಿ ಬಂಧಿಸಲ್ಪಟ್ಟಿರುವ ವಿಠಲ ಮಲೆಕುಡಿಯ ಅವರ ಬಿಡುಗಡೆಗಾಗಿ ನಡೆದ ಪ್ರದರ್ಶನದಲ್ಲಿ ಮಾಡಿದ ಭಾಷಣ. ಸರಳ ವ್ಯಕ್ತಿತ್ವದ ಅವರು ಎಂದೂ ತಾನೊಬ್ಬ ನಾಯಕನೆಂಬ ಹಿರಿಮೆ ತೋರಿದವರಲ್ಲ. ನಮ್ಮ ಜೊತೆಯಲ್ಲಿ ಸರಿಸಮಾನವಾಗಿ ಕೆಲಸ ಮಾಡುತ್ತಿದ್ದ ಅವರು ಎಂದೂ ತಾವು ಹಿರಿಯರೆಂದು ಪ್ರತಿಷ್ಠೆ ತೋರಲಿಲ್ಲ. ಕಟುವಾದ, ಸ್ಪಷ್ಟವಾದ ನಿಲುವು ತಳೆಯುತ್ತಿದ್ದ ಅವರು ಎಂದೂ ತಮ್ಮ ನಿಲುವೇ ಸರಿ ಎಂದು ಪಟ್ಟುಹಿಡಿದವರಲ್ಲ. ಮುಕ್ತವಾಗಿ ವಿಷಯಗಳನ್ನು ಚರ್ಚಿಸುತ್ತಿದ್ದರು. ಹಿರಿಯರಾದರೂ ನಮ್ಮ ವಾದಗಳನ್ನು ತಾಳ್ಮೆಯಿಂದ ಆಲಿಸುತ್ತಿದ್ದರು. ಪಾರ್ಟಿ ಸದಸ್ಯನಾಗಿ ಅರವತ್ತು ವರ್ಷಗಳು ನನಗೆ ಅವರೊಂದಿಗೆ ಇದ್ದ ಒಡನಾಟ ಈಗ ನೆನಪು ಮಾತ್ರ. ಆ ಹಿರಿಯ ಚೇತನಕ್ಕೆ ನನ್ನ ನುಡಿ ನಮನ.

**ಸಿ. ಆರ್. ಕೃಷ್ಣರಾವ್**, 'ಚೌಬೀನ', ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್, ಬೆಂ. - ೮೫



**ಟೆರಿ ಈಗಲ್‌ಟನ್** ಸಂಗ್ರಹಾನುವಾದ : ಜಿ. ರಾಮಕೃಷ್ಣ

೧೯೪೩ರಲ್ಲಿ ಜನಿಸಿದ ಟೆರಿ ಈಗಲ್‌ಟನ್ ಮೂಲತಃ ಐರ್ಲೆಂಡಿನ ಒಂದು ಕುಟುಂಬದವನು. ಆದರೆ ಹುಟ್ಟಿದ್ದು, ವಿದ್ಯಾಭ್ಯಾಸ ಪಡೆದಿದ್ದು ಮತ್ತು ಕೆಲಸ ಮಾಡಿದ್ದು ಇಂಗ್ಲೆಂಡಿನಲ್ಲಿ. ಕೇಂಬ್ರಿಜ್, ಆಕ್ಸ್‌ಫರ್ಡ್, ಮ್ಯಾಂಚೆಸ್ಟರ್ ಮತ್ತು ಲೆಸ್ಟರ್ ವಿಶ್ವವಿದ್ಯಾನಿಲಯಗಳೊಡನೆ ಅವನದು ಐವತ್ತಕ್ಕೂ ಹೆಚ್ಚು ವರ್ಷಗಳ ಸಂಬಂಧ. ವ್ಯಾಸಂಗ ಕೇಂಬ್ರಿಜ್‌ನಲ್ಲಿ, ಆದರೆ ಪ್ರಾಧ್ಯಾಪಕನಾಗಿದ್ದುದು ಲೆಸ್ಟರ್‌ನಲ್ಲೇ ಹೆಚ್ಚು. ಬೇರೆ ಎರಡು ವಿಶ್ವವಿದ್ಯಾನಿಲಯಗಳಲ್ಲೂ ಬೋಧನೆ ಮತ್ತು ಸಂಶೋಧನೆ ನಡೆಸಿದ್ದಾನೆ. ಸಾಹಿತ್ಯ, ಇತಿಹಾಸ ಮತ್ತು ತತ್ತ್ವಶಾಸ್ತ್ರ ಅವನ ಆಸಕ್ತಿಯ ಕ್ಷೇತ್ರಗಳು. ಸಾಹಿತ್ಯ ಮೀಮಾಂಸೆ ಮತ್ತು ವಿಮರ್ಶೆಯಲ್ಲಿ ಆತನ ಕೃಷಿ ಅತ್ಯಂತ ಮೌಲಿಕವಾದ್ದು. ಅದಕ್ಕೆ ವಿಶೇಷ ಮಾನ್ಯತೆ ಲಭ್ಯವಾಗಿದೆ. ಮಾರ್ಕ್ಸ್‌ವಾದಿ ಸಿದ್ಧಾಂತದ ಬಗೆಗಿನ ಅವನ ತಿಳಿವು ಕೇವಲ ಅಧ್ಯಯನದಿಂದ ಬಂದಿದ್ದಲ್ಲ, ಅವನೊಬ್ಬ ಖ್ಯಾತ ಸಂಘಟಕ ಮತ್ತು ಹೋರಾಟಗಾರ ಕೂಡ. ಅಮೆರಿಕಾದಲ್ಲಿರುವ ಯೇಲ್ ವಿಶ್ವವಿದ್ಯಾನಿಲಯ ೨೦೧೧ರಲ್ಲಿ ''ಮಾರ್ಕ್ಸ್ ಹೇಳಿದ್ದು ಏಕೆ ಸರಿ ?'' ಎಂಬ ಅವನ ೨೪೦ ಪುಟಗಳ ಪುಸ್ತಕವನ್ನು ಪ್ರಕಟಿಸಿತು. ಮಾರ್ಕ್ಸ್‌ವಾದವನ್ನು ಖಂಡಿಸುವವರು ಸಾಮಾನ್ಯವಾಗಿ ಎತ್ತುತ್ತಲೇ ಬಂದಿರುವ ಆಕ್ಷೇಪಗಳನ್ನು ಪರೀಕ್ಷಿಸಿ ಸತ್ವಯುತವಾದ ವಿಮರ್ಶೆ ಮಾಡುವುದು ಅವನ ಉದ್ದೇಶ. ಪ್ರಸ್ತುತ ಸಂಚಿಕೆಯಿಂದ ಆರಂಭಿಸಿ 'ಹೊಸತು' ಈ ಪುಸ್ತಕವನ್ನು ಅನುಸರಿಸಿ ಸಂಗ್ರಹ ರೂಪದಲ್ಲಿ ಈಗಲ್‌ಟನ್‌ನ ಪ್ರತಿಪಾದನೆಯನ್ನು ಹತ್ತು ಕಂತುಗಳಲ್ಲಿ ಪರಿಚಯಿಸಲು ಹರ್ಷಿಸುತ್ತದೆ.

# ಮಾರ್ಕ್ಸ್ ಹೇಳಿದ್ದು ಏಕೆ ಸರಿ?



**ಮಾ**ರ್ಕ್ಸ್ ಹೇಳಿದ್ದುದೆಲ್ಲಾ ಅಬದ್ಧವೆಂದು ವಾದಿಸುವವರ ಮಾತು ನಿಜವಾದರೆ ಹೇಗೆ ? ಆ ಪ್ರಶ್ನೆಗೆ ಉತ್ತರ ಹುಡುಕುವಾಗ ಮೂಡಿದ ಚಿಂತನೆ ಇದು. ಅಂದರೆ, ಮಾರ್ಕ್ಸ್ ಯಾವತ್ತೂ ಎಡವಲಿಲ್ಲವೆಂದಲ್ಲ. ಆದರೆ ಆತನ ಕಾಲಸಂದರ್ಭದಲ್ಲಿ ಪ್ರೌಢ ಚಿಂತಕನೆಂಬ ಖ್ಯಾತಿ ಪಡೆದಿದ್ದುದು ನಿಜ. ಅದನ್ನು ಯಾವತ್ತು ಬೇಕಾದರೂ ಪರೀಕ್ಷೆಗೆ ಒಡ್ಡಬಹುದು. ಫ್ರೆಡರಿಕ್ ಏಂಗೆಲ್ಸ್ ಜೊತೆಗೂಡಿ ಅವನು ೧೮೪೮ರಲ್ಲಿ ಹೊರತಂದ ''ಕಮ್ಯುನಿಸ್ಟ್ ಪ್ರಣಾಳಿಕೆ''ಯ ಪ್ರಭಾವ ಅಗಾಧ. ಅದಕ್ಕೆ ಸಮನಾದ ಪ್ರಭಾವ ಬೀರಿರುವ ಚಿಂತಕರು, ವಿಜ್ಞಾನಿಗಳು, ಧಾರ್ಮಿಕ ನಾಯಕರು, ಬಹಳವಿಲ್ಲ. ಇತಿಹಾಸವನ್ನು ಮಾರ್ಕ್ಸ್ ಅಷ್ಟೊಂದು ಗಾಢವಾಗಿ ಪ್ರಭಾವಿಸಿದ್ದಾನೆ. ಡೇಕಾರ್ಟ್‌ನ ಹೆಸರಲ್ಲಿ ಎಲ್ಲಾದರೂ ಸರ್ಕಾರ ಬಂದಿದೆಯೆ ? ಅಥವಾ ಪ್ಲೇಟೋ ಹೆಸರಲ್ಲಿ ಗೆರಿಲ್ಲಾ ಯುದ್ಧ ಹೂಡಿದವರುಂಟೆ ? ಹೋಗಲಿ, ಹೆಗೆಲ್ ಹೆಸರಲ್ಲಿ ಕಾರ್ಮಿಕ ಸಂಘ ಎಲ್ಲಾದರೂ ರಚನೆಗೊಂಡಿತ್ತೆ? ಮಾರ್ಕ್ಸ್ ಹೆಸರಲ್ಲಿ ಈ ಮೂರೂ ಆಗಿರುವುದುಂಟು. ಮಾನವ ಇತಿಹಾಸದ ತಿಳಿವಳಿಕೆಗೆ ನಾವು ಅವನಿಗೆ ಬಹುವಾಗಿ ಕೃತಜ್ಞರು.

ಮಾರ್ಕ್ಸ್‌ವಾದವನ್ನು ಹೂತು ನಿಸೂರಾಗಿರಬಹುದೆಂಬ ಅಭಿಪ್ರಾಯ ಈಚಿನ ಕೆಲವು ವರ್ಷಗಳಲ್ಲಿ ಕೆಲವರು ವ್ಯಕ್ತಪಡಿಸಿದ್ದಾರೆ. ಅದೂ ಬಂಡವಾಳಶಾಹಿಯು ಎದುರಿಸುತ್ತಿರುವ ಭೀಕರ ಬಿಕ್ಕಟ್ಟಿನ ಸಂದರ್ಭದಲ್ಲಿ, ''ಆಧುನಿಕ ಯುಗ'', ''ಔದ್ಯೋಗಿಕ ಜಗತ್ತು'', ''ಪಶ್ಚಿಮದ ರಾಷ್ಟ್ರಗಳು'' ಎಂಬುವನ್ನು ಬಿಟ್ಟು 'ಬಂಡವಾಳಶಾಹಿ ಪ್ರಭುತ್ವ' ಎಂಬ ಹೆಸರು ಮತ್ತೆ ಕೇಳಿ ಬರುತ್ತಿದೆ. ಅಂದರೆ ಅದಕ್ಕೇನೋ ಗರ ಬಡಿದಿದೆಯೆಂದರ್ಥ. 'ಜಾತಸ್ಯ ಹಿ ಧ್ರುವೋ ಮೃತ್ಯುಃ'' ಎಂಬುದನ್ನು ಮರೆಮಾಚಿ ಸಾಮಾಜಿಕ ವ್ಯವಸ್ಥೆಗಳು ಚಿರಂತನವೆಂಬಂತೆ ಆ ವ್ಯವಸ್ಥೆಗಳು ತಮ್ಮನ್ನು ತಾವು ಚಿತ್ರಿಸಿಕೊಂಡಿವೆ. ಡೆಂಗು ಜ್ವರದ ಭೀತಿ ಬಂದಾಗ ಶರೀರದ ಯೋಚನೆ ತಪ್ಪೀತೆ ! ಹಾಗಿದೆ ಸಾಮಾಜಿಕ ವ್ಯವಸ್ಥೆಗಳ ಕತೆ. ತಾನು ಮುರಿದುಬೀಳಬಹುದೆನಿಸಿದಾಗ ಬಂಡವಾಳಶಾಹಿಗೆ ಮಾರ್ಕ್ಸ್‌ನ ಯೋಚನೆ ಬರದಿರಲು ಸಾಧ್ಯವೆ ! ನ್ಯೂಟನ್, ಡಾರ್ವಿನ್, ಫ್ರಾಯ್ಡ್,

ಇತ್ಯಾದಿಗಳಂತೆ ಮಾರ್ಕ್ಸ್ ಒಂದು ನಿಯಮದ ಜನಕನೆನ್ನಬಹುದು; ಬಂಡವಾಳಶಾಹಿ ಉತ್ಪಾದನಾ ಮಾದರಿಯ ನಿಯಮವನ್ನವನು ವಿಶದವಾಗಿ ಬಿಡಿಸಿಟ್ಟಿದ್ದಾನೆ. ಆದರೂ ಅವನು ಮುದುರಿಹೋದನೆಂಬ ಪ್ರತೀತಿಯನ್ನು ಕೆಲವರು ಹುಟ್ಟುಹಾಕಿದ್ದಾರೆ.

'ಹೋಗಲಿ ಬಿಡಿ' ಎಂದು ಮಾರ್ಕ್ಸ್‌ವಾದಿಗಳು ತಣ್ಣಗಾಗಬಹುದಲ್ಲ! ಆ ಸಭೆ, ಈ ಪ್ರತಿಭಟನೆ, ಯಾವುದೋ ಮುಷ್ಕರ, ಎಲ್ಲೋ ಗಲಭೆ; ಎಲ್ಲವನ್ನೂ ಮರೆತು ಮನೆಗೆ ಹೋಗಬಹುದು. ಮಾರ್ಕ್ಸ್‌ವಾದಿಗಳಿಗೆ ಮಾರ್ಕ್ಸ್‌ವಾದಿಗಳಾಗಿರಲೇಬೇಕೆಂಬ ಹಟವೇನೂ ಇಲ್ಲ, ಅದೇನು ಬೌದ್ಧ, ಕೋಟ್ಯಾಧಿಪತಿ, ಮಠಾಧೀಶ, ಇದ್ದಹಾಗೆಯೇ? ಏನಿಲ್ಲ, ಅವನೊಬ್ಬ ವೈದ್ಯನಂತೆ - ರೋಗಿಯನ್ನು ಗುಣಪಡಿಸಿದ ನಂತರ ಅವನು ನಿರುದ್ಯೋಗಿ. ''ಕಾರ್ಯಾಂತೇ ಅಪ್ರಯೋಜಕ'' ಎನ್ನುವುದು ಅದಕ್ಕೇ. ಅವರ ಗುರಿ ಮುಟ್ಟಿದ ನಂತರ ಚೆ ಗೆವಾರಾನ ಭಿತ್ತಿಪತ್ರ ಹರಿದುಹಾಕಲು ಅಡ್ಡಿಯಿಲ್ಲ, ಯಾವಾಗಲೂ ''ಏಷ್ಯಾ ಮಾದರಿಯ ಉತ್ಪಾದನಾ ಮಾದರಿ'' ಮುಂತಾದ ವಿಷಯಗಳನ್ನು ಮಾತನಾಡುವುದು ಬಿಟ್ಟು ಮೊಬೈಲ್ ಫೋನಿನಲ್ಲಿ ಬೇರೇನೋ ಸಂಭಾಷಣೆ ನಡೆಸುವ ಸುಸಂದರ್ಭ ಅವರಿಗೂ ಬರಲಿ, ಏಕೆ ಬೇಡ! ಮಾರ್ಕ್ಸ್‌ವಾದಿಗಳು, ಸ್ತ್ರೀವಾದಿಗಳು, ಇನ್ನು ಇಪ್ಪತ್ತು ವರ್ಷಗಳ ನಂತರವೂ ಇರಬೇಕಾಗಿ ಬಂದರೆ ಅದೇನೂ ಉತ್ತಮ ಭವಿಷ್ಯವಲ್ಲ. ಮಾರ್ಕ್ಸ್‌ವಾದದ ನಂತರದ ಸುಭಗ ಜೀವನ ಇದೆಯಲ್ಲಾ, ಅದೇ ಮಾರ್ಕ್ಸ್‌ವಾದದ ತಿರುಳು.

ಮಾರ್ಕ್ಸ್‌ವಾದವು ಬಂಡವಾಳಶಾಹಿಯ ತೀವ್ರವಾದ ಸಮಗ್ರ ವಿಮರ್ಶೆ. ವಿಶ್ವದ ಅನೇಕ ಭಾಗಗಳಲ್ಲಿ ಈ ವಿಮರ್ಶೆಯು ಬೃಹತ್ತಾದ ಬದಲಾವಣೆ ಉಂಟುಮಾಡಿದೆ. ಹೀಗಾಗಿ, ಬಂಡವಾಳಶಾಹಿಯು ಇರುವವರೆಗೆ ಮಾರ್ಕ್ಸ್‌ವಾದವು ಅಸ್ತಿತ್ವದಲ್ಲಿದ್ದೇ ತೀರುತ್ತದೆ. ಅದರ ವಿರೋಧಿಯು ನಿವೃತ್ತಿ ಹೊಂದಿದಾಗ ಬೇಕಾದರೆ ತಾನೂ ನಿವೃತ್ತಿ ಹೊಂದಬಹುದು, ಅಷ್ಟೆ. ಇದನ್ನು ಮಾರ್ಕ್ಸ್‌ವಾದದ ಟೀಕಾಕಾರರೆಲ್ಲಾ ಬಹುತೇಕ ಒಪ್ಪುತ್ತಾರೆ. ಆದರೆ ಅವರ ತಕರಾರೊಂದಿದೆ: ಮಾರ್ಕ್ಸ್‌ನ ಕಾಲದಲ್ಲಿದ್ದ ವ್ಯವಸ್ಥೆಯು ಗುರುತೇ ಸಿಗದಷ್ಟು ಬದಲಾಯಿಸಿಹೋಗಿದೆ, ಆದ್ದರಿಂದ ಅವನ ವಿಚಾರಗಳು ಇಂದಿಗೆ ಅಪ್ರಸ್ತುತ, ಎಂದು. ತಾನು ವಿಮರ್ಶಿಸುತ್ತಿದ್ದ ವ್ಯವಸ್ಥೆ ನಿರಂತರವಾಗಿ ಬದಲಾಗುತ್ತಿತ್ತೆಂಬುದು ಮಾರ್ಕ್ಸ್‌ಗೆ ತಿಳಿಯದ ಅಂಶವೇನಾಗಿರಲಿಲ್ಲ. ಅವನೇ ಬಂಡವಾಳಶಾಹಿಯ ವಿವಿಧ ಸ್ವರೂಪಗಳನ್ನು ಗುರುತಿಸಿದ್ದಾನೆ: ವ್ಯಾಪಾರೀ, ಕೃಷಿಸಂಬಂಧಿ, ಔದ್ಯಮಿಕ, ಏಕಸ್ವಾಮ್ಯ, ಬ್ಯಾಂಕ್ ಕೇಂದ್ರಿತ, ಸಾಮ್ರಾಜ್ಯಶಾಹಿ, ಇತ್ಯಾದಿ. ಬದಲಾವಣೆಯು ಬಂಡವಾಳಶಾಹಿಯ ಮೂಲ ಲಕ್ಷಣವೆಂದು ಗುರುತಿಸಿದ ಸಿದ್ಧಾಂತವು ಬಂಡವಾಳಶಾಹಿಯಲ್ಲಿ ಉಂಟಾದ ಬದಲಾವಣೆಗಳಿಂದಾಗಿ ಹೇಗೆ ತಾನೆ ಅಪಮೌಲ್ಯಗೊಂಡೀತು? ಅಲ್ಲದೆ, ಸ್ವತಃ ಮಾರ್ಕ್ಸ್ ಗುರುತಿಸಿದ್ದ: ಕಾರ್ಮಿಕ ವರ್ಗವು ಕಡಿಮೆಯಾಗುತ್ತಾ ಬಿಳಿ ಕಾಲರಿನ ಮಧ್ಯಮ ವರ್ಗವು ವೃದ್ಧಿಹೊಂದುತ್ತದೆ, ಎಂದು. ಇಂದಿನ ಜಾಗತೀಕರಣ ಸಹ ಅವನ ದೃಷ್ಟಿಗೆ ಹೊರತಾಗಿರಲಿಲ್ಲ, ಹಾಗಿದ್ದಾಗ ಅವನೇಕೆ 'ಪ್ರಾಚೀನ'ನಾಗಿಬಿಡುತ್ತಾನೆ? ಅವನ ಕಾಲ ಮುಗಿಯಿತೆಂದು ಹಲುಬುವ ಬಂಡವಾಳಶಾಹಿಯ ಸಮರ್ಥಕರು ಮಾಡಿರುವುದೇನು ಗೊತ್ತೆ? ಸಮಾಜದಲ್ಲಿನ ಅಸಮಾನತೆಯನ್ನು ವಿಕ್ಟೋರಿಯಾ ರಾಣಿಯ ೧೯ನೆಯ ಶತಮಾನದ ಮಟ್ಟಕ್ಕೆ ಕೊಂಡೊಯ್ದಿದ್ದಾರೆ!

ಸ್ವಾರಸ್ಯ ಹೇಗಿದೆ ನೋಡಿ: ಪಾಶ್ಚಾತ್ಯರಲ್ಲಿ ಅನೇಕರು ೧೯೭೬ರಲ್ಲಿ ಮಾರ್ಕ್ಸ್‌ವಾದದ್ದೇನೋ ಒಂದು ನಿಲುವಿದೆ ಎಂಬುದನ್ನು ಒಪ್ಪುತ್ತಿದ್ದರು. ಆದರೆ ೧೯೮೬ರ ವೇಳೆಗೆ ಅವರ ಬಣ್ಣ ಬದಲಾಗಿಹೋಯಿತು. ಆ ಒಂದು ದಶಕದಲ್ಲಿ ಅಂತಹ ಮಹತ್ವದ್ದೇನು ಘಟಿಸಿತು? ಜಗತ್ತನ್ನೇ ಅಲುಗಾಡಿಸುವಂತಹ ಅಗಾಧ ಸಂಶೋಧನೆಯೇನಾದರೂ ನಡೆಯಿತೆ? ಅಥವಾ, ತಾನು ಹೇಳಿದ್ದುದೆಲ್ಲಾ ಕೇವಲ ವಿನೋದಕ್ಕಾಗಿ ಎಂದು ಪ್ರಕಟಿಸುವ ಮಾರ್ಕ್ಸ್‌ನ ಯಾವುದಾದರೂ ಹೊಸ ಬರಹ ದೊರೆತುಬಿಟ್ಟಿತೋ? ಮಾರ್ಕ್ಸ್ ಬಂಡವಾಳಶಾಹಿಯ ನೆರವಿನಿಂದ ಜೀವಿಸುತ್ತಿದ್ದನೆಂಬುದು ರಹಸ್ಯವೇನಲ್ಲ. ತನ್ನ ಸ್ನೇಹಿತ ಫ್ರೆಡರಿಕ್ ಏಂಗೆಲ್ಸನ ತಂದೆಯ ಮಾಲೀಕತ್ವದಲ್ಲಿದ್ದ ''ಎರ್ಮೆನ್ ಮತ್ತು ಏಂಗೆಲ್ಸ್'' ಎಂಬ ಉದ್ಯಮ ಮ್ಯಾಂಚೆಸ್ಟರ್ ಬಳಿಯ ಸಾಲ್‌ಫರ್ಡ್‌ನಲ್ಲಿತ್ತು. ಸದಾ ಬಡತನದಲ್ಲಿ ಬೇಯುತ್ತಿದ್ದ ಮಾರ್ಕ್ಸ್‌ಗೆ ಆ ಬಟ್ಟೆಗಿರಣಿಯಿಂದ ಹಣದ ನೆರವು ದೊರೆತಿಲ್ಲದಿದ್ದರೆ ಬಟ್ಟೆಗಿರಣಿಗಳ ಮಾಲೀಕರನ್ನು ವಾದಕ್ಕೆಳೆಯಲು ಅವನಿಗೆ ಸಾಧ್ಯವಿರುತ್ತಿರಲಿಲ್ಲವೇನೋ. ೧೯೭೦ರ ದಶಕದ ಉತ್ತರಾರ್ಧದಲ್ಲಿ ಪಾಶ್ಚಿಮಾತ್ಯ ದೇಶಗಳ ವ್ಯವಸ್ಥೆಯಲ್ಲಿ ಮಹತ್ತರ ಬದಲಾವಣೆಗಳುಂಟಾದವು. ಪಾರಂಪರಿಕ ಔದ್ಯಮಿಕ ಉತ್ಪಾದನೆಯು ''ಉದ್ಯಮೋತ್ತರ'' ಎನ್ನಬಹುದಾದ ಘಟ್ಟ ತಲುಪಿತು; ಅದರಲ್ಲಿ ಕೊಳ್ಳುಬಾಕ ಸಂಸ್ಕೃತಿ, ನೂತನ ಸಂಪರ್ಕ ಸಾಧನ, ಮಾಹಿತಿ ತಂತ್ರಜ್ಞಾನ ಮತ್ತು ಸೇವೆಗಳ ಉದ್ಯಮ, ಪ್ರಧಾನವಾದ ಲಕ್ಷಣಗಳಾಗಿದ್ದವು. ವಿಕೇಂದ್ರೀಕೃತವಾದ, ಚಿಕ್ಕ ಪ್ರಮಾಣದ,

## ಹಿಡಿದು ಸಾಗಲಿ ಕೈ

**ಕಪ್ಪು**
ಮೋಡ ಸುರಿಸುವ
ಮಳೆಗೆ
ಯಾವ ಬಣ್ಣವೂ ಇಲ್ಲ
ಬಿಳಿ ಮೋಡ
ಮಳೆ ಸುರಿಸುವುದಿಲ್ಲ

ಕಪ್ಪು
ಮಣ್ಣು ಬೆಳೆದ ಬೆಳೆಯ
ಸಿರಿಗೆ
ಯಾವ ರಂಗಿನ ಹಂಗು ಇಲ್ಲ
ಬಿಳಿ ಮಣ್ಣಿನಲಿ
ಬೆಳ್ಳಿ ಬೆಳೆ ಹೊಳೆಯದಲ್ಲ

ಕಪ್ಪು
ಬೇರು ಬಣ್ಣ ಬಣ್ಣದ
ಹೂವು
ರುಚಿಯಾದ ಹಣ್ಣು ಕೊಡುವುದಲ್ಲ
ಬಿಳಿ ಹೂವು
ಬೇರಿಲ್ಲದೇ ಅರಳದಲ್ಲ

ಕಪ್ಪು
ಮನುಜನ ಕೆಂಪು
ರಕುತಕೆ
ಜಾತಿ ಮತಗಳ ಭೇದವಿಲ್ಲ
ಬಿಳಿ ತೊಗಲಿಗೆ
ತಿಳಿಯದಲ್ಲ

ಕಪ್ಪು
ಕತ್ತಲೆ ಬಡವರ
ಬೆತ್ತಲಾದವರ
ಮಾನ ಕಳೆಯುವುದಿಲ್ಲ
ಬೆಳ್ಳಿ ಬೆಳಕು
ಸುಮ್ಮನಿರುವುದಿಲ್ಲ

ಕಪ್ಪು
ಮೋಡದ ಬೆಳ್ಳಿಯಂಚು
ಕೆಂಪು
ರಕುತದ ಹೊಳೆವ ಮಿಂಚು
ಎಲ್ಲ ಬಿಟ್ಟು ಒಂದನೊಂದು
ಹಿಡಿದು ಸಾಗಲಿ ಕೈ
ಕೈ
ಬಿಡದೆ ಮುಂದೆ ಎಂದು



**ವಿ. ಹರಿನಾಥ ಬಾಬು, ಸಿರುಗುಪ್ಪ**
ಉಪ ಖಜಾನಾಧಿಕಾರಿ, ಉಪ ಖಜಾನೆ, ಗಂಗಾವತಿ - ೫೮೩ ೨೨೭, ಕೊಪ್ಪಳ ಜಿಲ್ಲೆ

ವಂಶಾನುಗತವಲ್ಲದ, ಬಹುಮುಖ ಸಾಮರ್ಥ್ಯದ ಉದ್ದಿಮೆ ವಿಪುಲವಾಗಿ ಬೆಳೆದುಬಂತು. ಮಾರುಕಟ್ಟೆಗಳು ನಿಯಂತ್ರಣದಿಂದ ಹೊರಗಾದವು, ಕಾರ್ಮಿಕ ಚಳುವಳಿಯು ಬಲವಾದ ಪೆಟ್ಟು ತಿಂದಿತು. ಕಾನೂನು ಮತ್ತು ರಾಜಕೀಯ, ಎರಡೂ ಪೆಟ್ಟುನೀಡುವ ಆಯುಧಗಳಾದವು; ಅದರ ಪರಿಣಾಮವಾಗಿ ಸಾಂಪ್ರದಾಯಿಕ ವರ್ಗನಿಷ್ಠೆ ಬಲಹೀನವಾಯಿತು, ಸ್ಥಳೀಯ ಹಾಗೂ ಕುಲಸಂಬಂಧಿ ಅನನ್ಯತೆಯು ಗಾಢವಾಯಿತು. ರಾಜಕೀಯವು ದಾಳ ಎಸೆಯುವ ಆಟವಾದದ್ದು ಆ ಹಿನ್ನೆಲೆಯಲ್ಲಿ.

ಮಾಹಿತಿ ತಂತ್ರಜ್ಞಾನಗಳು ಬಂಡವಾಳಶಾಹಿ ವ್ಯವಸ್ಥೆಯನ್ನು ಜಾಗತೀಕರಿಸಲು ಸಾಧನವಾದವು. ಕೆಲವೇ ಬಹುರಾಷ್ಟ್ರೀಯ ಕಾರ್ಪೊರೇಶನ್‌ಗಳು ಉತ್ಪಾದನೆ ಮತ್ತು ಬಂಡವಾಳದ ಹೂಡಿಕೆಯನ್ನು ವಿಶ್ವದ ಉದ್ದಗಲಕ್ಕೂ ಸ್ವಾಧೀನಪಡಿಸಿಕೊಂಡು ಮನಸೋಇಚ್ಛೆ ಲಾಭ ಸೆಳೆದುಕೊಳ್ಳಲು ಇದರಿಂದ ಸಾಧ್ಯವಾಯಿತು. ಉದ್ಯಮಗಳನ್ನು ವಿಶ್ವದ ಬೇರೆ ಬೇರೆ ''ಅಭಿವೃದ್ಧಿ ಹೊಂದದ ವಲಯ''ಗಳಿಗೆ ವರ್ಗಾಯಿಸಿ ಔದ್ಯಮಿಕ ಉತ್ಪಾದನೆಯನ್ನು ಹೊರಗಿನವರಿಂದ ಮಾಡಿಸಿಕೊಳ್ಳುವ ಪ್ರಕ್ರಿಯೆಗೆ ಇದು ನಾಂದಿಯಾಯಿತು. ಅಲ್ಲೆಲ್ಲಾ ಕೂಲಿಯ ಪ್ರಮಾಣ ಹೇಗೂ ಕಡಿಮೆ ಇದ್ದಿತಲ್ಲ, ಅದು ಲಾಭದ ಹೆಚ್ಚಳಕ್ಕೆ ಪೂರಕವಾಯಿತು. ಭಾರಿ ಉದ್ಯಮಗಳು ಮಾಯವಾಗಿಹೋದವೆಂಬ ಭ್ರಮೆ ಪಾಶ್ಚಿಮಾತ್ಯರಲ್ಲಿ ಮೂಡಿತು. ಇಂತಹ ಜಾಗತಿಕ ಚಲನೆಯ ಒಂದು ಭಾಗವೆಂದರೆ ದುಡಿಯುವವರು ಅಂತರರಾಷ್ಟ್ರೀಯವಾಗಿ ಇತ್ತಿಂದತ್ತ - ಅತ್ತಿಂದಿತ್ತ ಸ್ಥಳಾಂತರ ಹೊಂದುವುದು. ಹೆಚ್ಚು ಅಭಿವೃದ್ಧಿ ಹೊಂದಿದ ದೇಶಗಳಿಗೆ ಹೀಗೆ ಬಡ ಶ್ರಮಿಕರ ಪ್ರವೇಶವಾದಾಗ ಅಲ್ಲಿ ಜನಾಂಗೀಯ ಸಮಸ್ಯೆಗಳು, ಆಕ್ರಮಣಕಾರಿ ಫ್ಯಾಸಿಸ್ಟ್ ಭಾವನೆಗಳು, ಉದ್ಭವಿಸಿದವು. ಬೆವರು ಸುರಿಸುವ ದುಡಿಮೆ ದೂರದ ಯಾವ ದೇಶದಲ್ಲೋ; ಅಲ್ಲಿ ಎಲ್ಲವೂ ಖಾಸಗಿ ಮಾಲೀಕತ್ವ. ದುಡಿಯುವವರ ಕಲ್ಯಾಣಕ್ಕೆಂದು ಯಾವ ಕ್ರಮವೂ ಇಲ್ಲ ಮತ್ತು ವ್ಯಾಪಾರದಲ್ಲಿ ನಂಬಲಾಗದಷ್ಟು ಅಗಾಧವಾದ ಲಾಭ ಅಭಿವೃದ್ಧ ದೇಶದ ಬಂಡವಾಳ ಹೂಡಿಕೆದಾರನಿಗೆ. ಆ ದೇಶಗಳ ಬಂಡವಳಿಗರ ಸಂಪದಭಿವೃದ್ಧಿಗೆ ಯಾವ ತೊಡಕೂ ಇಲ್ಲ. ಇನ್ನು ತಮ್ಮ ನೌಕರರ 'ಆಧ್ಯಾತ್ಮಿಕ ಒಳಿತಿ'ಗೆ ಗಮನ ಕೊಡಬಹುದಲ್ಲ ಎನ್ನುವಂತಾಯಿತು.

ಇಷ್ಟೆಲ್ಲಾ ಘಟಿಸಿದ್ದು ಬಂಡವಾಳಶಾಹಿ ವ್ಯವಸ್ಥೆಯು ಹಗುರಾಗಿ, ಉಲ್ಲಸಿತವಾಗಿ ಇದ್ದುದರಿಂದಲ್ಲ. ಅದರ ಜಗಳಗಂಟತನ, ಆಕ್ರಮಣಕಾರಿ ಪ್ರವೃತ್ತಿ, ಎಲ್ಲಾ ಹುಟ್ಟಿಕೊಂಡದ್ದು ಆಳವಾದ ಆತಂಕಗಳ ನಡುವೆಯೇ. ಅಂತರಾಳದಲ್ಲಿ ಆ ವ್ಯವಸ್ಥೆ ಸೊರಗಿತ್ತು, ಆದ್ದರಿಂದ ಈಗ ಉನ್ಮಾದದಿಂದ ಅದು ಮೇಲೆರಗಿತು. ೧೯೪೫ರಲ್ಲಿ ಮಹಾಯುದ್ಧ ಮುಗಿದ ನಂತರ ಎಲ್ಲೆಲ್ಲೂ ಎಗ್ಗಿಲ್ಲದ ಹೆಚ್ಚಳ ಉಂಟಾಗಿದ್ದುದು ಕ್ರಮೇಣ ಕರಗಿಹೋಗಿತ್ತು. ಅಂತರರಾಷ್ಟ್ರೀಯವಾಗಿ ಸ್ಪರ್ಧೆ ಮುಗಿಲು ಮುಟ್ಟಿ, ಲಾಭದ ದರ ಕುಸಿಯತೊಡಗಿತ್ತು, ಬಂಡವಾಳದ ಹೂಡಿಕೆಗೆ ಸೆಲೆಯೇ ಬತ್ತಿಹೋಗಿ, ಅಭಿವೃದ್ಧಿಯ ದರ ಕ್ಷೀಣವಾಗುತ್ತಿತ್ತು. ಹಾಗಿದ್ದಾಗ ಮುಂದಿನ ವ್ಯವಸ್ಥೆ ಏನೆಂಬ ಆತಂಕ. ಸಾಮಾಜಿಕ ಪ್ರಜಾಪ್ರಭುತ್ವ ಸಹ ತೀವ್ರಗಾಮಿಯಂತೆ ತೋರಿಬರುತ್ತಿತ್ತು, ರಾಜಕೀಯವಾಗಿ ಅದು ದುಬಾರಿ ಎನಿಸತೊಡಗಿತ್ತು. ಅಂದರೆ, ರೀಗನ್ ಮತ್ತು ಥ್ಯಾಚರ್‌ಗಳಿಗೆ ರಂಗಸ್ಥಳ ಸಜ್ಜಾಗಿತ್ತು. ಅವರು ಸಾಂಪ್ರದಾಯಿಕ ಉದ್ದಿಮೆಗಳನ್ನು ಮುಚ್ಚಿಹಾಕಿದರು, ದುಡಿಯುವವರ ಚಳುವಳಿಗೆ ಅಡ್ಡಗಾಲು ಹಾಕಿದರು, ಮಾರುಕಟ್ಟೆಯು ಸಿಡಿದುಹೋಗುವಷ್ಟು ಬೆಳೆಯಲು ಬಿಟ್ಟರು, ಎಲ್ಲ ದಮನಕಾರಿ ಕ್ರಿಯೆಗಳಿಗೆ ಪ್ರಭುತ್ವದ ಶಕ್ತಿಯನ್ನು ಹರಿಬಿಟ್ಟರು, ಹೊಸದೊಂದು ಸಾಮಾಜಿಕ ತತ್ವದ ಹರಿಕಾರರಾದರು. ಆ ತತ್ವವೇ ಮುಚ್ಚುಮರೆಯಿಲ್ಲದ ದುರಾಸೆ ಎಂಬುದು. ಉದ್ಯಮದಿಂದ ಬಂಡವಾಳವನ್ನು ಸೇವಾಕ್ಷೇತ್ರ ಹಾಗೂ ಬ್ಯಾಂಕ್ ಮತ್ತು ಸಂಪರ್ಕ ಉದ್ದಿಮೆಗಳಿಗೆ ಸ್ಥಳಾಂತರಿಸಿದ್ದು ಆರ್ಥಿಕ ಬಿಕ್ಕಟ್ಟಿನ ಕಾರಣದಿಂದಲೇ ವಿನಾ ಹಳಸಿದ ಹಳೆಯ ಜಗತ್ತಿನಿಂದ ಹೊಳೆಯುವ ಹೊಸ ಜಗತ್ತಿಗೆ ಜಿಗಿಯಬೇಕೆಂದಲ್ಲ.

ಇದೆಲ್ಲಾ ಸತ್ಯವೇ ಆದರೂ, ಪ್ರಗತಿಪರರು ೧೯೭೦-೮೦ರ ದಶಕದಲ್ಲಿ ತಮ್ಮ ಮನಸ್ಸಿನ ಪರಿವರ್ತನೆ ಮಾಡಿಕೊಂಡಿದ್ದು ಏಕೆಂಬುದು ಸ್ಪಷ್ಟವಾಗಿಲ್ಲ. ತಮ್ಮ ಸುತ್ತಲಿದ್ದ ಬಟ್ಟೆಗಿರಣಿಗಳು ಮುಚ್ಚಿಹೋದದ್ದಷ್ಟೇ ಖಂಡಿತ ಒಂದು ಕಾರಣವಲ್ಲ. ಈ ತೀವ್ರಗಾಮಿಗಳು ತಲೆಗೆ ಸುತ್ತಿಕೊಂಡಿದ್ದ ಬಣ್ಣದ ಬಟ್ಟೆಯ ಪಟ್ಟಿ ಕಿತ್ತೆಸೆದರು, ಮುಖಲಕ್ಷಣವನ್ನು ಸುಂದರಗೊಳಿಸಿಕೊಂಡರು, ತಮ್ಮ ಮಾರ್ಕ್ಸ್‌ವಾದವನ್ನು ಕೈಬಿಟ್ಟರು. ಅವರು ಎದುರಿಸಬೇಕಾಗಿ ಬಂದಿದ್ದ ಆಡಳಿತ ಶಕ್ತಿಯು ತೀರಾ ಪ್ರಬಲವೆಂದು ಕಂಡುಬಂದಿದ್ದರಿಂದ ಹೀಗೆ ಮಾಡಿದ್ದಿರಬೇಕು. ಹೊಸ ಬಂಡವಾಳಶಾಹಿಯ ಬಗ್ಗೆ ಅವರಿಗೇನೂ ಭ್ರಮೆ ಇರಲಿಲ್ಲ, ಆದರೆ ಅದನ್ನು ಬದಲಾಯಿಸುವ ಸಾಧ್ಯತೆಯನ್ನು ಕುರಿತಂತೆ ಅವರ ಭರವಸೆ ಕುಗ್ಗಿತ್ತು. ಅದೇ ಮಾರ್ಕ್ಸ್‌ವಾದದ ಬಗೆಗಿನ ಭ್ರಮನಿರಸನಕ್ಕೆ ನಿರ್ಧಾರಕ ಅಂಶವಾಗಿತ್ತು. ಮೊದಲಿಗೆ ಸಮಾಜವಾದಿಗಳಾಗಿದ್ದವರು ತಮ್ಮ ನಿರಾಸೆಗೆ ಹೊಸ ತರ್ಕ ಹುಡುಕಿಕೊಂಡರು, ವ್ಯವಸ್ಥೆಯನ್ನು ಬದಲಿಸಲಾಗದಿದ್ದರೆ ಬದಲಾವಣೆ ಅನಗತ್ಯವೇ ಇರಬೇಕೆಂದು ಸಮಾಧಾನ ತಾಳಿದರು. ಪರ್ಯಾಯದ ಬಗೆಗಿನ ಶ್ರದ್ಧೆ ಕಳೆದುಕೊಳ್ಳಲು ಕಾರ್ಮಿಕ ಚಳುವಳಿ ಅನುಭವಿಸಿದ ಅಪಾರ ಹೊಡೆತ ಸಹ ಕಾರಣವಾಯಿತು. ಎಡಪಕ್ಷಗಳ ಚೈತನ್ಯ ಇನ್ನೆಲ್ಲಿ ಎಂಬ ಕತ್ತಲು ಸಹ ಈ ಪ್ರಗತಿಗಾಮಿಗಳನ್ನು ಆವರಿಸಿತು. ೧೯೮೦ರ ಅಂತ್ಯದ ವೇಳೆಗೆ ಸೋವಿಯೆತ್ ಒಕ್ಕೂಟ ಕುಸಿದು, ಇವರ ನಿರಾಸೆ ಇನ್ನೂ ಹೆಚ್ಚಿತು. ಕ್ರಾಂತಿಕಾರಿ ರಾಷ್ಟ್ರೀಯತೆ ಅಲ್ಲಲ್ಲಿ ತಲೆ ಎತ್ತುತ್ತಿತ್ತು, ಆದರೆ ಇವರು ಅದನ್ನು ಗಮನಿಸಹೋಗಲಿಲ್ಲ. ಅವರಿಗೆ ''ಆಧುನಿಕೋತ್ತರ'' ಎಂಬ ಮುಲಾಮು ಹಾಯೆನಿಸಿತು. ಇತಿಹಾಸದ ಅಂತ್ಯ ಆಗಿಹೋಯಿತೆಂಬ ಧೀರ ಘೋಷಣೆ ಇವರ ಕಿವಿಗಳಿಗೆ ಅಪ್ಪಳಿಸಿತು. ಆಗ ಅವರು ತೀರ್ಮಾನಿಸಿದ್ದು ಇದು : ಭವಿಷ್ಯವೆಂದರೆ ಹೆಚ್ಚು ಹೆಚ್ಚಾಗಿ ವರ್ತಮಾನದ ಮರುಕಳಿಕೆ, ಎಂದು.



ಇದೆಲ್ಲದರ ಸಾರಾಂಶವೇನು ? ಮಾರ್ಕ್ಸ್‌ವಾದವನ್ನು ಹೀಗಳೆಯಲು ರಾಜಕೀಯ ಷಂಡತನದ ಹೆಚ್ಚಳವು ಕಾರಣ, ಎಂದು. ಬದಲಾವಣೆ ಎಂಬುದು ಕಾರ್ಯಸೂಚಿಯಿಂದ ಹೊರದೂಡಲ್ಪಟ್ಟಿದ್ದ ಸಂದರ್ಭದಲ್ಲಿ ಬದಲಾವಣೆಯಲ್ಲಿ ಶ್ರದ್ಧೆಯನ್ನು ಗಟ್ಟಿಗೊಳಿಸಿಗೊಳ್ಳುವುದು ಕಷ್ಟದ ಮಾತಾಗಿತ್ತು. ಸಂದಿಗ್ಧತೆಗೆ ಇದೇ ಕಾರಣ: ಅನಿವಾರ್ಯ ಎನ್ನಲಾದ್ದನ್ನು ಎದುರಿಸದಿದ್ದರೆ, ಅನಿವಾರ್ಯವು ನಿಜಕ್ಕೂ ಎಷ್ಟು ಅನಿವಾರ್ಯವಾಗಿರುತ್ತದೆ ಎಂಬುದು ಹೊಳೆಯುವುದಿಲ್ಲ. ಕೇವಲ ಇನ್ನೆರಡು ದಶಕಗಳ ಕಾಲ ಈ ಅಂಜುಕುಳಿಗಳು ತಮ್ಮ ಹಿಂದಿನ ಅಭಿಪ್ರಾಯಗಳನ್ನು ಉಳಿಸಿಟ್ಟುಕೊಂಡಿದ್ದರೆ ೨೦೦೮ರ ವೇಳೆಗೆ ಅವರು ಕಂಡಿರುತ್ತಿದ್ದ ಬಂಡವಾಳಶಾಹಿಯ ಸ್ವರೂಪ ಬೇರೆಯೇ ಇರುತ್ತಿತ್ತು. ತಾನು ಅಭೇದ್ಯವೆಂಬ ಅದರ ಗತ್ತು ಹಿಂಗಿಹೋಯಿತು. ವ್ಯಾಪಾರಕೇಂದ್ರಗಳಲ್ಲಿ ವಹಿವಾಟು ನಡೆದರೆ ಸಾಕೆಂಬ ಹತಾಶೆ ಬಂಡವಾಳಶಾಹಿಯನ್ನು ಆವರಿಸಿತು. ಪನಾಮ ಕಾಲುವೆಯ ದಕ್ಷಿಣಕ್ಕಿರುವ ಇಡೀ ಖಂಡ ರಾಜಕೀಯವಾಗಿ ಎಡಕ್ಕೆ ತಿರುಗಿತು. 'ಇತಿಹಾಸದ ಅಂತ್ಯ' ಎಂಬ ಘೋಷಣೆಯೇ ಅಂತ್ಯ ಕಂಡಿತು. ಮಾರ್ಕ್ಸ್‌ವಾದಿಗಳು ಆಗಾಗ ಸೋಲನ್ನು ಸ್ವೀಕರಿಸುವ ದಾರ್ಢ್ಯ ಬೆಳೆಸಿಕೊಳ್ಳಬೇಕು, ಅಷ್ಟೆ; ಅವರಿಗೆ ಅಂತಿಮವಾಗಿ ಸೋಲಿಲ್ಲ. ಹಿಂದೆಯೂ ಅನೇಕ ಬಾರಿ ಇದಕ್ಕಿಂತಲೂ ಭೀಕರವಾದ ಅವಘಡಗಳನ್ನು ಅವರು ಕಂಡಿದ್ದಾರೆ. ಅಧಿಕಾರದಲ್ಲಿರುವವರ ಬಳಿ ಶಸ್ತ್ರಾಸ್ತ್ರಗಳು ಹೆಚ್ಚಾಗಿವೆ, ನಿಜ; ಆದರೆ ರಾಜಕೀಯವಾಗಿ ಬಲವಾದ ಹೊಡೆತ ಬೀಳುವ ಸಾಧ್ಯತೆ ಅವರಿಗೇ ಜಾಸ್ತಿ. ೧೯೬೦ರ ದಶಕದಲ್ಲಿ ಯಶಸ್ಸು ಇನ್ನೇನು ಮಡಿಲಿಗೆ ಬಿತ್ತು ಎಂದು ಭಾವಿಸಿದ್ದ ಪ್ರಗತಿಗಾಮಿಗಳಿಗೆ ೧೯೮೦ರ ಹಿಂಜರಿತವು ಘಾಸಿಗೊಳಿಸಿಬಿಟ್ಟಿತು.

ಮಾರ್ಕ್ಸ್‌ವಾದವು ಸತ್ವ ಕಳೆದುಕೊಂಡಿತೆಂದು ಕೆಲವರಿಗೆ ಅನಿಸಿದ್ದು ಬಂಡವಾಳಶಾಹಿಯು ತನ್ನ ಲಕ್ಷಣಗಳನ್ನು ಬದಲಾಯಿಸಿಕೊಂಡಿತೆಂಬ ಕಾರಣದಿಂದಲ್ಲ. ಅದೇನೂ ಬದಲಾಗಲಿಲ್ಲ. ಮಾರ್ಕ್ಸ್‌ವಾದವು ಪ್ರತಿರೋಧಿಸಬೇಕಾಗಿದ್ದ ಸಾಮಾಜಿಕ ವ್ಯವಸ್ಥೆಯು ಮೃದುವಾಯಿತು, ಸ್ನೇಹಪರವಾಯಿತು, ಎಂದೇನೂ ಅಲ್ಲ. ಹಾಗೆ ನೋಡಿದರೆ ಅದಿನ್ನೂ ಹೆಚ್ಚು ಕಠಿಣವಾಯಿತು, ಹಿಗ್ಗಾಮುಗ್ಗ ಥಳಿಸಲಾರಂಭಿಸಿತು. ಹೀಗಾಗಿ ಮಾರ್ಕ್ಸ್‌ವಾದವು ನೀಡುವ ವಿಮರ್ಶೆ ಹೆಚ್ಚು ಅರ್ಥಪೂರ್ಣವಾಯಿತು; ಏಕೆಂದರೆ, ಜಾಗತಿಕವಾಗಿ ಬಂಡವಾಳವು ಮೊದಲಿಗಿಂತಲೂ ಹೆಚ್ಚು ಮೃಗೀಯವಾಗಿದೆ, ಹೆಚ್ಚು ಸಾಂದ್ರವಾಗಿದೆ ಮತ್ತು ದುಡಿಯುವ ವರ್ಗವು ಸಂಖ್ಯೆಯಲ್ಲಿ ಹೆಚ್ಚಾಗಿದೆ. ಸನ್ನಿವೇಶ ಹೇಗಾಗುತ್ತಿದೆ



ನೋಡಿ: ಶ್ರೀಮಂತರಲ್ಲಿ ಅತಿ ಶ್ರೀಮಂತರು ಪ್ರತ್ಯೇಕಗೊಂಡು ತಮ್ಮ ಕೋಟೆಗಳಲ್ಲಿ ಸುಭದ್ರವಾಗಿ ನೆಲೆಸಿದ್ದಾರೆ ಮತ್ತು ಕೋಟಿಗಟ್ಟಲೆ ಕೊಳಚೆ ಪ್ರದೇಶಗಳ ನಿವಾಸಿಗಳ ಸುತ್ತ ಕಾವಲುಗಾರರಿದ್ದಾರೆ, ಮುಳ್ಳಿನ ಬೇಲಿ ಇದೆ. ಹೀಗಿರುವಾಗ ಮಾರ್ಕ್ಸ್‌ವಾದವು ನಿರ್ಜೀವಿಯಾಗಿದೆಯೆಂಬುದು ಹಾಸ್ಯಾಸ್ಪದ ಮಾತು. ಬೆಂಕಿ ಇಕ್ಕುವ ಜನ ಹೆಚ್ಚಾಗಿದ್ದಾರೆ, ಅವರ ತಂತ್ರಗಾರಿಕೆ ಹೆಚ್ಚಿದೆ, ಆದ್ದರಿಂದ ಅಗ್ನಿಶಾಮಕ ದಳ ಬೇಕಿಲ್ಲ ಎಂಬ ಮಾತಿಗೆ ಸಮಾನ ಅದು.

ಮಾರ್ಕ್ಸ್ ನಿರೀಕ್ಷಿಸಿದ್ದಂತೆ ನಮ್ಮ ಕಾಲದಲ್ಲಿ ಸಂಪತ್ತಿನ ಅಸಮಾನ ಹಂಚಿಕೆ ಹುಚ್ಚುಚ್ಚಾಗಿ ಬೆಳೆದಿದೆ. ಮೆಕ್ಸಿಕೋದಂತಹ ದೇಶದ ಒಬ್ಬ ಕೋಟ್ಯಾಧೀಶನ ವರಮಾನ ತನ್ನ ದೇಶದ ಒಂದು ಕೋಟಿ ಎಪ್ಪತ್ತು ಲಕ್ಷ ಮಂದಿ ಬಡವರ ವರಮಾನಕ್ಕೆ ಸಮ. ಚರಿತ್ರೆಯಲ್ಲಿ ಎಂದೂ ಇರದಿದ್ದಂತಹ ಅಭಿವೃದ್ಧಿ ಬಂಡವಾಳಶಾಹಿಯಡಿ ಆಗಿದೆ ಎಂಬುದೊಂದು ಕಡೆ; ಇನ್ನೊಂದು ಕಡೆ ಅದಕ್ಕೆ ಪ್ರಾಣತೆತ್ತ ಕೋಟಿಗಟ್ಟಲೆ ಜನ ನಿರ್ಗತಿಕರಾಗಿರುವ ದಾರುಣ ದೃಶ್ಯ. ವಿಶ್ವ ಬ್ಯಾಂಕಿನ ಪ್ರಕಾರ ೨೦೦೧ರಲ್ಲಿ ದಿನಕ್ಕೆ ನೂರು ರೂಪಾಯಿಗಿಂತ ಕಡಿಮೆ ಆದಾಯವಿದ್ದವರ ಸಂಖ್ಯೆ ೨೭ ಕೋಟಿ ೪೦ ಲಕ್ಷ. ಹೀಗೇ ಮುಂದುವರಿದರೆ ನಾಳೆ ಅಣ್ವಸ್ತ್ರ ಹೊಂದಿರುವ ದೇಶಗಳು ಸಂಪತ್ತಿಗಾಗಿ ಪರಸ್ಪರ ಯುದ್ಧದಲ್ಲಿ ತೊಡಗುತ್ತವೆ. ಸಂಪತ್ತಿನ ಕೊರತೆಗೆ ಕಾರಣ ಮತ್ತೆ ಬಂಡವಾಳಶಾಹಿಯೇ! ಇತಿಹಾಸದಲ್ಲಿ ಹಿಂದೆಂದೂ ಇರದಿದ್ದ ಸ್ಥಿತಿ ನಮ್ಮದು: ನಮ್ಮ ಜೀವನ ವಿಧಾನವು ಜನಾಂಗೀಯ ದ್ವೇಷಕ್ಕೆ, ಸಾಂಸ್ಕೃತಿಕ ಕುರೂಪಕ್ಕೆ, ಮಾತ್ರ ವಿಶ್ವವನ್ನು ಒಯ್ಯುವುದಿಲ್ಲ, ಯುದ್ಧಕ್ಕೂ ದೂಡುತ್ತದೆ; ಕೂಡುದೊಡ್ಡಿಗಳು ಹೇರಳವಾಗುತ್ತವೆ ಮತ್ತು ಮನುಕುಲದ ನಾಶವಾಗುತ್ತದೆ. ತನ್ನ ಲಾಭ ಹೆಚ್ಚುವುದಾದರೆ ಬಂಡವಾಳಶಾಹಿಯು ಸಮಾಜಶತ್ರುವಾಗಲು ಹೇಸುವುದಿಲ್ಲ. ಹಿಂದೆ ಇಂತಹುದೆಲ್ಲಾ ಪ್ರಲಯವೆಂಬ ಹೆಸರಿನ ಊಹೆಯಾಗಿತ್ತು, ಆದರೆ ಅದು ನಮ್ಮ ಕಣ್ಣಮುಂದೆ ಧುತ್ತನೆ ಬಂದು ನಿಂತಿದೆ. ಎಡಪಂಥೀಯರ ಒಂದು ಘೋಷಣೆ ಇರುತ್ತಿತ್ತು: ಸಮಾಜವಾದ ಇಲ್ಲವೆ ಮೃಗೀಯತೆ, ಎಂದು. ಇಂದು ಅದು ಅಲಂಕಾರಿಕ ಮಾತಾಗಿ ಉಳಿದಿಲ್ಲ, ಆದ್ದರಿಂದಲೇ, ಫ್ರೆಡರಿಕ್ ಜೇಮ್‌ಸನ್ ಹೇಳುವಂತೆ, ''ಇಂದು ಮಾರ್ಕ್ಸ್‌ವಾದ ಅವಶ್ಯಕವಾಗಿ ಮತ್ತೆ ಸತ್ಯವಾಗಿ ಹೊಮ್ಮಬೇಕಾಗಿದೆ.''

ಇಂದಿನ ವಿಶ್ವದ ಲಕ್ಷಣಗಳಲ್ಲಿ ಸಂಪತ್ತು ಮತ್ತು ಅಧಿಕಾರದ ಬೃಹತ್ ಅಸಮಾನತೆ ಇರುವುದಷ್ಟೇ ಅಲ್ಲ, ಅಲ್ಲಿ ಅತ್ಯಧಿಕ ಶೋಷಣೆ ಇದೆ, ಪ್ರಭುತ್ವದ ಹಿಂಸಾತ್ಮಕ ಹಿಡುಗು ಎಲ್ಲೆ ಮೀರಿದೆ. ಎರಡು ಶತಮಾನಗಳ ಕಾಲ ಮಾರ್ಕ್ಸ್‌ವಾದವು ವಿಚಾರ ಮಾಡುತ್ತಾ ಬಂದಿರುವುದು ಇಂತಹ ಉಪದ್ರವವನ್ನೇ. ಆದ್ದರಿಂದ ಇಂದಿನ ಜಗತ್ತಿಗೆ ಅದು ಒಂದು ನೀತಿ ಹೇಳುವ ಸಾಮರ್ಥ್ಯ ಹೊಂದಿದೆ. ಸ್ವತಃ ತಾನು ಜೀವಿಸಿದ್ದ ಇಂಗ್ಲೆಂಡಿನಲ್ಲಿ ರೈತಾಪಿ ಜನರನ್ನು ನಿರ್ಗತಿಕರನ್ನಾಗಿಸಿ, ಹಿಂಸಿಸಿ, ಪಟ್ಟಣ ಕೇಂದ್ರಿತ ಕಾರ್ಮಿಕ ವರ್ಗವನ್ನು ಹೇಗೆ ಅಸ್ತಿತ್ವಕ್ಕೆ ತರಲಾಗಿದ್ದಿತೆಂಬುದನ್ನು ಮಾರ್ಕ್ಸ್ ಗಮನಿಸಿದ್ದ. ಇಂದು ಅಂತಹ ಪರಿಸ್ಥಿತಿ ಬ್ರೆಜಿಲ್, ಭಾರತ, ಚೀನಾ, ರಷ್ಯ, ಮುಂತಾದ ದೇಶಗಳಲ್ಲಿ ಉದ್ಭವಿಸಿದೆ. ನೈಜೀರಿಯಾ, ಬಂಗ್ಲಾದೇಶ, ಮುಂತಾದ ದೇಶಗಳ ಕೊಳಚೆ ಪ್ರದೇಶಗಳು ಏಂಗೆಲ್ಸ್ ಇಂಗ್ಲೆಂಡಿನ ದುಡಿಯುವ ಜನರ ಪರಿಸರವನ್ನು ಬಣ್ಣಿಸಿದ್ದುದನ್ನು ನೆನಪಿಸುವಂತಿವೆ. ಅದನ್ನೇ ಮೈಕ್ ಡೇವಿಸ್ ತನ್ನ ಪುಸ್ತಕಕ್ಕೆ ಶೀರ್ಷಿಕೆ ಮಾಡಿದ್ದಾನೆ: ''ಕೊಳಚೆ ಪ್ರದೇಶಗಳ ಭೂ ಗ್ರಹ'', ಎಂದು. ಚೀನಾ ಇಂದು ಇಡೀ ವಿಶ್ವದ ಕಾರ್ಯಾಗಾರದಂತಾಗಿದೆ. ಅಲ್ಲಿಯ ವಿಶೇಷ ಆರ್ಥಿಕ ಪ್ರದೇಶಗಳಾದ ಗ್ವಾಂಗ್‌ಡಾಂಗ್ ಮತ್ತು ಷಾಂಘೈಗಳು ೧೮೪೦ರ ಮ್ಯಾಂಚೆಸ್ಟರ್ ಮತ್ತು ಗ್ಲಾಸ್ಗೋಗಳನ್ನು ನೆನಪಿಸುವಂತಿವೆ, ಎಂದು ಟ್ರಿಸ್ಟ್ರಾಮ್ ಹಂಟ್ ಉದ್ಗರಿಸಿದ್ದಾನೆ. ''ಮಲದ ಬೆಟ್ಟಗಳು'' ಎಲ್ಲೆಲ್ಲೂ ಹುಟ್ಟಿಕೊಳ್ಳುತ್ತಿವೆಯೆಂಬುದು ಸರ್ವವಿದಿತ.

ಈಗ ಯೋಚಿಸಿ: ಮಾರ್ಕ್ಸ್‌ವಾದವು ಅಪ್ರಸ್ತುತವಾಗುವ ಬದಲು ಬಂಡವಾಳಶಾಹಿ ಅಪ್ರಸ್ತುತವಾಗಿದ್ದರೆ ಹೇಗಿರುತ್ತಿತ್ತು! ೧೯ನೆಯ ಶತಮಾನದಲ್ಲೇ ಈ ಬಂಡವಾಳಶಾಹಿಯು ತನ್ನ ಸತ್ವ ಕಳೆದುಕೊಂಡಿತ್ತೆಂದು ಮಾರ್ಕ್ಸ್ ಗಮನಿಸಿದ್ದ. ಆದಿಯಲ್ಲಿ ಅದು ಸಾಮಾಜಿಕ ಅಭಿವೃದ್ಧಿಯನ್ನು ಪೋಷಿಸಿ ವೈಭವಯುತವಾಗಿತ್ತು, ಆದರೆ ಕ್ರಮೇಣ ಚಕ್ರಕ್ಕೆ ಪ್ರತಿಬಂಧಕ ಒಡ್ಡುವ ತಡೆಮರವಾಗಿಹೋಗಿದೆ ಅದು. ಮಾರ್ಕ್ಸ್ ಬಂಡವಾಳಶಾಹಿ ಸಮಾಜವನ್ನು ಭ್ರಮೆ ಮತ್ತು ಮೌಢ್ಯಾರಾಧನೆಗಳಲ್ಲಿ ಮುಳುಗಿರುವುದೆಂದು ವ್ಯಾಖ್ಯಾನಿಸಿದ್ದ. ತನ್ನನ್ನು ಆಧುನಿಕವೆಂದು ಕರೆದುಕೊಳ್ಳುವ ಬಂಡವಾಳಶಾಹಿ ನಿಜಕ್ಕೂ ಒಂದು ಕಲ್ಲನ್ನು ಪೂಜಿಸುವ ಹಂತದ ಬರ್ಬರ ವ್ಯವಸ್ಥೆ. ತಾನು ಜ್ಞಾನೋದಯದ ಸಂಕೇತವೆಂದುಕೊಂಡದ್ದು ಅದರ ಅಗಾಧ ಮೂಢನಂಬಿಕೆ. ಅದು ಸಾಧಿಸಿದ ಪ್ರಗತಿಯ ನಡುವೆ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ಹೆಣಗಾಡಿದ್ದೇನು ಕಡಿಮೆಯೆ? ಮಾರ್ಕ್ಸ್ ಒಮ್ಮೆ ಹೇಳಿದಂತೆ, ಬಂಡವಾಳಶಾಹಿಯ ಅಂತಿಮ ಎಲ್ಲೆಯನ್ನು ನಿರ್ಧರಿಸುವ ಅಂಶವೆಂದರೆ ಬಂಡವಾಳವೇ ಆಗಿದೆ. ಅದನ್ನು ಹೆಚ್ಚಿಸಿಕೊಳ್ಳುವ ಹುಮ್ಮಸ್ಸು ಎಷ್ಟೇ ಇದ್ದರೂ ಅದಕ್ಕೊಂದು ನಿರ್ಧಾರಕ ಎಲ್ಲೆ ಇದೆ. ಅದನ್ನು ಮೀರಿ ಹೋಗಲು ಅದಕ್ಕೆ ಸಾಧ್ಯವಿಲ್ಲ. ಇದರಲ್ಲೊಂದು ವ್ಯಂಗ್ಯವಿದೆ: ಇತಿಹಾಸದಲ್ಲಿ ಬಹಳ ಚಲನಶೀಲವಾದ ವ್ಯವಸ್ಥೆ ಅದೆಂಬ ಹೆಮ್ಮೆ ಒಂದು ಕಡೆ, ಆದರೆ ಸ್ಥಗಿತ ಮತ್ತು ಪುನರಾವರ್ತನೆಗೆ ಸಿಲುಕುವ ವ್ಯವಸ್ಥೆ ಎಂಬ ಕೊರತೆ ಇನ್ನೊಂದೆಡೆ. ಎಷ್ಟು ಕಾಲ ಕಳೆದರೂ ಬಂಡವಾಳಶಾಹಿಯು ಬಂಡವಾಳಶಾಹಿಯೇ; ಆದ್ದರಿಂದ ಮಾರ್ಕ್ಸ್‌ವಾದವು ಅದರ ಬಗ್ಗೆ ನೀಡುವ ವಿಮರ್ಶೆ ಎಲ್ಲ ಕಾಲಕ್ಕೂ ಅನ್ವಯವಾಗುವಂಥದೇ ಆಗಿರುತ್ತದೆ. ತನ್ನ ಎಲ್ಲೆಯನ್ನು ಮೀರಿ ಬೆಳೆಯಲು ಅದಕ್ಕೆ ನಿಜಕ್ಕೂ ಸಾಧ್ಯವಾದಾಗ ಮಾತ್ರ ಮಾರ್ಕ್ಸ್‌ವಾದವು ಸೀಮಿತಗೊಂಡೀತು. ಆದರೆ ಬಂಡವಾಳಶಾಹಿಯು ಅಂತಹ ಭವಿಷ್ಯವೊಂದನ್ನು ನಿರ್ಮಿಸಿಕೊಳ್ಳಲಾರದು. ಅದಕ್ಕೆ ಆಯ್ಕೆಯ ಸೀಮಿತತೆಯ ಬಂಧನ ನಿರಂತರವಾದ್ದು.

ಬಂಡವಾಳಶಾಹಿಯು ಭೌತಿಕ ಪ್ರಗತಿಗೆ ಸಾಕಷ್ಟು ಕಾಣಿಕೆ ನೀಡಿದೆ. ಅದು ಅಸ್ತಿತ್ವಕ್ಕೆ ಬಂದ ಇಷ್ಟು ಶತಮಾನಗಳಲ್ಲಿ ಅದು ಮಾನವ ಸಮಾಜವನ್ನು ಅಚ್ಚುಕಟ್ಟಾಗಿ ನಿರ್ವಹಿಸುವುದರಲ್ಲಿ ಎಳ್ಳಷ್ಟೂ ಸಫಲವಾಗಿಲ್ಲ. ಮಾನವನ ಸಮಾಜದ ಅಗತ್ಯಗಳನ್ನು ಅದು ಪೂರೈಸಲು ಸೋತಿದೆ, ಸೋಲುತ್ತಲೇ ಇರುತ್ತದೆ. ಹೀಗಿರುವಾಗ ನಾವಿನ್ನೆಷ್ಟು ದಿನ ಕಾಯುತ್ತಾ ಕುಳಿತಿರಬೇಕು? ಈ ವ್ಯವಸ್ಥೆಯಡಿ ಸೃಷ್ಟಿಸಲಾಗುವ ಅಗಾಧ ಸಂಪತ್ತು ನಾಳೆ ಎಂದೋ ಸಮಾಜದ ಎಲ್ಲರಿಗೂ ದಕ್ಕುತ್ತದೆಂಬ ಭ್ರಮೆಯನ್ನು ಇನ್ನೆಷ್ಟು ಕಾಲ ಪೋಷಿಸಬೇಕು? ಅದೇ, ಎಡಚಿಂತನೆಯು ಫಲ ನೀಡಲು ಸಾವಧಾನವಾಗಿ ಕಾಯಿರಿ ಎಂದರೆ ವಿಶ್ವವು ಅದಕ್ಕೆ ಸಮ್ಮತಿ ನೀಡುತ್ತದೆಯೆ? ಕೆಲವು ಬಲಪಂಥೀಯರು ಅಂಜಿಕೆಯಿಲ್ಲದೆ ಒಂದು ಮಾತು ಹೇಳುತ್ತಾರೆ: ''ಹೌದು, ನಮ್ಮ ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಅಪಾರ ಅನ್ಯಾಯಗಳಿರುವುದು ಸಹಜ. ಅದು ಕಠಿಣವೆನಿಸಬಹುದು, ಆದರೇನು ಮಾಡುವುದು? ಅದಕ್ಕೆ ನೀಡಲಾಗುವ ಪರ್ಯಾಯಗಳು ಇನ್ನೂ ಹೆಚ್ಚು ಅಧ್ವಾನ'', ಎಂದು. ಇವರ ಪ್ರಾಮಾಣಿಕತೆಯನ್ನು ಮೆಚ್ಚಬೇಕು. ''ಇಲ್ಲ, ಬಂಡವಾಳಶಾಹಿಯಡಿ ಎಲ್ಲವೂ ಸುಗಮವಾಗುತ್ತದೆ, ಎಲ್ಲಾ ಸರಿಹೋಗುತ್ತದೆ'' ಎನ್ನುವ ಮೋಸಗಾರರಿಗಿಂತಲೂ ಇವರು ಉತ್ತಮರು.

ಶ್ರೀಮಂತ ಮತ್ತು ಬಡವ, ಇಬ್ಬರೂ ಇದ್ದಾರೆ; ಕರಿಯ ಮತ್ತು ಬಿಳಿಯ ಚರ್ಮದವರಿದ್ದಂತೆ. ಇದು ಸಹಜ, ಆದರೆ ಕಾಲ ಉರುಳಿದಂತೆ ಶ್ರೀಮಂತರಿಗೆ ದೊರಕುವ ಸೌಲಭ್ಯಗಳೆಲ್ಲಾ ಪಾಪದ ಬಡಪಾಯಿಗಳಿಗೂ ಲಭಿಸುತ್ತವೆ, ಎಂಬ ಢೋಂಗಿ ಮಾತನ್ನು ನಂಬಿದೆವೆಂದೇ ಇಟ್ಟುಕೊಳ್ಳಿ. ಅದರರ್ಥವೇನು ಗೊತ್ತೆ? ಕೆಲವರು ಶ್ರೀಮಂತರು, ಇನ್ನು ಕೆಲವರು ನಿರ್ಗತಿಕರು ಎಂದು, ಅಷ್ಟೆ; ಪ್ರಪಂಚದಲ್ಲಿ ಅಪರಾಧಿಗಳಿದ್ದಾರೆ, ಅವರನ್ನು ತಲಾಶು ಮಾಡುವ ಪತ್ತೇದಾರರೂ ಇದ್ದಾರೆ, ಎಂದು ಹೇಳಿದಂತೆ. ಅದು ಖಂಡಿತ ನಿಜ. ಆದರೆ ಅದನ್ನು ಹೇಳಬೇಕಾದ್ದು ಬೇರೆ ರೀತಿಯಲ್ಲಿ, ಅದೇನೆಂದರೆ, ಅಪರಾಧವೆಸಗುವ ಕ್ರೂರಿಗಳಿರುವುದರಿಂದ ಪತ್ತೇದಾರರಿದ್ದಾರೆ, ಎಂಬುದು. ಮಾರ್ಕ್ಸ್‌ವಾದ ಏಕೆ ಪ್ರಸ್ತುತವೆಂಬುದು ಸ್ಪಷ್ಟವಾಯಿತೆ? ಲೂಟಿ ಮಾಡುವ ಚೋರ ಬಂಡವಾಳಶಾಹಿ ಇರುವುದರಿಂದ...

ಮೂಲ: **ಟೆರಿ ಈಗಲ್‌ಟನ್**
ಸಂಗ್ರಹಾನುವಾದ: **ಡಾ|| ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್, ೨೨/೧, ೮ನೇ ಕ್ರಾಸ್, ಕಾವೇರಿನಗರ
ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫

# ಸರಳವ್ಯಕ್ತಿ, ಸ್ನೇಹಜೀವಿ, ನಿಗರ್ವಿ ಜಿ. ಕುಮಾರಪ್ಪ



ಕುಮಾರಪ್ಪನವರಿಗೆ ಬಂಗಾಳಿ ಭಾಷೆಯಲ್ಲಿ ಎಷ್ಟುಮಟ್ಟಿನ ಹಿಡಿತವಿತ್ತೆಂದರೆ, ಬಂಗಾಳಿ ವಿಶ್ವಕೋಶದ ವತಿಯಿಂದ ಪ್ರಕಟವಾಗುವ ಬಂಗಾಳಿ ಭಾಷೆಯ ಮಾಸಿಕದಲ್ಲಿ ಸಹ ಅವರು ಸಹಾಯಕ ಸಂಪಾದಕರಾಗಿ ಕಾರ್ಯ ನಿರ್ವಹಿಸಿದರು.

**ಪರಂಜ್ಯೋತಿ**

**ಜಿ.** ಕುಮಾರಪ್ಪ ಅವರು ಜೂನ್ ೬ರಂದು ಬೆಂಗಳೂರಿನಲ್ಲಿ ನಿಧನರಾದರು. ಅವರಿಗೆ ೫೫ ವರ್ಷವಾಗಿತ್ತು. ಸದಾ ಚಟುವಟಿಕೆಯಲ್ಲಿ ನಿರತರಾಗಿರುತ್ತಿದ್ದ ಅವರು ತಮ್ಮ ಕೆಲಸಗಳನ್ನು ಅರ್ಧಕ್ಕೇ ನಿಲ್ಲಿಸಿ ನಡೆದುಬಿಟ್ಟರು ! ಕಳೆದ ಒಂದೂವರೆ ವರ್ಷದಿಂದ ಅವರು ಅನಾರೋಗ್ಯ ಪೀಡಿತರಾಗಿದ್ದರು.

ಕುಮಾರಪ್ಪ ಅವರಿಗೆ 'ಹೊಸತು' ಪತ್ರಿಕೆಯ ಮತ್ತು ನವಕರ್ನಾಟಕ ಪ್ರಕಾಶನದ ನಮನಗಳು ಸಲ್ಲುತ್ತವೆ.

ಚಿತ್ರದುರ್ಗ ಜಿಲ್ಲೆಯ ಹೊಳಲ್ಕೆರೆ ತಾಲೂಕಿನ ಬಸಾಪುರದಲ್ಲಿ ಜನಿಸಿದ ಇವರು ಗ್ರಂಥಾಲಯ ವಿಜ್ಞಾನದ ಪದವಿ ಪಡೆದವರು. ಒಂದೆರಡು ವರ್ಷ ಕಾಲೇಜು ಅಧ್ಯಾಪಕರಾಗಿ ಕಾರ್ಯ ನಿರ್ವಹಿಸಿದ್ದರು.

ಕೊಲ್ಕತ್ತಾದಲ್ಲಿರುವ ರಾಷ್ಟ್ರೀಯ ಗ್ರಂಥಾಲಯದಲ್ಲಿ ಕನ್ನಡ ವಿಭಾಗದ ಮುಖ್ಯಸ್ಥರಾಗಿದ್ದರು. ಅಲ್ಲಿದ್ದುಕೊಂಡು ಕರ್ನಾಟಕದಲ್ಲಿ ಪ್ರಕಟವಾಗುವ ಪುಸ್ತಕಗಳ ಬಗ್ಗೆ ಗಮನ ಹರಿಸುತ್ತಿದ್ದರು. ರಾಷ್ಟ್ರೀಯ ಗ್ರಂಥಾಲಯಕ್ಕೆ ತಮ್ಮ ಪ್ರಕಟಿತ ಕೃತಿಗಳನ್ನು ಕಳಿಸಿಕೊಡುವಂತೆ ಪ್ರಕಾಶಕರನ್ನು ಒತ್ತಾಯಿಸುತ್ತಿದ್ದರು.

ಕೊಲ್ಕತ್ತಾ ಇವರ ಕರ್ಮಭೂಮಿಯಾದ ನಂತರ ವ್ಯವಹಾರಕ್ಕಾಗಿ ಬಂಗಾಳಿ ಭಾಷೆ ಕಲಿಯಲು ಪ್ರಾರಂಭಿಸಿದರು. ಬಂಗಾಳಿಗಳೇ ಆಶ್ಚರ್ಯಪಡುವಂತೆ ಬಂಗಾಳಿಯಲ್ಲಿ ವ್ಯವಹರಿಸಲು ಇವರಿಗೆ ಸಾಧ್ಯವಾಯಿತು. ಭಾಷೆಯ ಕಲಿಕೆ ಬಂಗಾಳಿ ಸಾಹಿತ್ಯದ ಅಧ್ಯಯನದತ್ತ ಅವರನ್ನು ಸೆಳೆಯಿತು.

ರಾಜಕೀಯ ದೃಷ್ಟಿಯಿಂದ ಸದಾ ತಳಮಳದ ಸ್ಥಿತಿಯಲ್ಲಿರುತ್ತಿದ್ದ ಕೊಲ್ಕತ್ತಾದಲ್ಲಿ ಬಂಗಾಳಿ ಸಾಹಿತ್ಯ ಅಭ್ಯಾಸ ಮಾಡುತ್ತ ಬದುಕುವುದಕ್ಕೆ ಒಗ್ಗಿಕೊಂಡರು. ಕರ್ನಾಟಕದ ಬಯಲು ಸೀಮೆಯ ಹಳ್ಳಿಯೊಂದರಿಂದ ಹೋದ ಅವರು ಕೊಲ್ಕತ್ತಾವನ್ನು ಪ್ರೀತಿಸಿದರು. ವಾಸಕ್ಕೆ ಒಂದು ಮನೆಯನ್ನು ಕಟ್ಟಿಸಿಕೊಂಡರು.

ಕರ್ನಾಟಕದಿಂದ ಕೊಲ್ಕತ್ತಾಗೆ ಹೋಗುವ ಕನ್ನಡ ಸಾಹಿತಿಗಳಿಗೆ ತಮ್ಮ ಮನೆಯಲ್ಲಿ ಪ್ರೀತಿಯಿಂದ ಆತಿಥ್ಯ ನೀಡುವುದನ್ನು ಕನ್ನಡದ ಕೈಂಕರ್ಯವೆಂದೇ ಬಗೆಯುತ್ತಿದ್ದ ಅವರು, ಸಹಾಯ ಅಪೇಕ್ಷಿಸಿ ದೂರವಾಣಿ ಮೂಲಕ ಸಂಪರ್ಕಿಸಿದರೂ, ಅಂಥವರನ್ನು ರೈಲ್ವೆ ಸ್ಟೇಷನ್ನಿನಲ್ಲೋ ಅಥವಾ ಬಸ್‌ಸ್ಟ್ಯಾಂಡಿನಲ್ಲೋ ಭೇಟಿ ಮಾಡಿ ಮನೆಗೆ ಕರೆತಂದು ಉಪಚರಿಸುತ್ತಿದ್ದರು.

ಕನ್ನಡ ಲೇಖಕರು ಯಾರಾದರೂ ಕೊಲ್ಕತ್ತೆಗೆ ಬಂದಿರುವ ವಿಷಯ ತಿಳಿದರೆ ಕುಮಾರಪ್ಪ ಅವರನ್ನು ಭೇಟಿ ಮಾಡಿ, ಆತಿಥ್ಯಕ್ಕೆ ಆಹ್ವಾನಿಸುತ್ತಿದ್ದರಲ್ಲದೆ ಕೊಲ್ಕತ್ತಾ ಕರ್ನಾಟಕ ಸಂಘದ ಮಿತ್ರರಿಗೂ ಪರಿಚಯ ಮಾಡಿಸುತ್ತಿದ್ದರು. ಕರ್ನಾಟಕದಿಂದ ಬಂದವರಿಗೆ ಕೊಲ್ಕತ್ತಾ ತೋರಿಸಲು ಮಾರ್ಗದರ್ಶಿಯೂ ಆಗಿರುತ್ತಿದ್ದರು. ಆತಿಥ್ಯ ನೀಡುವ ವಿಷಯದಲ್ಲಿ ಕುಮಾರಪ್ಪನವರ ಶ್ರೀಮತಿ ಮತ್ತು ಮಗಳು ಸಹ ಸಂತೋಷದಿಂದ ಭಾಗವಹಿಸುತ್ತಿದ್ದರು.

ಕುಮಾರಪ್ಪನವರಿಗೆ ಬಂಗಾಳಿ ಭಾಷೆಯಲ್ಲಿ ಎಷ್ಟುಮಟ್ಟಿನ ಹಿಡಿತವಿತ್ತೆಂದರೆ, ಬಂಗಾಳಿ ವಿಶ್ವಕೋಶದ ವತಿಯಿಂದ ಪ್ರಕಟವಾಗುವ ಬಂಗಾಳಿ ಭಾಷೆಯ ಮಾಸಿಕದಲ್ಲಿ ಸಹ ಅವರು ಸಹಾಯಕ ಸಂಪಾದಕರಾಗಿ ಕಾರ್ಯ ನಿರ್ವಹಿಸಿದರು.

ಒಮ್ಮೆ ಕುಮಾರಪ್ಪನವರ ಮನೆಯಲ್ಲಿ ಆತಿಥ್ಯ ಪಡೆಯಲು ಹೋಗಿದ್ದ 'ಹೊಸತು' ಸಂಪಾದಕ ಡಾ|| ಜಿ. ಆರ್. ಅವರು, ಬಂಗಾಳಿ ಭಾಷೆಯಲ್ಲಿ ಅವರಿಗಿರುವ ಪರಿಣತಿಯನ್ನು ಗಮನಿಸಿ, ಡಾ|| ದೇವಿಪ್ರಸಾದ್ ಚಟ್ಟೋಪಾಧ್ಯಾಯರ ಕೆಲವು ಬಂಗಾಳಿ ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿಕೊಡುವಂತೆ ಸಲಹೆ ಮಾಡಿದರು.

ಡಾ|| ದೇವಿಪ್ರಸಾದರು ಮಹಾನ್ ಪಂಡಿತರು. ತತ್ವಶಾಸ್ತ್ರ, ಇತಿಹಾಸ, ವೈಚಾರಿಕ, ವೈಜ್ಞಾನಿಕ, ಪುರಾತತ್ವ, ಮಾನವಶಾಸ್ತ್ರ– ಹೀಗೆ ಹಲವು ಪ್ರಕಾರಗಳಿಗೆ ವಿಸ್ತರಿಸಿದೆ ಅವರ ಸಾಹಿತ್ಯ. ಬಂಗಾಳಿಯಲ್ಲಿ ಬರೆದಿರುವ ಅವರ ಕೃತಿಗಳನ್ನು ಕನ್ನಡಕ್ಕೆ ಅನುವಾದಿಸುವ ಕೆಲಸ ಪ್ರಾರಂಭಿಸಿದಾಗ ಕುಮಾರಪ್ಪನವರಿಗೆ ಅಳುಕೆನ್ನಿಸಿದರೂ ಧೈರ್ಯಗೆಡದೆ ಮುಂದುವರಿದರು. ಅನುವಾದಿಸುತ್ತ ಹೋದಂತೆ ಕುಮಾರಪ್ಪನವರ ಕಣ್ಣುಮುಂದೆ ಒಂದು ಅದ್ಭುತ ಜ್ಞಾನ ಪ್ರಪಂಚದ ಬಾಗಿಲು ತೆರೆದುಕೊಂಡಂತಾಯಿತು ! ಕನ್ನಡದಲ್ಲಿ ಲಭ್ಯವಾಗದಿದ್ದ ಇಂಥ ವಿಚಾರ ಸಾಹಿತ್ಯವನ್ನು ಬಂಗಾಳಿಯಿಂದ ಅನುವಾದಿಸಲು ತನಗೆ ದೊರಕಿದ ಸದವಕಾಶವೆಂದು ಅವರಿಗೆ ಹೆಮ್ಮೆಯೂ ಉಂಟಾಯಿತು.

ಕುಮಾರಪ್ಪನವರ ಪ್ರಯತ್ನದಿಂದಾಗಿ ಡಾ|| ದೇವಿಪ್ರಸಾದರ ಹಲವು ಉಪಯುಕ್ತ ವಿಚಾರ ಪ್ರಚೋದಕ ಕೃತಿಗಳು ಕನ್ನಡದಲ್ಲಿ ಪ್ರಕಟಗೊಂಡವು. ನವಕರ್ನಾಟಕ ಪ್ರಕಾಶನ ಅವರು ಅನುವಾದಿಸಿರುವ 'ಪ್ರಾಚೀನ ಭಾರತದಲ್ಲಿ ಚಿಕಿತ್ಸಾ ವಿಧಾನ', 'ಸಂಶೋಧನೆಯ ಹಾದಿ', 'ಇದು ಮುಗಿಯದ ಕಥೆ', 'ಮಾತೆಯರು ಮಾನ್ಯರಾಗಿದ್ದಾಗ', ಮತ್ತು 'ಪ್ರತಿರೋಧ' – ಮುಂತಾದುವನ್ನು ಪ್ರಕಟಿಸಿದೆ. ಇವು ಹಲವು ಮುದ್ರಣಗಳನ್ನು ಕಂಡಿವೆ. 'ಪ್ರತಿರೋಧ' ಬಂಕಿಂಚಂದ್ರರಿಂದ ಹಿಡಿದು ಡಾ|| ಮೇಘನಾದ ಸಾಹವರೆಗೆ ಹಲವು ಬಂಗಾಳಿ ಲೇಖಕರ ಪ್ರಬಂಧ ಸಂಕಲನ. ಇದನ್ನು ಡಾ|| ದೇವಿಪ್ರಸಾದರು ಸಂಪಾದಿಸಿದ್ದಾರೆ.

ಕವಿಯಾಗಿ ಸಾಹಿತ್ಯಲೋಕಕ್ಕೆ ಕಾಲಿರಿಸಿದ ಅವರು ಎರಡು ಕವನ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಬಂಗಾಳಿ, ಹಿಂದಿ ಮತ್ತು ಇಂಗ್ಲಿಷಿನಿಂದ ಇವರು ಅನುವಾದಿಸಿರುವ ಕೃತಿಗಳು ಪ್ರಕಟವಾಗಿವೆ. ಕೊಲ್ಕತ್ತಾದಲ್ಲಿ ಕನ್ನಡಿಗರ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದರಲ್ಲದೆ, ಆ ಚಟುವಟಿಕೆಗಳ ಕುರಿತ ಒಂದು ಕರಪತ್ರವನ್ನೂ ಪ್ರಕಟಿಸುತ್ತಿದ್ದರು.

ಮಹಾಶ್ವೇತಾ ದೇವಿ ಸೇರಿದಂತೆ ಬಂಗಾಳದ ಹಲವು ಪ್ರಮುಖ ಲೇಖಕರೊಂದಿಗೆ ನಿಕಟ ಸಂಪರ್ಕ ಇರಿಸಿಕೊಂಡಿದ್ದರು. ಕನ್ನಡದ ಸಾಹಿತ್ಯ ಬೆಳವಣಿಗೆಗಳ ಕುರಿತು ಅವರಿಗೆ ತಿಳಿಸಿಕೊಡುತ್ತಿದ್ದರು.

ನವಕರ್ನಾಟಕದೊಂದಿಗೆ ನಿಕಟ ಸಂಪರ್ಕ ಇರಿಸಿಕೊಂಡಿದ್ದ ಕುಮಾರಪ್ಪ ರಜೆಯಲ್ಲಿ ಊರಿಗೆ ಬಂದಾಗ 'ಹೊಸತು' ಕಚೇರಿಗೆ ತಪ್ಪದೆ ಭೇಟಿ ನೀಡಿ ಸಂಪಾದಕರೊಂದಿಗೆ ಮಾತುಕತೆ ನಡೆಸುತ್ತಿದ್ದರು. ನವಕರ್ನಾಟಕ ಬಳಗದೊಂದಿಗೆ ಬಂಗಾಳದ ಸಮಕಾಲೀನ ಸಾಹಿತ್ಯ ಕುರಿತು ಚರ್ಚಿಸುತ್ತಿದ್ದರು. ಬಂಗಾಳಿಯಲ್ಲಿ ಸಾಕಷ್ಟು ಜನಪ್ರಿಯವಾಗಿರುವ ವಿಚಾರ ಪ್ರಚೋದಿತ ಕೃತಿಗಳನ್ನು ಕನ್ನಡದಲ್ಲಿ ಪ್ರಕಟಿಸುವಂತೆ ಸಲಹೆ ನೀಡುತ್ತಿದ್ದರು. ಮುಖ್ಯ ವಿಚಾರಗಳನ್ನು ಪತ್ರಮುಖೇನ ಸಹ ಬರೆದು ತಿಳಿಸುತ್ತಿದ್ದರು.

ಇಂಥ ವಿಚಾರವಿನಿಮಯದ ಪರಿಣಾಮವಾಗಿ ಕುಮಾರಪ್ಪ ಹಿಂದಿಯಿಂದ ಅನುವಾದಿಸಿದ ಸುಶೀಲ ರಾಯ್ ಅವರ 'ನಿರಕ್ಷರಿಯ ಆತ್ಮಕಥೆ' ಮತ್ತು ಬಂಗಾಳಿಯಿಂದ ಅನುವಾದಿಸಿದ ಬೇಬಿ ಹಾಲ್ದಾರ್ ಅವರ 'ನೋವು ತುಂಬಿದ ಬದುಕು' ಕನ್ನಡದಲ್ಲಿ ಪ್ರಕಟವಾಗಿವೆ. ಈ ಪುಸ್ತಕಗಳ ಅನಾವರಣ ಸಮಾರಂಭಕ್ಕೆಂದು ಕುಮಾರಪ್ಪನವರು ಕೊಲ್ಕತ್ತಾದಿಂದ ಬಂದಿದ್ದರು.

ಅವರು ಅನುವಾದಿಸಿದ ಕೃತಿಗಳ ಕರಡು ತಿದ್ದುವ ಕಾರ್ಯವನ್ನು ಅಚ್ಚುಕಟ್ಟಾಗಿ ಮಾಡಿ ಕೊಡುತ್ತಿದ್ದರು. ಒಂದೆರಡು ದೋಷಗಳು ಉಳಿದಿರುವುದು ಗಮನಕ್ಕೆ ಬಂದಾಗ ದೂರವಾಣಿ ಮೂಲಕ ಸಂಪರ್ಕಿಸಿ ಅವನ್ನು ಸರಿಪಡಿಸಲು ಪ್ರಯತ್ನಿಸುತ್ತಿದ್ದರು.

ಅಧಿಕಾರಿಯ ಗತ್ತು ಇಲ್ಲದ ಸರಳ ವ್ಯಕ್ತಿತ್ವ. ನಿಗರ್ವಿ, ಸ್ನೇಹಜೀವಿ. ಕೊಲ್ಕತ್ತಾದಲ್ಲಿ ಬಂಗಾಳಿಗಳಿಗಿಂತ ಬಂಗಾಳಿಯಾಗಿ, ಆದರೂ ಕನ್ನಡಿಗನಾಗಿ ಉಸಿರಾಡಿದವರು. ಲ್ಯುಕೇಮಿಯ ರೂಪದಲ್ಲಿ ಕಾಲನ ಕರೆಬಂದಾಗ ನಿರ್ಗಮಿಸಿದರು. ಅವರಿಗೆ 'ಹೊಸತು' ತಲೆಬಾಗುತ್ತದೆ.

**ಪರಂಜ್ಯೋತಿ**
ನಂ. ೧೦, ೧ನೇ ಮಹಡಿ, ಶ್ರೀರಾಮ ದೇವಾಲಯದ ರಸ್ತೆ, ಈಜಿಪುರ, ವಿವೇಕನಗರ ಅಂಚೆ
ಬೆಂಗಳೂರು - ೫೬೦ ೦೪೭



# ಮಹಾಮಾರ್ಗದಲ್ಲಿ ದನಕರುಗಳು

ಮುಂಜಾನೆಯಿಂದ ಮುಂಜಾನೆಯವರೆಗೆ ಮಧ್ಯಾಹ್ನದಿಂದ
ಮಧ್ಯಾಹ್ನದವರೆಗೆ ಸಂಜೆಯಿಂದ ಸಂಜೆಯವರೆಗೆ ಎಲ್ಲಿದ್ದ
ವೊ ಏನೊ ಮಹಾಮಾರ್ಗದ ಮಧ್ಯ ಮಲಕೊಂಡ ದನಕ
ರುಗಳು ಮಧ್ಯರಾತ್ರಿಯಲ್ಲಿ ತಂಗಾಳಿ ಜೀವಿಸುವ ಅಮವಾಸ್ಯೆ

ರಾತ್ರಿ ಮುದ್ದಿಸಲು ಅಲ್ಲಿಂದ ಅವುಗಳಿಗೆ ಸುತ್ತುಹಾಕಿ ಕೊಂ
ಡು ಹೋಗುವ ಕಾರು ಲಾರಿ ಬಸ್ಸು ಜೀಪು ಆಟೋ ಮೋಟ
ರ್ ಸೈಕಲ್ ದೂರ ದೂರದಿಂದಲೆ ಹೋಗುವ ಆ ಮಧ್ಯ
ರಾತ್ರಿಯಲ್ಲಿ ಶಾಸಕರು ಸಚಿವರು ಮುಖ್ಯಮಂತ್ರಿಗಳು ಉ

ನ್ನತಾಧಿಕಾರಿಗಳು ಜನಸಾಮಾನ್ಯರು ತಮ್ಮ ತಮ್ಮ ವಾಹ
ನಗಳೊಂದಿಗೆ ಎಷ್ಟೆ ಸದ್ದು ಗದ್ದಲ ಮಾಡುತ್ತ ಮಾಡುತ್ತ
ಹೋದರು ಬಂದರು ಮಲಗಿದವುಗಳು ಮಲಗೆ ಇರಲು
ಯಾರಿಗಾಗಿಯು ಎದ್ದು ನಮಸ್ಕರಿಸದೆ ಅಂಜದೆ ಅಳುಕದೆ

ಅವೆಲ್ಲವುಗಳು ತಮಗೇನು ಸಂಬಂಧವಿಲ್ಲವೆಂಬಂತೆ ಹಗಲ
ಹೊತ್ತು ತಿಂದ ಹುಲ್ಲು ಮೇವು ಕಣಿಕೆ ರವದೆ ಬಾಯಿ ಆ
ಡಿಸುತ್ತ ಬಾಯಿ ಆಡಿಸುತ್ತ ಆ ಕಡೆಯು ನೋಡದೆ ಈ
ಕಡೆಯು ನೋಡದೆ ಯಾವ ಕಡೆಯು ನೋಡದೆ ಅತ್ತ

ನೋಡದೆ ಇತ್ತ ನೋಡದೆ ಸುತ್ತ ನೋಡದೆ ಮುತ್ತ ನೋ
ಡದೆ ಏನು ಯಾವುದು ಗೊತ್ತಿಲ್ಲವೆಂಬಂತೆ ಒಂದಕ್ಕೊಂ
ದು ತೆಕ್ಕೆ ಬಡಿದುಕೊಂಡು ಮಕ್ಕಳ ಬಾಯಿಯಲ್ಲಿ ತಾಯಿ
ಂದಿರು ತಾಯಿಂದಿರ ಬಾಯಿಯಲ್ಲಿ ಮಕ್ಕಳು ಮರಿಗಳು

ಬೀಟು ಬಿಡದೆ ಎಲ್ಲ ಬಾಯಿ ಸೇರಿಸಿಕೊಂಡು ಒಂದನ್ನೊಂ
ದು ಪ್ರೀತಿಸುತ್ತ ತಮ್ಮೊಳಗೆ ತಾವು ಕಣ್ಣಿಂದ ನೋಡುತ್ತ
ಕಿವಿಯಿಂದ ಕೇಳುತ್ತ ಮೂಗಿಂದ ಗಂಧಿಸುತ್ತ ಬಾಯಿಂ
ದ ಸವಿಯುತ್ತ ನಾಲಿಗೆಯಿಂದ ಆಡಿಸುತ್ತ ಹಲ್ಲಿಂದ ನು

ರಿಸುತ್ತ ಅಂಗಳದಿಂದ ಅರೆಯುತ್ತ ಹೊಟ್ಟೆಯೊಳಗೆ ಕ
ಳಿಸಲು ಇಡೀ ರಾತ್ರಿಗೆ ರಾತ್ರಿ ಬಯಲಲ್ಲಿ ಬಯಲಾಗಲು
ನಿರ್ಬಯಲಲ್ಲಿ ನಿರ್ಬಯಲಾಗಲು ಆಯಲದಲ್ಲಿ ಆಲಯ
ವಾಗಲು ಮುಗಿಲಲ್ಲಿ ಮುಗಿಲಾಗಲು ನಿರ್ಮುಗಿಲಲ್ಲಿ ನಿ

ರ್ಮುಗಿಲಾಗಲು ಬಾಹ್ಯ ಪ್ರಪಂಚದ ಮರೆತು ಆಂತರ್ಯ
ಪ್ರಪಂಚಕೆ ಸೇರಿ ತಮ್ಮೊಳಗೆ ತಾವಿರಲು ನಭೊ ಮ
ಂಡಲದ ನಕ್ಷತ್ರಗಳು ಪಶ್ಚಿಮ ದಿಕ್ಕಿಗೆ ಇಳಿದಂತೆ ಇಳಿದ
ಂತೆ ಒಂದಂದಾಗಿ ಒಂದಂದಾಗಿ ಮರೆಯಾಗುತ್ತ ಹೋ

ದಂತೆ ಬೆಳ್ಳಿ ಚುಕ್ಕೆ ಮೂಡಿದಂತೆ ನಿಶಾಂತವಾಗುತಿದ್ದಂತೆ
ಪೂರ್ವ ದಿಕ್ಕಿನಲ್ಲಿ ಉಷಾರಾಣಿ ಮೂಡಿ ಸೂರ್ಯೋದಯ
ವಾಗುತ್ತಿದ್ದಂತೆ ಸೂರ್ಯ ಮುಳುಗಿ ಮೂಡಿ ಬರುವ ತನ
ಕ ವಿಶ್ರಾಂತಿ ಪಡೆಯುತಿದ್ದ ದನಕರುಗಳು ಎತ್ತು ಎಮ್ಮೆ

ಕೋಣಗಳು ಸೂರ್ಯನ ಬಂಗಾರ ಕಿರಣ ಕಂಡು ಖು
ಷಿ ಗೊಂಡು ಮಲಗಿದವೆಲ್ಲ ಎದ್ದು ತಮ್ಮ ತಮ್ಮ ಹಗಲು
ಬದುಕಿನ ದಿಕ್ಕಿಗೆ ಹೊರಟು ಹೋಗುತಿದ್ದಂತೆ ರಾತ್ರಿಯಲ್ಲಿ
ನಡೆದ ಕಂಡ ಉಂಡ ಅನುಭವಿಸಿದ ಲೋಕಾಲೋಕ ನೆ

ನಪಿಸುತ್ತ ಅನುಭವಿಸುತ್ತ ದಿವ್ಯಜ್ಞಾನಿಯಾಗಲು ಅವೆಲ್ಲಾ
ಮತ್ತೆ ರಾತ್ರಿ ಸೇರವ ಅರಿವು ಇಟ್ಟುಕೊಂಡು ಹೊಟ್ಟೆತು
ಂಬಿ ಕೊಳ್ಳಲು ತಮ್ಮ ತಮ್ಮ ತೋಟ ಪಟ್ಟಿ ಗದ್ದೆ ಹೊಲ
ನೆಲ ಹುಲ್‌ಗಾವಲು ಕೆರೆ ಹಳ್ಳ ಕೊಳ್ಳ ಆಗುತ್ತ ಸಾಗಲು

**ಡಾ|| ಚೆನ್ನಣ್ಣ ವಾಲೀಕಾರ**
ಬಡೇಪುರ ಕಾಲೋನಿ
ವಿಶ್ವವಿದ್ಯಾನಿಲಯ ರಸ್ತೆ
ಗುಲಬರ್ಗಾ - ೫೮೫೧೦೬



ಹಿಂದಿಮೂಲ : ಅಮರಕಾಂತ್
ಕನ್ನಡಕ್ಕೆ : ಎಸ್. ಮಾಲತಿ

ಇಡೀ ಮನೆ ನೊಣಗಳಿಂದ ತುಂಬಿತ್ತು. ಅಂಗಳದ ಸರಿಗೆಯಲ್ಲಿ ಒಂದು ಕೊಳಕಾದ ಸೀರೆ ನೇತುಹಾಕಿತ್ತು , ಅದರಲ್ಲಿ ಹಲವು ತೇಪೆ ಹಾಕಲಾಗಿತ್ತು. ದೊಡ್ಡ ಹುಡುಗರಿಬ್ಬರೂ ಎಲ್ಲಿದ್ದಾರೋ ಗೊತ್ತಿಲ್ಲ. ಹೊರಗಿನ ಕೋಣೆಯಲ್ಲಿ ಮುನ್ಷೀಜಿ ಮುಖ ಕೆಳಗೆ ಮಾಡಿ, ಒಂದೂವರೆ ತಿಂಗಳ ಕೆಳಗೆ ಮನೆ-ಬಾಡಿಗೆ-ನಿಯಂತ್ರಣ ವಿಭಾಗದ ಗುಮಾಸ್ತಗಿರಿಯಿಂದ ವಜಾ ಆಗಿಲ್ಲವೇನೋ, ಸಾಯಂಕಾಲ ಕೆಲಸದ ಬೇಟೆಯಲ್ಲಿ ಎಲ್ಲಿಗೂ ಹೋಗುವುದು ಇಲ್ಲವೇನೊ ಅನ್ನುವ ರೀತಿಯಲ್ಲಿ ನಿಶ್ಚಿಂತೆಯಿಂದ ಮಲಗಿದ್ದರು.

# ಮಧ್ಯಾಹ್ನದ ಭೋಜನ

ಸಿದ್ದೇಶ್ವರಿ ಅಡುಗೆ ಮಾಡಿದ ನಂತರ ಒಲೆ ಆರಿಸಿದಳು ಮತ್ತು ಎರಡು ಮಂಡಿಗಳ ಮಧ್ಯೆ ತಲೆಯಿಟ್ಟು ತನ್ನ ಕಾಲಿನ ಬೆರಳುಗಳನ್ನೋ ಅಥವಾ ನೆಲದ ಮೇಲೆ ಹರಿಯುತ್ತಿರುವ ಇರುವೆಗಳನ್ನೋ ನೋಡತೊಡಗಿದಳು. ಬಹಳ ಹೊತ್ತಿನಿಂದ ತನಗೆ ಬಾಯಾರಿಕೆಯಾಗಿದೆ ಎಂದು ತಕ್ಷಣವೇ ಅವಳಿಗೆ ಗೊತ್ತಾಯಿತು. ಅವಳು ಮತ್ತೇರಿದವಳಂತೆ ಎದ್ದಳು ಮತ್ತು ಕೊಡದಿಂದ ಪಾತ್ರೆ ತುಂಬ ನೀರು ತೆಗೆದು ಗಟಗಟನೆ ಸುರಿದುಕೊಂಡಳು. ಬರಿ ನೀರು ಅವಳ ಕರುಳಿಗೆ ತಾಗಿತು, ಅವಳು 'ಹಾಯ್ ರಾಮ್' ಎನ್ನುತ್ತ ನೆಲದ ಮೇಲೆ ಮಲಗಿಕೊಂಡಳು.

ಸುಮಾರು ಅರ್ಧ ಗಂಟೆ ತನಕ ಅಲ್ಲೇ, ಹಾಗೆಯೇ ಬಿದ್ದುಕೊಂಡಿದ್ದ ನಂತರ ಅವಳಿಗೆ ಜೀವದಲ್ಲಿ ಜೀವ ಬಂತು. ಎದ್ದು ಕುಳಿತುಕೊಂಡಳು. ಕಣ್ಣುಗಳನ್ನು ಉಜ್ಜುತ್ತ ಉಜ್ಜುತ್ತ ಆ ಕಡೆ ಈ ಕಡೆ ನೋಡಿದಳು. ನಂತರ ಅವಳ ದೃಷ್ಟಿ ವರಾಂಡದಲ್ಲಿ ಅರ್ಧ ಮುರಿದಿರುವ ಮಂಚದ ಮೇಲೆ ಮಲಗಿರುವ ತನ್ನ ಆರು ವರ್ಷದ ಮಗ ಪ್ರಮೋದನ ಮೇಲೆ ನೆಟ್ಟಿತು. ಹುಡುಗ ಬೆತ್ತಲಾಗಿ ಮಲಗಿದ್ದ. ಅವನ ಕೊರಳಿನ ಹಾಗೂ ಎದೆಯ ಮೂಳೆಗಳು ಎದ್ದು ಕಾಣುತ್ತಿದ್ದವು. ಅವನ ಕೈಕಾಲುಗಳು ಬಾಡಿದ ಸೌತೆಕಾಯಿಯ ತರಹ ಒಣಗಿದ್ದವು ಮತ್ತು ನಿರ್ಜೀವವಾಗಿದ್ದವು, ಅವನ ಹೊಟ್ಟೆ ಹಂಡೆಯ ತರಹ ಉಬ್ಬಿತ್ತು. ಅವನ ಬಾಯಿ ತೆರೆದಿತ್ತು ಮತ್ತು ಅದರ ಮೇಲೆ ಅಸಂಖ್ಯಾತ ನೊಣಗಳು ಹಾರಾಡುತ್ತಿದ್ದವು.

ಅವಳು ಎದ್ದಳು. ಹುಡುಗನ ಮುಖದ ಮೇಲೆ ತನ್ನ ಒಂದು ಹರಿದ, ಕೊಳಕಾದ ರವಿಕೆ ಹಾಕಿ, ಅರ್ಧ ನಿಮಿಷ ಸುಮ್ಮನೆ ನಿಂತಳು. ನಂತರ ಹೊರಬಾಗಿಲಿಗೆ ಬಂದು ಬಾಗಿಲಿನ ಮರೆಯಿಂದ ಗಲ್ಲಿಯನ್ನು ದಿಟ್ಟಿಸಲಾರಂಭಿಸಿದಳು. ಹನ್ನೆರಡು ಗಂಟೆ ಆಗಿತ್ತು, ಬಿಸಿಲು ಅತ್ಯಂತ ತೀವ್ರವಾಗಿತ್ತು. ಆಗಾಗ ಒಂದೆರಡು ಜನ ತಲೆ ಮೇಲೆ ಟವಲ್ಲು ಹೊದ್ದು ಅಥವಾ ಕೊಡೆಯನ್ನು ಗಟ್ಟಿಯಾಗಿ ಹಿಡಿದು ವೇಗವಾಗಿ ಎದುರಿನಿಂದ ಸಾಗುತ್ತಿದ್ದರು.

ಹತ್ತು-ಹದಿನೈದು ನಿಮಿಷಗಳವರೆಗೆ ಅವಳು ಅದೇ ತರಹ ನಿಂತಿದ್ದಳು. ನಂತರ ಅವಳ ಮುಖದಲ್ಲಿ ವ್ಯಗ್ರತೆ ಹರಡಿಕೊಂಡಿತು. ಅವಳು ಆಕಾಶ ಮತ್ತು ತೀವ್ರವಾದ ಬಿಸಿಲನ್ನು ಚಿಂತಿತಳಾಗಿ ನೋಡಿದಳು. ಒಂದೆರಡು ಕ್ಷಣಗಳ ನಂತರ ಅವಳು ಬಾಗಿಲಿನಿಂದ ಸಾಕಷ್ಟು ಮುಂದೆ ಬಂದು ಗಲ್ಲಿಯ ತುದಿಯ ಕಡೆಗೆ ನೋಡಿದಾಗ, ಅವಳ ದೊಡ್ಡ ಮಗ ರಾಮಚಂದ್ರ ನಿಧಾನವಾಗಿ ಮನೆಯ ಕಡೆ ಓಲಾಡುತ್ತ ಬರುವುದು ಕಂಡುಬಂದಿತು.

ಅವಳು ಉತ್ಸಾಹದಿಂದ ಒಂದು ಪಾತ್ರೆ ನೀರನ್ನು ಹೊರ ಅಂಗಳದಲ್ಲಿ ಕೆಳಗೆ ಇಟ್ಟಳು ಮತ್ತು ಚೌಕಿಯಲ್ಲಿ ಊಟದ ಸ್ಥಳವನ್ನು ಬೇಗ ಬೇಗನೆ ನೀರು ಹಾಕಿ ಉಜ್ಜಲು-ಒರೆಸಲು ಆರಂಭಿಸಿದಳು. ಅಲ್ಲಿ ಸ್ಟೂಲು ಇಟ್ಟು ಅವಳು ತಲೆಯನ್ನು ಬಾಗಿಲಿನತ್ತ ತಿರುಗಿಸುತ್ತಿರುವಾಗಲೇ ರಾಮಚಂದ್ರ ಒಳಗೆ ಕಾಲಿಟ್ಟ.

ರಾಮಚಂದ್ರ ಬಂದವನೇ ದೊಪ್ಪೆಂದು ಕಟ್ಟೆಯ ಮೇಲೆ ಕುಳಿತ. ನಂತರ ಅಲ್ಲೇ ನಿರ್ಜೀವಿಯಂತೆ ಮಲಗಿದ. ಅವನ ಮುಖ ಕೆಂಪಾಗಿತ್ತು, ಅವನ ಕೂದಲು ಅಸ್ತವ್ಯಸ್ತವಾಗಿತ್ತು. ಅವನ ಹರಿದ ಹಳೆಯ ಚಪ್ಪಲಿಗಳಲ್ಲಿ ಕೊಳೆ ಸೇರಿಕೊಂಡಿತ್ತು.

ಮೊದಲು ಆತನ ಹತ್ತಿರ ಹೋಗಲು ಸಿದ್ದೇಶ್ವರಿಗೆ ಧೈರ್ಯ ಬರಲಿಲ್ಲ. ಅವಳು ಅಲ್ಲಿಂದಲೇ ಭಯಭೀತ ಹರಿಣಿಯ ತರಹ ತಲೆಯನ್ನು ಆಚೀಚೆ ಆಡಿಸುತ್ತ ಮಗನನ್ನು ವ್ಯಗ್ರತೆಯಿಂದ ನಿಟ್ಟಿಸಹತ್ತಿದಳು. ಆದರೆ, ಹತ್ತು ನಿಮಿಷ ಕಳೆದರೂ ರಾಮಚಂದ್ರ ಏಳದಿದ್ದಾಗ ಅವಳಿಗೆ ಗಾಬರಿಯಾಯಿತು. ಹತ್ತಿರ ಹೋಗಿ ''ಮಗನೇ, ಮಗನೇ'' ಎಂದು ಕರೆದಳು. ಆದರೆ ಅದಕ್ಕೆ ಯಾವ ಉತ್ತರವೂ ಬರದಿದ್ದಾಗ ಹೆದರಿದಳು ಮತ್ತು ಮಗನ ಮೂಗಿನ ಹತ್ತಿರ ಕೈಯಿಟ್ಟು ನೋಡಿದಳು. ಉಸಿರಾಟ ಸರಿಯಾಗಿ ನಡೆಯುತ್ತಿತ್ತು. ನಂತರ ಹಣೆಯ ಮೇಲೆ ಕೈಯಿಟ್ಟು ನೋಡಿದಳು. ಜ್ವರ ಇರಲಿಲ್ಲ ಅವಳ ಕೈ ಸ್ಪರ್ಶದಿಂದ ರಾಮಚಂದ್ರ ಕಣ್ಣು ತೆರೆದ. ಮೊದಲು ಅವನು ಶೂನ್ಯ ದೃಷ್ಟಿಯಿಂದ ತಾಯಿಯನ್ನು ನೋಡಿದ, ನಂತರ ಥಟ್ಟನೆ ಎದ್ದು ಕುಳಿತ. ಚಪ್ಪಲಿ ಕಳಚಿ ಕೆಳಗಿಟ್ಟು, ಪಾತ್ರೆಯಲ್ಲಿದ್ದ ನೀರಿನಿಂದ ಕೈಕಾಲು ತೊಳೆದ ನಂತರ ಅವನು ಯಂತ್ರದಂತೆ ಚೌಕಿಗೆ ಬಂದು ಕುಳಿತ.

ಸಿದ್ದೇಶ್ವರಿ ಹೆದರುತ್ತ ಹೆದರುತ್ತ ಕೇಳಿದಳು – ''ಊಟ ತಯಾರಿದೆ, ಇಲ್ಲಿಗೇ ತರ್ಲಾ?''

ರಾಮಚಂದ್ರ ಏಳುತ್ತ ಕೇಳಿದ – ''ಅಪ್ಪನ ಊಟ ಆಯ್ತಾ?''

ಸಿದ್ದೇಶ್ವರಿ ಚೌಕಿಯ ಕಡೆ ಓಡುತ್ತ ಉತ್ತರಿಸಿದಳು – ''ಇನ್ನೇನು ಬರಬಹುದು''. ರಾಮಚಂದ್ರ ಸ್ಟೂಲಿನ ಮೇಲೆ ಕುಳಿತ. ಅವನ ವಯಸ್ಸು ಸುಮಾರು ಇಪ್ಪತ್ತೊಂದು ವರ್ಷ. ಎತ್ತರವಾಗಿ, ತೆಳ್ಳಗೆ, ಬೆಳ್ಳಗೆ ಬೆಳೆದಿದ್ದ. ದೊಡ್ಡ ದೊಡ್ಡ ಕಣ್ಣುಗಳು, ಸುಕ್ಕಾದ ತುಟಿಗಳು. ಅವನು ಒಂದು ಸ್ಥಳೀಯ ದೈನಿಕ ಪತ್ರಿಕೆಯೊಂದರ ಕಛೇರಿಯಲ್ಲಿ ನಕಲು ತಿದ್ದುವವನಾಗಿ ಕೆಲಸ ಕಲಿಯುತ್ತಿದ್ದ. ಹಿಂದಿನ ವರ್ಷವೇ ಅವನು ಇಂಟರ್‌ಮೀಡಿಯೇಟ್ ಪಾಸುಮಾಡಿದ್ದ.

ಸಿದ್ದೇಶ್ವರಿ ಊಟದ ತಟ್ಟೆ ತಂದು ಮುಂದಿಟ್ಟಳು ಮತ್ತು ಹತ್ತಿರವೇ ಕುಳಿತು ಗಾಳಿ ಬೀಸಹತ್ತಿದಳು. ರಾಮಚಂದ್ರ ದಾರ್ಶನಿಕನ ರೀತಿಯಲ್ಲಿ ಊಟದ ಕಡೆ ನೋಡಿದ. ಎರಡು ಚಪಾತಿ, ಒಂದು ಬಟ್ಟಲು ನೀರು ನೀರಾದ ಬೇಳೆ ಸಾರು, ಕಡ್ಲೆಯ ಪಲ್ಯ.

ರಾಮಚಂದ್ರ ಚಪಾತಿಯ ಮೊದಲ ತುಂಡನ್ನು ನುಂಗುತ್ತ ಕೇಳಿದ – ''ಮೋಹನ ಎಲ್ಲಿದ್ದಾನೆ ? ಬಹಳ ತೀವ್ರವಾದ ಬಿಸಿಲಿದೆ.''

ಮೋಹನ ಸಿದ್ದೇಶ್ವರಿಯ ಎರಡನೆಯ ಮಗ. ಅವನ

ವಯಸ್ಸು ಹದಿನೆಂಟು ವರ್ಷ. ಅವನು ಈ ವರ್ಷ ಪ್ರೌಢಶಾಲೆಯ ಪ್ರೈವೇಟ್ ಪರೀಕ್ಷೆ ಬರೆಯಲು ತಯಾರಿ ನಡೆಸುತ್ತಿದ್ದ. ಅವನು ಎಷ್ಟು ಹೊತ್ತಿನಿಂದ ಮನೆಯಲ್ಲಿ ಇಲ್ಲ ಎಂದು ಸಿದ್ಧೇಶ್ವರಿಗೆ ಸ್ವತಃ ಗೊತ್ತಿರಲಿಲ್ಲ, ಎಲ್ಲಿಗೆ ಹೋಗಿದ್ದಾನೆಂಬುದೂ ಗೊತ್ತಿರಲಿಲ್ಲ.

ಆದರೆ ಅವಳಿಗೆ ನಿಜ ಹೇಳುವ ಮನಸ್ಸಾಗಲಿಲ್ಲ. ಅವಳು ಸುಳ್ಳು ಪಳ್ಳು ಹೇಳಿದಳು – ''ಯಾವುದೋ ಹುಡುಗನ ಮನೆಗೆ ಓದಲು ಹೋಗಿದ್ದಾನೆ. ಈಗ ಬರಬಹುದು. ಅವನ ಬುದ್ಧಿ ಬಹಳ ಚುರುಕು, ಇಪ್ಪತ್ನಾಲ್ಕು ಗಂಟೆ ಓದಿನಲ್ಲಿಯೇ ಮುಳುಗಿರುತ್ತಾನೆ. ಯಾವಾಗ ನೋಡಿದರೂ ಓದಿನದೇ ಮಾತು''.

ರಾಮಚಂದ್ರ ಏನನ್ನೂ ಹೇಳಲಿಲ್ಲ. ಒಂದು ತುಂಡು ಚಪಾತಿ ಬಾಯಿಯಲ್ಲಿಟ್ಟು, ಒಂದು ಲೋಟ ನೀರು ಕುಡಿದು ಮತ್ತೆ ತಿನ್ನುವುದರಲ್ಲಿ ನಿರತನಾದ. ಅವನು ಚಿಕ್ಕಚಿಕ್ಕ ತುಂಡು ಗಳನ್ನು ಮುರಿದು ಅವುಗಳನ್ನು ನಿಧಾನವಾಗಿ ಜಗಿಯುತ್ತಿದ್ದ.

ಸಿದ್ಧೇಶ್ವರಿ ಭಯ ಮತ್ತು ಆತಂಕದಿಂದ ತನ್ನ ಮಗನನ್ನು ಒಂದೇ ಸಮನೆ ನೋಡುತ್ತಿದ್ದಳು. ಕೆಲವು ಕ್ಷಣಗಳು ಕಳೆದ ನಂತರ ಹೆದರುತ್ತ ಹೆದರುತ್ತ ಅವಳು ಕೇಳಿದಳು – ''ಅಲ್ಲೇನಾದರೂ ನಡೆಯಿತಾ ?''

ರಾಮಚಂದ್ರ ತನ್ನ ದೊಡ್ಡ ದೊಡ್ಡ ಭಾವಹೀನ ಕಣ್ಣುಗಳಿಂದ ತಾಯಿಯನ್ನು ನೋಡಿದ. ನಂತರ ತಲೆ ಕೆಳಗೆ ಮಾಡಿ, ನೀರಸವಾಗಿ ಹೇಳಿದ – ''ಸಮಯ ಬಂದಾಗ ಎಲ್ಲವೂ ಸರಿಹೋಗುತ್ತದೆ.''

ಸಿದ್ಧೇಶ್ವರಿ ಸುಮ್ಮನಿದ್ದಳು. ಬಿಸಿಲು ಇನ್ನೂ ತೀವ್ರ ವಾಗುತ್ತಿತ್ತು. ಪುಟ್ಟ ಅಂಗಳದ ಮೇಲೆ ಆಕಾಶದ ಒಂದೆರಡು ಮೋಡದ ತುಂಡುಗಳು ಹಾಯಿಹಾಕಿದ ನಾವೆಗಳಂತೆ ತೇಲುತ್ತಿದ್ದವು. ಹೊರಗೆ ಗಲ್ಲಿಯಲ್ಲಿ ಹೋಗುತ್ತಿದ್ದ ಗಾಡಿಯ ಖಡ ಖಡ ಸದ್ದು ಕೇಳಿಬರುತ್ತಿತ್ತು ಮತ್ತು ಮಂಚದ ಮೇಲೆ ಮಲಗಿದ್ದ ಬಾಲಕನ ಉಸಿರಾಟದ ಖರ ಖರ ಸದ್ದು ಕೇಳಿಬರುತ್ತಿತ್ತು.

ರಾಮಚಂದ್ರ ಇದ್ದಕ್ಕಿದ್ದಂತೆ ಮೌನವನ್ನು ಮುರಿದು ಕೇಳಿದ – ''ಪ್ರಮೋದನ ಊಟ ಆಯಿತಾ ?''

ಸಿದ್ಧೇಶ್ವರಿ ಪ್ರಮೋದನ ಕಡೆ ನೋಡುತ್ತ ಉದಾಸೀನದ ಸ್ವರದಲ್ಲಿ ಉತ್ತರಿಸಿದಳು – ''ಹೂಂ, ಊಟ ಮಾಡಿದ.''

''ಅತ್ತಾ ಇರಲಿಲ್ವಲ್ಲ ?''

ಸಿದ್ಧೇಶ್ವರಿ ಮತ್ತೆ ಸುಳ್ಳು ಹೇಳಿದಳು – ''ಇವತ್ತಂತೂ ನಿಜವಾಗ್ಲೂ ಅಳಲಿಲ್ಲ. ಅವನು ಬಹಳ ಬುದ್ಧಿವಂತ ಆಗಿದಾನೆ. ದೊಡ್ಡಣ್ಣನ ಹತ್ತಿರ ಹೋಗ್ತೀನಿ ಅಂತ ಹೇಳ್ತಾ ಇದ್ದ. ಎಂಥ ಹುಡುಗ...''

ಅವಳಿಗೆ ಮುಂದೆ ಏನೂ ಹೇಳಲಾಗಲಿಲ್ಲ. ಗಂಟಲಲ್ಲಿ ಏನೋ ಸಿಕ್ಕಿಕೊಂಡಂತಾಗಿತ್ತು. ನಿನ್ನೆ ಪ್ರಮೋದ ಸಿಹಿ ತಿನ್ನಲು ಹಠ ಮಾಡಿ ಒಂದೂವರೆ ಗಂಟೆ ಅತ್ತು ಆಮೇಲೆ ಮಲಗಿದ್ದ.

ರಾಮಚಂದ್ರ ಸ್ವಲ್ಪ ಆಶ್ಚರ್ಯದಿಂದ ತನ್ನ ತಾಯಿಯ ಕಡೆ ನೋಡಿದ. ಮತ್ತೆ ತಲೆ ತಗ್ಗಿಸಿ ವೇಗವಾಗಿ ತಿನ್ನತೊಡಗಿದ.

ತಟ್ಟೆಯಲ್ಲಿ ಚಪಾತಿಯ ಒಂದೇ ತುಂಡು ಉಳಿದಾಗ, ಸಿದ್ಧೇಶ್ವರಿ ಏಳುವ ಪ್ರಯತ್ನ ಮಾಡುತ್ತ ಕೇಳಿದಳು – ''ಇನ್ನೊಂದು ಚಪಾತಿ ತರ್ಲಾ ?''

ರಾಮಚಂದ್ರ ಕೈಯಿಂದಲೇ ಬೇಡವೆನ್ನುತ್ತ ಗಡಿಬಿಡಿಯಲ್ಲಿ ಹೇಳಿದ – ''ಬೇಡ, ಬೇಡ, ಸ್ವಲ್ಪವೂ ಬೇಡ. ನನ್ನ ಹೊಟ್ಟೆ ಮೊದಲೇ ತುಂಬಿದೆ. ನಾನು ಇದನ್ನೂ ಬಿಡುವವನಿದ್ದೇನೆ. ಸಾಕು, ಇನ್ನು ಬೇಡ.''

ಸಿದ್ಧೇಶ್ವರಿ ಒತ್ತಾಯ ಮಾಡಿದಳು – ''ಸರಿ, ಅರ್ಧ ಹಾಕ್ತೀನಿ.'' ರಾಮಚಂದ್ರನಿಗೆ ಸಿಟ್ಟು ಬಂತು – ''ಹೆಚ್ಚು ತಿನ್ನಿಸಿ ಆರೋಗ್ಯ ಕೆಡಿಸುವ ಯೋಚನೆ ಇದೆಯಾ ? ನಿಮಗೆ ಯೋಚನೆ ಮಾಡ್ಲಿಕ್ಕೇ ಬರೋದಿಲ್ಲ. ಬರಿ ನಿಮ್ಮದೇ ಹಠ. ಹಸಿವಿದ್ದರೆ ಇನ್ನೊಂದು ಚಪಾತಿ ತಗೋತಿರಲಿಲ್ಲವಾ ?''

ಸಿದ್ಧೇಶ್ವರಿ ಎಲ್ಲಿದ್ದಳೋ ಅಲ್ಲಿಯೇ ಕೂತಿದ್ದಳು. ರಾಮಚಂದ್ರ ತಟ್ಟೆಯಲ್ಲಿ ಉಳಿದ ಒಂದು ತುಂಡಿನಿಂದ ಕೈ ಹಿಂದಕ್ಕೆ ಸರಿಸಿದ. ಮತ್ತೆ ತಂಬಿಗೆಯ ಕಡೆ ನೋಡುತ್ತ ಹೇಳಿದ, ''ಅಮ್ಮಾ, ನೀರು ತಾ.'' ಸಿದ್ಧೇಶ್ವರಿ ತಂಬಿಗೆ ತೆಗೆದುಕೊಂಡು ನೀರು ತರಲು ಹೋದಳು. ರಾಮಚಂದ್ರ ಬಟ್ಟಲನ್ನು ಬೆರಳುಗಳಿಂದ ನುಡಿಸಿದ. ನಂತರ ಕೈಯನ್ನು ತಟ್ಟೆಯಲ್ಲಿಟ್ಟ. ಒಂದೆರಡು ಕ್ಷಣದ ನಂತರ ಚಪಾತಿಯ ತುಂಡನ್ನು ಕೈಯ್ಯಲ್ಲಿ ಎತ್ತಿ, ಕಣ್ಣಿಂದ ದಿಟ್ಟಿಸಿದ. ಕೊನೆಯಲ್ಲಿ ಆಕಡೆ ಈಕಡೆ ನೋಡಿದ ನಂತರ ತುಂಡನ್ನು, ಅದೊಂದು ಪಾನ್‌ಬೀಡಾವೋ ಅನ್ನುವ ರೀತಿಯಲ್ಲಿ ಬಾಯಲ್ಲಿಟ್ಟ.

ಎರಡನೆಯ ಮಗ ಮೋಹನ ಬಂದವನೇ ಕೈ-ಕಾಲು ತೊಳೆದು ಸ್ಟೂಲಿನ ಮೇಲೆ ಕುಳಿತ. ಅವನು ಸ್ವಲ್ಪ ಕಪ್ಪು ಬಣ್ಣದವನು ಮತ್ತು ಅವನ ಕಣ್ಣುಗಳು ಸಣ್ಣಗಿದ್ದವು. ಅವನ ಮುಖದಲ್ಲಿ ಸಿಡುಬಿನ ಕಲೆಗಳಿದ್ದವು. ಅವನು ಅಣ್ಣನಂತೆಯೇ ತೆಳ್ಳಗಿದ್ದ, ಆದರೆ ಅವನಷ್ಟು ಎತ್ತರ ಇರಲಿಲ್ಲ. ವಯಸ್ಸಿಗೆ ಮೀರಿದ ಗಾಂಭೀರ್ಯ ಮತ್ತು ವಿಷಾದ ಅವನಲ್ಲಿ ಕಾಣುತ್ತಿತ್ತು.

ಸಿದ್ಧೇಶ್ವರಿ ಅವನ ಎದುರಿಗೆ ತಟ್ಟೆ ಇಡುತ್ತ ಪ್ರಶ್ನಿಸಿದಳು – ''ಎಲ್ಲಿಗೆ ಹೋಗಿದ್ದೆ ಮಗಾ ? ಅಣ್ಣ ಕೇಳುತ್ತಿದ್ದ.''

ಮೋಹನ ಚಪಾತಿಯ ಒಂದು ದೊಡ್ಡ ತುತ್ತನ್ನು ನುಂಗುವ ಪ್ರಯತ್ನ ಮಾಡುತ್ತ, ಅಸ್ವಾಭಾವಿಕವಾದ ದಪ್ಪ ಸ್ವರದಲ್ಲಿ ಉತ್ತರಿಸಿದ – ''ಎಲ್ಲಿಗೂ ಹೋಗಿರಲಿಲ್ಲ, ಇಲ್ಲೇ ಇದ್ದೆ.''

ಸಿದ್ಧೇಶ್ವರಿ ಅಲ್ಲೇ ಕುಳಿತು ಬೀಸಣಿಗೆ ಬೀಸುತ್ತ, ಸ್ವಪ್ನದಲ್ಲಿ ಬಡಬಡಿಸುತ್ತಿರುವವಳೇನೋ ಎಂಬಂತೆ ಹೇಳಿದಳು – ''ದೊಡ್ಡವನು ನಿನ್ನನ್ನು ಭಾರೀ ಹೊಗಳುತ್ತಿದ್ದ. ಹೇಳುತ್ತಿದ್ದ – ಮೋಹನ ಭಾರೀ ಬುದ್ಧಿವಂತ ಆಗುತ್ತಾನೆ. ಅವನು ಇಪ್ಪತ್ನಾಲ್ಕು ಗಂಟೆಯೂ ಓದಿನಲ್ಲೇ ಮುಳುಗಿ ರುತ್ತಾನೆ.'' ಇಷ್ಟು ಹೇಳಿ ಅವಳು ಎರಡನೇ ಮಗನನ್ನು, ತಾನು ಯಾವುದೋ ಕಳ್ಳತನ ಮಾಡಿರುವವಳೇನೋ ಎಂಬಂತೆ ನೋಡಿದಳು.

ಮೋಹನ ತನ್ನ ತಾಯಿಯ ಕಡೆ ನೋಡಿ ಒಂದು ಟೊಳ್ಳು ನಗೆ ನಕ್ಕು ಮತ್ತೆ ತಿನ್ನಲು ತೊಡಗಿದ. ಅವಳು ಬಡಿಸಿದ ಎರಡು ಚಪಾತಿಗಳಲ್ಲಿ ಒಂದು ಚಪಾತಿ, ಬಟ್ಟಲಲ್ಲಿದ್ದ ನಾಲ್ಕನೇ ಮೂರಂಶ ಬೇಳೆಸಾರು ಮತ್ತು ಹೆಚ್ಚಿನ ಪಲ್ಯವನ್ನು ಅವನು ತಿಂದು ಮುಗಿಸಿದ್ದ.

ಸಿದ್ಧೇಶ್ವರಿಗೆ ತಾನು ಏನು ಮಾಡಬೇಕೆಂದು ತಿಳಿಯಲಿಲ್ಲ. ಈ ಎರಡೂ ಹುಡುಗರನ್ನು ಕಂಡರೆ ಅವಳಿಗೆ ಬಹಳ ಭಯವಾಗುತ್ತಿತ್ತು. ಇದ್ದಕ್ಕಿದ್ದಂತೆ ಅವಳ ಕಣ್ಣುಗಳು ತುಂಬಿಬಂದವು. ಅವಳು ಬೇರೆಡೆ ನೋಡಲಾರಂಭಿಸಿದಳು.

ಸ್ವಲ್ಪ ಹೊತ್ತಿನ ನಂತರ ಅವಳು ಮೋಹನನ ಕಡೆ ಮುಖ ತಿರುಗಿಸಿದಾಗ, ಹುಡುಗ ಸುಮಾರಾಗಿ ಊಟ ಮುಗಿಸಿದ್ದ.

ಸಿದ್ಧೇಶ್ವರಿ ಗಲಿಬಿಲಿಗೊಳ್ಳುತ್ತ ಕೇಳಿದಳು – ''ಒಂದು ಚಪಾತಿ ಕೊಡ್ಲಾ ?'' ಮೋಹನ ಅಡುಗೆ ಮನೆಯ ಕಡೆ ರಹಸ್ಯಮಯ ದೃಷ್ಟಿಯಲ್ಲಿ ನೋಡಿದ. ಆನಂತರ ಸಣ್ಣ ದನಿಯಲ್ಲಿ ಹೇಳಿದ – ''ಬೇಡ''.

ಸಿದ್ಧೇಶ್ವರಿ ಒತ್ತಾಯ ಮಾಡುತ್ತ ಹೇಳಿದಳು – ''ನೋಡು ಮಗಾ, ನನ್ನಾಣೆ, ಸ್ವಲ್ಪ ತಗೋ. ನಿನ್ನಣ್ಣ ಒಂದು ಚಪಾತಿ ತಗೊಂಡಿದ್ದ.''

ಮೋಹನ ತನ್ನ ತಾಯಿಯನ್ನು ಗಮನಿಸಿ ನೋಡಿದ. ಮತ್ತೆ ನಿಧಾನವಾಗಿ, ಒಬ್ಬ ಶಿಕ್ಷಕ ತನ್ನ ಶಿಷ್ಯನಿಗೆ ಅರ್ಥ ಮಾಡಿಸುವ ರೀತಿಯಲ್ಲಿ ಉತ್ತರಿಸಿದ – ''ಬೇಡ, ಸಾಕು. ಮೊದಲನೆಯದಾಗಿ, ಈಗ ಹಸಿವೆ ಇಲ್ಲ, ಮತ್ತೆ ನೀನು ಚಪಾತಿ ಹೇಗೆ ಮಾಡಿದ್ದೀಯಾಂದ್ರೆ ಅದನ್ನ ತಿನ್ನಲಿಕ್ಕೆ ಆಗೋದಿಲ್ಲ, ಹೇಗಿದಾವೆ ಅಂತ ಹೇಳೋಕಾಗಲ್ಲ. ಸರಿ, ನೀನು ಒತ್ತಾಯ ಮಾಡ್ತೀಯಾಂದ್ರೆ ಬಟ್ಟಲಲ್ಲಿ ಸ್ವಲ್ಪ ಬೇಳೆಸಾರು ಕೊಡು. ಬೇಳೆಸಾರು ತುಂಬಾ ಚೆನ್ನಾಗಿದೆ.''

ಸಿದ್ಧೇಶ್ವರಿಗೆ ಏನನ್ನೂ ಹೇಳಲಾಗಲಿಲ್ಲ, ಅವಳು ಬಟ್ಟಲನ್ನು ಬೇಳೆ ಸಾರಿನಿಂದ ತುಂಬಿದಳು.

ಮೋಹನ ಬಟ್ಟಲಿಗೆ ಬಾಯಿ ಹಚ್ಚಿ ಸುರು ಸುರು ಕುಡಿಯುತ್ತಿದ್ದಂತೆಯೇ ಮುನ್ಶಿ ಚಂದ್ರಿಕಾ ಪ್ರಸಾದ್ ತಮ್ಮ ಚಪ್ಪಲಿಗಳನ್ನು ಖಸ ಖಸ ಎಳೆಯುತ್ತ ಬಂದರು ಮತ್ತು ರಾಮನಾಮ ಹೇಳುತ್ತ ಕಟ್ಟೆಯಲ್ಲಿ ಕುಳಿತರು. ಸಿದ್ಧೇಶ್ವರಿ ತಲೆಯ ಮೇಲಿದ್ದ ಸೀರೆಯ ಸೆರಗನ್ನು ಕೊಂಚ ಕೆಳಕ್ಕೆ ಎಳೆದುಕೊಂಡಳು. ಮೋಹನ ಬೇಳೆ ಸಾರನ್ನು ಒಂದೇ ಉಸಿರಿನಲ್ಲಿ ಕುಡಿದು, ನೀರಿನ ತಂಬಿಗೆಯನ್ನು ಕೈಯಲ್ಲಿ ಹಿಡಿದು ವೇಗವಾಗಿ ಹೊರಗೆ ಹೋದ.

ಎರಡು ಚಪಾತಿ, ಬಟ್ಟಲಿನ ತುಂಬ ಬೇಳೆಸಾರು ಮತ್ತು ಕಡಲೆಯ ಪಲ್ಯ. ಮುನ್ಶಿ ಚಂದ್ರಿಕಾ ಪ್ರಸಾದ್ ಸ್ಟೂಲಿನ ಮೇಲೆ ಚಕ್ಕಳಮಕ್ಕಳ ಕುಳಿತು ಚಪಾತಿಯ ಒಂದೊಂದು ತುತ್ತನ್ನೂ, ಮುದಿ ದನ ಮೆಲುಕುಹಾಕುವ ಹಾಗೆ ಜಗಿಯುತ್ತಿದ್ದರು. ಅವರ ವಯಸ್ಸು ನಲವತ್ತೈದು ಆಗಿತ್ತು. ಆದರೆ ಐವತ್ತು – ಐವತ್ತೈದರ ವಯಸ್ಸಿನವರಂತೆ ಕಾಣುತ್ತಿದ್ದರು. ಶರೀರದ ಚರ್ಮ ಜೋಲಾಡತೊಡಗಿತ್ತು. ಬೋಳಾದ ತಲೆ ಕನ್ನಡಿಯಂತೆ ಹೊಳೆಯುತ್ತಿತ್ತು. ಕೊಳಕಾದ ಪಂಚೆಯ ಮೇಲೆ ಸ್ವಲ್ಪ ಸ್ವಚ್ಛವಾಗಿದ್ದ ಅಂಗಿ ಜೋತಾಡುತ್ತಿತ್ತು.

ಮುನ್ಶಿಜಿ ಬಟ್ಟಲನ್ನು ಕೈಗೆತ್ತಿಕೊಂಡು ಬೇಳೆಸಾರನ್ನು ಹೀರುತ್ತ ಕೇಳಿದರು–''ದೊಡ್ಡವನು ಎಲ್ಲೂ ಕಾಣುತ್ತಿಲ್ಲ?''

ಅವನ ಮನಸ್ಸಿನಲ್ಲಿ ಏನಾಗಿದೆ ಎಂಬುದು ಸಿದ್ಧೇಶ್ವರಿಗೆ ಅರ್ಥವಾಗುತ್ತಿರಲಿಲ್ಲ. ಏನೋ ಕಾಡುತ್ತಿರಬೇಕು. ಬೀಸಣಿಗೆಯನ್ನು ಸ್ವಲ್ಪ ಜೋರಾಗಿ ಬೀಸುತ್ತ ಹೇಳಿದಳು – ''ಈಗ ತಾನೇ ಊಟಮಾಡಿ ಕೆಲಸಕ್ಕೆ ಹೋಗಿದಾನೆ. ಕೆಲವು ದಿನಗಳಲ್ಲೇ ನೌಕರಿ ಸಿಗುವುದಾಗಿ ಹೇಳುತ್ತಿದ್ದ. ಯಾವಾಗಲೂ ಬಾಬೂಜೀ – ಬಾಬೂಜೀ ಎನ್ನುತ್ತಿರುತ್ತಾನೆ. ಬಾಬೂಜೀ ದೇವರ ಸಮಾನರು ಎಂದ.''

ಮುನ್ಶಿಜಿಯವರ ಮುಖದಲ್ಲಿ ಕೊಂಚ ಹೊಳಪು ಕಂಡಿತು. ನಾಚುತ್ತ ಕೇಳಿದರು – ''ಏನು ಹೇಳ್ತಾ ಇದ್ದ? ಬಾಬೂಜಿ ದೇವರ ಸಮಾನ ಅಂತಾನಾ? ದೊಡ್ಡ ಹುಚ್ಚ ಅವನು.''

ಸಿದ್ಧೇಶ್ವರಿಗೆ ನಶೆ ಏರಿದಂತಾಗಿತ್ತು. ಉನ್ಮಾದಿನಿಯಂತೆ ಬಡಬಡಿಸತೊಡಗಿದಳು – ''ಹುಚ್ಚ ಅಲ್ಲ, ಬಹಳ ಬುದ್ಧಿವಂತ ಆ ಕಾಲದ ಯಾವನೋ ಮಹಾತ್ಮನಿರಬೇಕು. ಮೋಹನನಂತೂ ಅವನಿಗೆ ಬಹಳ ಗೌರವ ಕೊಡುತ್ತಾನೆ. ಇವತ್ತು ಹೇಳ್ತಾ ಇದ್ದ – ಅಣ್ಣನಿಗೆ ಊರಿನಲ್ಲಿ ಬಹಳ ಗೌರವ ಕೊಡುತ್ತಾರೆ, ಓದಿ-ಬರೆದವರ ನಡುವೆ ಬಹಳ ಆದರವಿದೆ ಅಂತ. ಮತ್ತು ದೊಡ್ಡವನಂತೂ ತನ್ನ ತಮ್ಮಂದಿರಿಗಾಗಿ ಪ್ರಾಣವನ್ನೇ ಕೊಡುತ್ತಾನೆ. ಲೋಕದಲ್ಲಿ ಅವನು ಎಲ್ಲವನ್ನೂ ಸಹಿಸಬಲ್ಲ, ಆದರೆ ಪ್ರಮೋದನಿಗೇನಾದರೂ ಆದರೆ ನೋಡಲಾರ.''

ಮುನ್ಶಿಜಿ ಬೇಳೆಸಾರು ತಾಗಿದ ಕೈಯನ್ನು ನೆಕ್ಕುತ್ತಿದ್ದರು. ಅವರು ಎದುರಿನ ಚಿಕ್ಕ ಕೋಣೆಯನ್ನು ನೋಡುತ್ತ ಸ್ವಲ್ಪ ನಕ್ಕು ಹೇಳಿದರು – ''ದೊಡ್ಡವನ ಮೆದುಳು ಚುರುಕಾಗಿದೆ. ಚಿಕ್ಕವನಾಗಿದ್ದಾಗ ತುಂಬ ತುಂಟನೂ ಆಗಿದ್ದ. ಯಾವಾಗಲೂ ಆಟದಲ್ಲೇ ತೊಡಗಿರುತ್ತಿದ್ದ. ಆದರೆ ನಾನು ಯಾವ ಪಾಠಗಳನ್ನು ಅವನಿಗೆ ಕಲಿಯಲು ಕೊಡುತ್ತಿದ್ದೆನೋ ಅವುಗಳನ್ನು ಮುಗಿಸುತ್ತಿದ್ದ. ನಿಜ ಹೇಳಬೇಕೆಂದರೆ, ಮೂರೂ ಹುಡುಗರು ಬುದ್ಧಿವಂತರಿದ್ದಾರೆ. ಪ್ರಮೋದ್ ಏನು ಕಡಿಮೆಯವನು ಅಂತ ತಿಳಿದುಕೊಂಡಿದೀಯಾ?'' – ಇಷ್ಟು ಹೇಳಿ ಜೋರಾಗಿ ನಗತೊಡಗಿದರು.

ಮುನ್ಶಿಜಿ ಒಂದೂವರೆ ಚಪಾತಿ ತಿಂದು ನಂತರ ಒಂದು ತುತ್ತಿನೊಂದಿಗೆ ಯುದ್ಧ ಮಾಡುತ್ತಿದ್ದರು. ಸ್ವಲ್ಪ ಕಠಿಣವೆನ್ನಿಸಿ ಒಂದು ಲೋಟ ನೀರು ಕುಡಿದರು. ನಂತರ ಕೆಮ್ಮುತ್ತ ತಿನ್ನಲಾರಂಭಿಸಿದರು.

ನಂತರ ಮೌನ ಆವರಿಸಿತು. ದೂರದಿಂದ ಯಾವುದೋ ಹಿಟ್ಟಿನ ಗಿರಣಿಯ ಸದ್ದು ಕೇಳಿಸುತ್ತಿತ್ತು. ಹತ್ತಿರದಲ್ಲಿದ್ದ ಬೇವಿನ ಮರದ ಮೇಲೆ ಕುಳಿತಿದ್ದ ಪಾರಿವಾಳ ಕೂಗುತ್ತಿತ್ತು.

ಸಿದ್ಧೇಶ್ವರಿಗೆ ಏನು ಮಾಡಲಿ ಎಂದು ತಿಳಿಯಲಿಲ್ಲ. ಎಲ್ಲವನ್ನೂ ಸರಿಯಾಗಿ ಕೇಳಿ ತಿಳಿಯಬೇಕೆಂದು ಬಯಸುತ್ತಿದ್ದಳು. ಎಲ್ಲವನ್ನೂ ಸರಿಯಾಗಿ ತಿಳಿದುಕೊಂಡು, ಪ್ರಪಂಚದ ಎಲ್ಲದರ ಮೇಲೆ ಮೊದಲಿನಂತೆ ಧೈರ್ಯವಾಗಿ ಮಾತಾಡಬೇಕು. ಆದರೆ ಅವಳಿಗೆ ಧೈರ್ಯ ಬರುತ್ತಿರಲಿಲ್ಲ. ಅವಳ ಹೃದಯದಲ್ಲಿ ಯಾವುದೋ ಭಯ ಗೂಡು ಕಟ್ಟಿತ್ತು.

ಮುನ್ಶಿಜಿ ಕಳೆದ ಎರಡು ದಿನಗಳಿಂದ ಮೌನವ್ರತ ಧರಿಸಿ, ಇವತ್ತು ಸಂಜೆ ಎಲ್ಲಿಗೋ ಹೋಗಿ ಅದನ್ನು ಮುರಿಯುತ್ತಾರೇನೋ ಅನ್ನುವಂತೆ ಮೌನವಾಗಿ ಊಟ ಮಾಡುತ್ತಿದ್ದರು.

ಸಿದ್ಧೇಶ್ವರಿಗೆ ಹಾಗೇ ಇರಲು ಸಾಧ್ಯವಾಗಲಿಲ್ಲ. ಹೇಳಿದಳು – ''ಅನ್ನಿಸತ್ತೆ, ಈಗ ಮಳೆ ಬರೋದಿಲ್ಲ''

ಮುನ್ಶಿಜಿ ಒಂದು ಕ್ಷಣ ಆ ಕಡೆ ಈ ಕಡೆ ನೋಡಿ, ನಂತರ ನಿರ್ವಿಕಾರ ಸ್ವರದಲ್ಲಿ ಅಭಿಪ್ರಾಯ ಕೊಟ್ಟರು – ''ನೊಣಗಳು ಬಹಳ ಆಗಿದಾವೆ.''

ಸಿದ್ಧೇಶ್ವರಿ ಉತ್ಸುಕತೆ ಪ್ರಕಟಿಸಿದಳು – ''ಚಿಕ್ಕಪ್ಪ ಖಾಯಿಲೆ ಮಲಗಿದ್ದಾರೆ. ಏನಾದರೂ ಸುದ್ದಿ ಬಂತೇ?''

ಮುನ್ಶಿಜಿ ಕಡಲೆ ಕಾಳುಗಳನ್ನು, ಅವುಗಳೊಂದಿಗೆ ಮಾತುಕತೆ ಆಡುವವರಿದ್ದಾರೋ ಎನ್ನುವಂತೆ ತದೇಕಚಿತ್ತರಾಗಿ ನೋಡಿದರು. ನಂತರ ಹೇಳಿದರು – ''ಗಂಗಾಶರಣ ಬಾಬೂವಿನ ಮಗಳ ಮದುವೆ ನಿಶ್ಚಯವಾಗಿದೆ. ಹುಡುಗ ಎಂ.ಎ. ಪಾಸು ಮಾಡಿದ್ದಾನೆ.''

ಸಿದ್ಧೇಶ್ವರಿ ಹಠಾತ್ತಾಗಿ ಸುಮ್ಮನಾದಳು. ಮುನ್ಶಿಜಿಯೂ ಮುಂದೇನೂ ಮಾತನಾಡಲಿಲ್ಲ. ಅವರ ಊಟ ಮುಗಿದಿತ್ತು. ಅವರು ಉಳಿದುಳಿದ ಕಾಳುಗಳನ್ನು ಮಂಗನಂತೆ ಹೆಕ್ಕುತ್ತಿದ್ದರು.

ಸಿದ್ಧೇಶ್ವರಿ ಕೇಳಿದಳು – ''ದೊಡ್ಡವನ ಮೇಲಾಣೆ, ಒಂದು ಚಪಾತಿ ಕೊಡ್ತೀನಿ. ಬಹಳ ಇದಾವೆ.'' ಮುನ್ಶಿಜಿ ಹೆಂಡತಿಯ ಕಡೆ ಅಪರಾಧಿಯಂತೆ ಮತ್ತು ಅಡುಗೆ ಮನೆಯ ಕಡೆ ಕಳ್ಳನಂತೆ ನೋಡುತ್ತ, ನಂತರ ಪಳಗಿದವನಂತೆ ಹೇಳಿದರು – ''ಚಪಾತಿ... ಇರ್ಲಿ ಬಿಡು, ಹೊಟ್ಟೆ ಸಾಕಷ್ಟು ತುಂಬಿದೆ. ಚಪಾತಿ ಮತ್ತು ಖಾರದ ಪಲ್ಯ ತಿಂದು ಬೇಜಾರಾಗಿದೆ. ನೀನು ಸುಮ್ಮನೆ ಆಣೆ ಇಟ್ಟೆ. ಇರ್ಲಿ.. ಆಣೆ ಉಳಿಸ್ಲಿಕ್ಕೆ ತಗೋತಾ ಇದೀನಿ. ಬೆಲ್ಲ ಇದೆಯಾ?''

''ಹಂಡೆಯಲ್ಲಿ ಸ್ವಲ್ಪ ಇದೆ'' ಎಂದಳು ಸಿದ್ಧೇಶ್ವರಿ.

ಮುನ್ಶಿಜಿ ಉತ್ಸಾಹದಿಂದ ಹೇಳಿದರು – ''ಹಾಗಾದರೆ, ಸ್ವಲ್ಪ ಬೆಲ್ಲದ ಪಾನಕ ಮಾಡು, ಕುಡೀತೀನಿ. ನಾಲಿಗೆ ರುಚೀನೂ ಬದಲಾಗತ್ತೆ, ಜೊತೆಗೆ ಜೀರ್ಣಕ್ಕೂ ಒಳ್ಳೆಯದು. ಹಾಂ, ಚಪಾತಿ ತಿಂದು ತಿಂದು ಉಸಿರುಗಟ್ಟಿಬಿಟ್ಟಿದೆ.'' – ಹೀಗೆ ಹೇಳಿ ಕೇಕೆ ಹಾಕಿ ನಕ್ಕರು.

ಮುನ್ಶಿಜಿಯವರದೆಲ್ಲ ಮುಗಿಸಿದ ಮೇಲೆ ಸಿದ್ಧೇಶ್ವರಿ ಅವರ ಎಂಜಲು ತಟ್ಟೆ ತೆಗೆದುಕೊಂಡು ನೆಲದ ಮೇಲೆ ಕುಳಿತಳು. ಪಾತ್ರೆಯಲ್ಲಿದ್ದ ಬೇಳೆ ಸಾರನ್ನು ಬಟ್ಟಲಿಗೆ ಬಗ್ಗಿಸಿದಳು, ಆದರೆ ಬಟ್ಟಲು ಪೂರಾ ತುಂಬಲಿಲ್ಲ. ಕಾವಲಿಯಲ್ಲಿ ಸ್ವಲ್ಪ ಕಡಲೆಯ ಪಲ್ಯ ಉಳಿದಿತ್ತು, ಅದನ್ನು ಹತ್ತಿರಕ್ಕೆ ಎಳೆದುಕೊಂಡಳು. ಚಪಾತಿಯ ತಟ್ಟೆಯನ್ನೂ ಅವಳು ಹತ್ತಿರಕ್ಕೆಳೆದುಕೊಂಡಳು, ಆದರೆ ಅದರಲ್ಲಿ ಒಂದೇ ಚಪಾತಿ ಉಳಿದಿತ್ತು. ದಪ್ಪಗಿನ, ಒರಟಾದ, ಸುಟ್ಟುಹೋದ ಆ ಚಪಾತಿಯನ್ನು ಅವಳು ಎಂಜಲು ತಟ್ಟೆಯಲ್ಲಿ ಹಾಕಲು ಹೋಗುತ್ತಿದ್ದಳು, ಇದ್ದಕ್ಕಿದ್ದಂತೆ ಅವಳ ಗಮನ ಅಂಗಳದಲ್ಲಿ ಮಲಗಿದ್ದ ಪ್ರಮೋದನ ಕಡೆ ಹೋಯಿತು. ಅವಳು ಹುಡುಗನನ್ನು ಕೊಂಚ ಹೊತ್ತಿನ ತನಕ ಒಂದೇ ಸವನೆ ನೋಡಿದಳು. ನಂತರ ಚಪಾತಿಯನ್ನು ಸರಿಯಾಗಿ ಎರಡು ತುಂಡು ಮಾಡಿದಳು. ಒಂದು ತುಂಡನ್ನು ಪ್ರತ್ಯೇಕವಾಗಿ ಇಟ್ಟಳು. ಇನ್ನೊಂದು ತುಂಡನ್ನು ತನ್ನ ಎಂಜಲು ತಟ್ಟೆಯಲ್ಲಿಟ್ಟುಕೊಂಡಳು. ಆನಂತರ, ಒಂದು ತಂಬಿಗೆ ನೀರು ತೆಗೆದುಕೊಂಡು ಊಟ ಮಾಡಲು ಕುಳಿತಳು. ಅವಳು ಮೊದಲು ತುತ್ತನ್ನು ಬಾಯಲ್ಲಿಡುತ್ತಿದ್ದಂತೆಯೇ ಅವಳ ಕಣ್ಣುಗಳಿಂದ ಗೊತ್ತಿಲ್ಲದಂತೆಯೇ ಕಣ್ಣೀರು ಟಪಟಪ ಉದುರಲಾರಂಭಿಸಿತು.

ಇಡೀ ಮನೆ ನೊಣಗಳಿಂದ ತುಂಬಿತ್ತು. ಅಂಗಳದ ಸರಿಗೆಯಲ್ಲಿ ಒಂದು ಕೊಳಕಾದ ಸೀರೆ ನೇತುಹಾಕಿತ್ತು, ಅದರಲ್ಲಿ ಹಲವು ತೇಪೆ ಹಾಕಲಾಗಿತ್ತು. ದೊಡ್ಡ ಹುಡುಗರಿಬ್ಬರೂ ಎಲ್ಲಿದ್ದಾರೋ ಗೊತ್ತಿಲ್ಲ. ಹೊರಗಿನ ಕೋಣೆಯಲ್ಲಿ ಮುನ್ಶಿಜಿ ಮುಖ ಕೆಳಗೆ ಮಾಡಿ, ಒಂದೂವರೆ ತಿಂಗಳ ಕೆಳಗೆ ಮನೆ-ಬಾಡಿಗೆ-ನಿಯಂತ್ರಣ ವಿಭಾಗದ ಗುಮಾಸ್ತಗಿರಿಯಿಂದ ವಜಾ ಆಗಿಲ್ಲವೇನೋ, ಸಾಯಂಕಾಲ ಕೆಲಸದ ಬೇಟೆಯಲ್ಲಿ ಎಲ್ಲಿಗೂ ಹೋಗುವುದು ಇಲ್ಲವೇನೋ ಅನ್ನುವ ರೀತಿಯಲ್ಲಿ ನಿಶ್ಚಿಂತೆಯಿಂದ ಮಲಗಿದ್ದರು.

*(ಕೃಪೆ : ಕೇಂದ್ರ ಸಾಹಿತ್ಯ ಅಕಾಡೆಮಿ, ನವದೆಹಲಿ)*



ಹಿಂದಿ ಮೂಲ : **ಅಮರಕಾಂತ್**
ಕನ್ನಡಕ್ಕೆ : ಎಸ್. ಮಾಲತಿ
ಮಹಾಲಸ ನಿಲಯ, ಜೋಗರಸ್ತೆ, ಸಾಗರ

# ಅವನು ಹೇಳುತ್ತಿದ್ದಾನೆ

ನಾನೊಬ್ಬ ಭಯೋತ್ಪಾದಕ
ಏಕೆಂದರೆ ನಾನೊಬ್ಬ ಮುಸಲ್ಮಾನ
ಹೀಗೆಂದು ಲೋಕದ ಠೇಕೇದಾರ
ಅವನು ಹೇಳುತ್ತಿದ್ದಾನೆ.

ನಾನೊಬ್ಬ ಮಾನವ ಪೀಡಕ
ಏಕೆಂದರೆ ನಾನು ಕಶ್ಮೀರೀ
ಹಾಗೆಂದು ಸೂತಕದ ಮನೆ ವಾಸಿ
ಅವನು ಹೇಳುತ್ತಿದ್ದಾನೆ.

ನಾನೊಬ್ಬ ಹಿಂಸ್ರಕ ಪ್ರಾಣಿ
ಏಕೆಂದರೆ ಬದುಕಿಗಾಗಿ ಹೋರಾಡುತ್ತೇನೆ
ಹಾಗೆಂದು ಮದ್ದಿನ ಮನೆಯಲ್ಲಿ ನಿಂತ
ಅವನು ಹೇಳುತ್ತಿದ್ದಾನೆ.

ನಾನೊಬ್ಬ ಕ್ರೂರಿ, ಕೊಲೆಗಡುಕ
ಏಕೆಂದರೆ ಆತ್ಮರಕ್ಷಣೆ ಬೇಕೆನ್ನುವೆ
ಮನುಜರ ಸುಟ್ಟ ಬೂದಿ ಬೆಟ್ಟ
ಎಲುಬುಗಳ ಗುಡ್ಡೆಯ ಮೇಲೆ ನಿಂತ
ಅವನು ಹೇಳುತ್ತಿದ್ದಾನೆ.

ನಾನೊಬ್ಬ ಯುದ್ಧಕೋರ
ಏಕೆಂದರೆ ರೊಟ್ಟಿಗಾಗಿ ಮಾರಿಕೊಳ್ಳಲಿಲ್ಲ
ನೆರೆಯವರ ತುತ್ತು ಕಿತ್ತು ತಿಂದು
ರಕ್ತದ ಹೊಳೆ ಹರಿಸುತ್ತಿರುವ
ಅವನು ಹೇಳುತ್ತಿದ್ದಾನೆ.

**ಡಾ|| ಕೆ. ಷರೀಫಾ**
ಮನೆ ನಂ.೪, ೪ನೇ ಅಡ್ಡರಸ್ತೆ,
ರಹಮತ್‌ನಗರ, ಆರ್. ಟಿ. ನಗರ ಅಂಚೆ
ಬೆಂಗಳೂರು - ೫೬೦ ೦೩೨

# ಸಾಕ್ರಟೀಸನ ಮೂರು ಪ್ರಶ್ನೆಗಳು : ಒಂದು ನೀತಿ ಪಾಠ

'ಗಾಸಿಪ್' ಮಾಡುವುದು ಒಂದು ಪ್ರಿಯವಾದ ಹವ್ಯಾಸ. ನಾವು ಬೇರೆಯವರ ಬದುಕಿನ ಆಗುಹೋಗುಗಳನ್ನು ಕುರಿತು, ಅವರ ವೈಯಕ್ತಿಕ ಜೀವನದ ಬಗೆಗೆ ಕಟ್ಟುಕತೆಗಳನ್ನು ಹೆಣೆಯುತ್ತಾ ನಮ್ಮ ತೆವಲನ್ನು ತೀರಿಸಿಕೊಳ್ಳುವ ಕಾರ್ಯದಲ್ಲಿ ಸದಾ ತೊಡಗಿಸಿಕೊಂಡು ಒಂದು ಬಗೆಯ ಆನಂದವನ್ನು ಅನುಭವಿಸುತ್ತೇವೆ. ಇಂಥದೇ ಬಗೆಯ ಕೆಲಸವನ್ನು ನಮ್ಮ ಮಾಧ್ಯಮಗಳು ಸಹ ಮಾಡುತ್ತವೆ. ಯಾರದೋ ಖಾಸಗಿ ಜೀವನದ ಬಗ್ಗೆ ಕಥೆಗಳನ್ನು ಕಟ್ಟುತ್ತವೆ; ಇನ್ಯಾವುದೋ ಸುದ್ದಿಯನ್ನು ಸೃಷ್ಟಿಸುತ್ತವೆ; ಕಲ್ಪನೆಗಳ ಆಧಾರದ ಮೇಲೆ ವ್ಯಾಖ್ಯಾನಿಸುತ್ತವೆ. ಇಂಥಹ ಬೇಜವಾಬ್ದಾರಿ ನಡವಳಿಕೆಯು ಹಲವು ದುಷ್ಪರಿಣಾಮಗಳಿಗೆ ಕಾರಣವಾಗುತ್ತದೆ. ಹಾಗಾಗದಂತೆ ನೋಡಿಕೊಳ್ಳುವುದು ಸಾಮಾಜಿಕ ಜವಾಬ್ದಾರಿ; ವೃತ್ತಿಧರ್ಮ ಕೂಡ. ಒಂದು ಸುದ್ದಿಯ ಮಹತ್ವವನ್ನು ನಿರ್ಣಯಿಸುವಲ್ಲಿ ಮತ್ತು ಅದನ್ನು ಪ್ರಕಟಿಸುವ ಔಚಿತ್ಯವನ್ನು ನಿರ್ಧರಿಸುವಲ್ಲಿ, ಗ್ರೀಕ್ ತತ್ವಜ್ಞಾನಿ ಸಾಕ್ರಟೀಸನ ಸಾಮಾನ್ಯ ನಿಯಮಗಳನ್ನು ಪಾಲಿಸುವುದು ಉಚಿತವೆನ್ನಿಸುತ್ತದೆ. ಈ ಸಾಮಾನ್ಯ ನಿಯಮಗಳು ಸಾಕ್ರಟೀಸನ ಜೀವನದ ಒಂದು ಸನ್ನಿವೇಶದಲ್ಲಿ ಉಲ್ಲೇಖಿತವಾಗಿವೆ.



ಒಮ್ಮೆ ಸಾಕ್ರಟೀಸನ ಪರಿಚಿತನೊಬ್ಬ ಅವನನ್ನು ಭೇಟಿಯಾಗಿ, ''ಸಾಕ್ರಟೀಸ್, ನಿನಗೆ ನಿನ್ನ ವಿದ್ಯಾರ್ಥಿಯನ್ನು ಕುರಿತ ಈ ವಿಚಾರ ತಿಳಿದಿದೆಯೇ'', ಎಂದು ಉತ್ಸಾಹದಿಂದ ಪ್ರಶ್ನಿಸುತ್ತಾನೆ. ಸಾಕ್ರಟೀಸ್ ಅವನನ್ನು ತಡೆದು, ''ತಾಳು, ನೀನು ಆ ವಿಚಾರ ಹೇಳುವ ಮೊದಲು ನಾನು ಕೇಳುವ ಮೂರು ಪ್ರಶ್ನೆಗಳಿಗೆ ಉತ್ತರಿಸಬೇಕು'' ಎಂಬುದಾಗಿ ಹೇಳುತ್ತಾನೆ. ''ಮೂರು ಪ್ರಶ್ನೆಗಳೇ ?'' ''ಹೌದು. ನೀನು ಏನನ್ನು ಹೇಳಲು ಹೊರಟಿದ್ದೀಯೋ ಅದು ಹೇಳುವ ಮೊದಲು ಈ ಪ್ರಶ್ನೆಗಳಿಗೆ ನೀನು ಉತ್ತರಿಸಬೇಕು'' ಎಂಬುದಾಗಿ ಸಾಕ್ರಟೀಸ್ ಆ ಪರಿಚಿತನನ್ನು ಒತ್ತಾಯಿಸುತ್ತಾನೆ. ''ಮೊದಲಿಗೆ, ನೀನು ಏನನ್ನು ಹೇಳಲು ಹೊರಟಿದ್ದೀಯೋ ಅದು ಸತ್ಯ ಎಂಬುದನ್ನು ನೀನು ಖಚಿತವಾಗಿ ಬಲ್ಲೆಯಾ ?'' ''ಇಲ್ಲ, ನಾನು ಅದನ್ನು ಕೇಳಿ ಮಾತ್ರ ಬಲ್ಲೆ'' ಎಂಬುದಾಗಿ ಪರಿಚಿತ ಉತ್ತರಿಸುತ್ತಾನೆ. ''ಸರಿ, ಹಾಗಿದ್ದರೆ ಅದು ಸತ್ಯ ಅಥವಾ ಸುಳ್ಳು ಎನ್ನುವುದು ನಿನಗೆ ತಿಳಿಯದು. ಈಗ ನನ್ನ ಎರಡನೆಯ ಪ್ರಶ್ನೆ. ನೀನು ಹೇಳಲು ಹೊರಟಿರುವ ವಿಚಾರ ಒಳಿತಾದ ವಿಚಾರವೆ ?''– ಸಾಕ್ರಟೀಸ್ ಪ್ರಶ್ನಿಸುತ್ತಾನೆ. ''ಅದು ಅಲ್ಲ. ಅದಕ್ಕೆ ಬದಲಾಗಿ...'' ಎಂದು ಪರಿಚಿತ ತಡವರಿಸುತ್ತಾನೆ. ''ನೋಡು, ಕೆಟ್ಟ ವಿಚಾರವೊಂದನ್ನು, ಅದರ ಸತ್ಯಾಸತ್ಯತೆಯ ಬಗ್ಗೆ ಅರಿವಿಲ್ಲದಿದ್ದರೂ ಕೂಡ ನನಗೆ ಹೇಳ ಬಯಸುತ್ತೀಯ. ಅಡ್ಡಿಯಿಲ್ಲ. ಹಾಗಾದರೂ ಸಹ, ನೀನು ನನ್ನ ಮೂರನೆಯ ಪ್ರಶ್ನೆಗೆ ಉತ್ತರ ಹೇಳುವ ಮೂಲಕ ಈ ಪರೀಕ್ಷೆಯಲ್ಲಿ ಗೆಲ್ಲಬಹುದು. ನೀನು ನನಗೆ ಹೇಳುವ ವಿಷಯ ನನಗೆ ಯಾವುದೇ ಬಗೆಯಲ್ಲಿ ಉಪಯುಕ್ತವಾಗುವ ವಿಚಾರವೇ ?'', ಎಂದು ಸಾಕ್ರಟೀಸ್ ಪ್ರಶ್ನಿಸುತ್ತಾನೆ. ''ಇಲ್ಲ. ವಾಸ್ತವವಾಗಿ ಹಾಗೇನೂ ಇಲ್ಲ'' ಎಂಬುದಾಗಿ ಪರಿಚಿತ ಒಪ್ಪಿಕೊಳ್ಳುತ್ತಾನೆ. ''ನೋಡು, ನೀನು ಹೇಳುವ ವಿಚಾರ ಸತ್ಯವೂ ಅಲ್ಲ, ಒಳ್ಳೆಯದೂ ಅಲ್ಲ. ಅದು ಉಪಯುಕ್ತವಾದ ಮಾಹಿತಿಯೂ ಆಗಿಲ್ಲ. ಹಾಗಿರುವುದರಿಂದ, ನೀನು ಅದನ್ನು ಯಾಕಾದರೂ ನನಗೆ ಹೇಳಬೇಕು'' ಎಂದು ಸಾಕ್ರಟೀಸ್ ತನ್ನ ಪರಿಚಿತನಿಗೆ ಸವಾಲು ಒಡ್ಡುತ್ತಾನೆ. ಇದನ್ನು ಕೇಳಿದ ಪರಿಚಿತ ನಾಚಿಕೆಯಿಂದ ತಲೆ ತಗ್ಗಿಸುತ್ತಾನೆ.

ಇದು ನಮ್ಮ ಮಾಧ್ಯಮ ವರದಿಗಾರರಿಗೆ ಒಂದು ನೀತಿಯ ಪಾಠವಾಗಬೇಕು. ಯಾವುದು ವಾಸ್ತವವಲ್ಲವೋ, ಒಳ್ಳೆಯದಲ್ಲವೋ ಮತ್ತು ಉಪಯುಕ್ತವಲ್ಲವೋ ಅಂತಹ ವಿಚಾರಗಳನ್ನು ಹಬ್ಬಿಸುವುದು ವೃತ್ತಿಧರ್ಮವಲ್ಲ.

**ಎಚ್.ಎಸ್. ಈಶ್ವರ**
ಎಚ್.ಐ.ಜಿ. ೧೧, ಕೆ.ಎಚ್.ಬಿ.ಕಾಲೋನಿ, ಮೊದಲ ಹಂತ, ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯



ಎಸ್. ಸುರೇಂದ್ರ

# ಪೋಸ್ಕೊ

## ಉಕ್ಕು ಕಾರ್ಖಾನೆ ಜನವಿರೋಧಿ ಯೋಜನೆ

ಸ್ವತಂತ್ರ ಭಾರತದಲ್ಲಿ ಹಲವಾರು ಹಗರಣಗಳು ಜರುಗಿಹೋಗಿವೆ. ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣದ ಹೆಸರಲ್ಲಿ ನಮ್ಮ ರಾಷ್ಟ್ರದ ನೈಸರ್ಗಿಕ ಸಂಪನ್ಮೂಲಗಳನ್ನು ದೇಶೀಯ ಬಂಡವಳಿಗರು, ವಿದೇಶಿ ಬಹುರಾಷ್ಟ್ರೀಯ ಕಂಪನಿಗಳು ಲೂಟಿ ಮಾಡಲು ನಮ್ಮ ಆಳುವ ವರ್ಗಗಳು ಅನುವು ಮಾಡಿಕೊಡುತ್ತಿರುವುದಕ್ಕೆ ದಕ್ಷಿಣ ಕೊರಿಯಾದ ಪೊಹಾಂಗ್ ಸ್ಟೀಲ್ ಕಂಪನಿಗೆ (ಪೋಸ್ಕೊ) ಒರಿಸ್ಸಾದ ಜಗತ್‌ಸಿಂಗ್‌ಪುರ ಜಿಲ್ಲೆಯಲ್ಲಿ ಉಕ್ಕು ಕಾರ್ಖಾನೆಯನ್ನು ಸ್ಥಾಪಿಸಲು ಅನುಮತಿ ನೀಡಿದ್ದು ಒಂದು ಸೂಕ್ತ ಉದಾಹರಣೆ.

ವಿದೇಶಿ ಬಂಡವಾಳ ಬರಮಾಡಿಕೊಳ್ಳುವ ತರಾತುರಿಯಲ್ಲಿ ನಡೆದಿರುವ ಪೋಸ್ಕೊ ಹಗರಣದ ಆಯಾಮವೇ ಬೇರೆ. ವಿದೇಶಿ ಬಂಡವಾಳ ಹೂಡಿಕೆಯೊಂದೇ ನಮ್ಮ ಮುಂದಿರುವ ಆಯ್ಕೆ ಎಂಬ ಭ್ರಮೆ ಹುಟ್ಟಿಸುವ ಮಾಯಾಜಿಂಕೆ ಇದು. ಈ ಮೂಲಕ ದೇಶಿ ಮಾರುಕಟ್ಟೆಯನ್ನು ಅಲಕ್ಷಿಸಿ, ಜಾಗತಿಕ ಮಾರುಕಟ್ಟೆಗಳಿಗೆ ಆದ್ಯತೆ ನೀಡುವ ಹುನ್ನಾರ. ಇದು ಇಡೀ ವಿಶ್ವದಲ್ಲಿಯೇ ಮೂರನೇ ಸ್ಥಾನದಲ್ಲಿರುವ, ಉಕ್ಕು ಉತ್ಪಾದಿಸುವ ಪೋಸ್ಕೊ ಕಂಪನಿಯ ಕಥೆಯ ಒಂದು ಮುಖವಷ್ಟೆ. ರಾಷ್ಟ್ರೀಯ ಹಸಿರು ನ್ಯಾಯ ಮಂಡಳಿ, ಕೇಂದ್ರ ಸರ್ಕಾರದ ಮುಖ್ಯ ಲೆಕ್ಕ ತನಿಖಾಧಿಕಾರಿಗಳ ಇಲಾಖೆ ಎರಡೂ ಈ ಯೋಜನೆಗಳಿಂದಾಗುವ ಪರಿಸರ ಸಂಬಂಧಿತ ಅನಾಹುತಗಳು ಹಾಗೂ ಇಲ್ಲಿ ನಡೆದಿರುವ ಅವ್ಯವಹಾರಗಳ ಕುರಿತು ತೀವ್ರವಾದ ಆಕ್ಷೇಪ ವ್ಯಕ್ತಪಡಿಸಿವೆ. ಜಗತ್‌ಸಿಂಗ್‌ಪುರ ಮತ್ತು ಅದರ ಆಸುಪಾಸಿನ ಸ್ಥಳೀಯರಿಂದ, ಪರಿಸರವಾದಿಗಳಿಂದ, ಎಷ್ಟೇ ಪ್ರತಿರೋಧ ಎದುರಾದರೂ ಅಂಕಿ-ಅಂಶಗಳನ್ನು ತಿರುಚಿ ವಾಸ್ತವಾಂಶಗಳಿಗೆ ಬೇರೆಯದೇ ಬಣ್ಣ ಹಚ್ಚಿ ಮತ್ತು ಸಂಬಂಧಪಟ್ಟ ಅಧಿಕಾರಿಗಳಿಗೆ, ರಾಜಕಾರಣಿಗಳಿಗೆ ಆಮಿಷ ಒಡ್ಡಿ ಪೋಸ್ಕೊ ಕಂಪನಿ ನಡೆದುಬಂದಿರುವ ಹಾದಿ ಇದು. ಸುಮಾರು ೬ ವರ್ಷಗಳಷ್ಟು ಹಿಂದೆಯೇ ಪೋಸ್ಕೊ ಮತ್ತು ಒರಿಸ್ಸಾ ರಾಜ್ಯ ಸರ್ಕಾರಗಳು ಸಹಿ ಹಾಕಿರುವ ೫೨೦೦೦ ಕೋಟಿ ರೂ.ಗಳ ಮೌಲ್ಯದ ಒಪ್ಪಂದ ಜಾರಿಗೆ ಬರದೆ ಇನ್ನೂ ಕಾಗದದ ಮೇಲೇ ಉಳಿದಿದೆ.

ಈ ಒಪ್ಪಂದಕ್ಕೆ ಸಹಿ ಹಾಕಿದ ಸಂದರ್ಭದಲ್ಲಿ ಒರಿಸ್ಸಾ ಸರ್ಕಾರ ಪೋಸ್ಕೊಗೆ ನೀಡಬೇಕೆಂದಿದ್ದ ಭೂಮಿಯು ರಾಜ್ಯದ ಕಂದಾಯ ಇಲಾಖೆಗೆ ಸೇರಿದ್ದು ಎಂದೇ ಎಣಿಸಿತ್ತು. ಆದರೆ ಯೋಜನೆಗೆ ಸಂಬಂಧಪಟ್ಟ ದಾಖಲೆಗಳನ್ನು ಪರಿಶೀಲಿಸಿದಾಗ ಪೋಸ್ಕೊ ಕಾರ್ಖಾನೆಯ ಸ್ಥಾಪನೆಗಾಗಿ ಮೀಸಲಿಟ್ಟ ಭೂಮಿಯು ೪೦೦೦ ಬಡ ಕುಟುಂಬಗಳು ವಾಸಿಸುತ್ತಿರುವ ಅರಣ್ಯ ಪ್ರದೇಶವೆಂಬ ನಿಜಾಂಶ ಅರಿವಿಗೆ ಬಂದದ್ದು ಇಡೀ ಪ್ರಕರಣಕ್ಕೆ ಹೊಸ ತಿರುವು ನೀಡಿತು.






ಕಳೆದ ೫ ವರ್ಷಗಳಿಂದಲೂ ಜಗತ್‌ಸಿಂಗ್‌ಪುರ್, ಪ್ಯಾರಾದೀಪ್ ಮತ್ತಿತರ ಊರುಗಳಲ್ಲಿ ಪೋಸ್ಕೊ ಯೋಜನೆ ವಿರುದ್ಧ ವ್ಯಾಪಕವಾದ ಪ್ರತಿಭಟನೆಗಳು ಜರುಗುತ್ತಲೇ ಇವೆ. ಹಲವಾರು ಬಾರಿ ಪೊಲೀಸರು ಗುಂಡು ಹಾರಿಸಿದ್ದಾರೆ. ಸಾವುಗಳೂ ಸಂಭವಿಸಿವೆ. ನೂರಾರು ಜನರು ಗಾಯಗೊಂಡಿದ್ದಾರೆ. ಪಂಚಾಯತಿ ಅಧ್ಯಕ್ಷನೊಬ್ಬ ೪೨ ಮೊಕದ್ದಮೆಗಳನ್ನು ಎದುರಿಸುತ್ತಿದ್ದಾನೆ. ೩ ಬುಲೆಟ್‌ಗಳನ್ನು ತನ್ನ ದೇಹದಲ್ಲಿಟ್ಟುಕೊಂಡು ಈಗಲೂ ಬದುಕುಳಿದಿರುವ ರೈತನೊಬ್ಬ ಉಳುಮೆಯಲ್ಲಿ ನಿರತನಾಗಿದ್ದಾನೆ. ದಿಕ್ಕುತಪ್ಪಿದ ಉದ್ದೇಶಗಳಿಗಾಗಿ, ವಿದೇಶಿ ಬಂಡವಾಳಕ್ಕಾಗಿ ಹಪಹಪಿಸುತ್ತಿರುವ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ದೋಷಪೂರಿತ ಗಣಿ ಉದ್ಯಮ ನೀತಿ, ಭೂ ಸ್ವಾಧೀನ ನೀತಿ, ವಿವಾದಾತ್ಮಕವಾದ ನೈಸರ್ಗಿಕ ಸಂಪನ್ಮೂಲಗಳ ಒಡೆತನದ ಪ್ರಶ್ನೆ, ಸಾರ್ವಜನಿಕ ಮತ್ತು ಖಾಸಗಿ ಕ್ಷೇತ್ರಗಳ ನಡುವಿನ ಸಂಘರ್ಷ, ಅಭಿವೃದ್ಧಿಯ ಮಾದರಿ, ಮೂಲಭೂತ ಹಕ್ಕುಗಳ ನಿರಾಕರಣೆ, ಭೂ ವಂಚಿತರಾದ ರೈತಾಪಿಗಳಿಗೆ, ಅರಣ್ಯವಾಸಿಗಳಿಗೆ ನ್ಯಾಯಯುತ ಪರಿಹಾರ – ಈ ಎಲ್ಲ ಅಂಶಗಳನ್ನು ಅಲ್ಲಿನ ಹೋರಾಟಗಳು, ಪ್ರತಿರೋಧಗಳು ಸಂಕೇತಿಸುತ್ತವೆ.

ಈ ಹೋರಾಟಗಳು, ಚಳುವಳಿಗಳು ಒಂದು ನಿರ್ದಿಷ್ಟ ರೂಪ ಪಡೆದುದರ ಪರಿಣಾಮವಾಗಿ 'ಪೋಸ್ಕೊ ಪ್ರತಿರೋಧ ಸಂಗ್ರಾಮ ಸಮಿತಿ' ಎಂಬ ಸಂಘಟನೆ ಅಸ್ತಿತ್ವಕ್ಕೆ ಬಂದಿದೆ. ಅದು ಭಾರತ ಕಮ್ಯುನಿಸ್ಟ್ ಪಕ್ಷದ ಒರಿಸ್ಸಾ ಪ್ರಾಂತ್ಯ ಸಮಿತಿಯ ಕಾರ್ಯದರ್ಶಿ ಮಂಡಳಿ ಸದಸ್ಯ ಅಭಯ್ ಸಾಹು ಅವರ ನಾಯಕತ್ವದಲ್ಲಿ ಒಂದು ಬೃಹತ್ ಜನಾಂದೋಲನವಾಗಿ ರೂಪುಗೊಂಡು ಕೇಂದ್ರ ಮತ್ತು ರಾಜ್ಯ ಸರ್ಕಾರಗಳಿಗೆ ಹಾಗೂ ಪೋಸ್ಕೊ ಕಂಪನಿಗೆ ಗಂಭೀರ ಸವಾಲೆಸೆದಿದೆ. ಆ ಪ್ರದೇಶದ ಜನಸಾಮಾನ್ಯರ, ರೈತಾಪಿ ಜನರ, ಅರಣ್ಯವಾಸಿಗಳ ಮತ್ತು ಮೀನುಗಾರರ ವಿಶ್ವಾಸ ಗಳಿಸಿದೆ. ಇದೊಂದು ವಿಶಾಲ ತಳಹದಿಯ ವೇದಿಕೆಯಾಗಿ, ರಾಜ್ಯದ ಆಡಳಿತ ಪಕ್ಷ ಮತ್ತು ಕಾಂಗ್ರೆಸ್ ಪಕ್ಷವನ್ನು ಹೊರತುಪಡಿಸಿ, ಮಿಕ್ಕೆಲ್ಲ ರಾಜಕೀಯ ಪಕ್ಷಗಳು, ಜನಪರ ಸಂಘಟನೆಗಳು ಒಟ್ಟುಗೂಡಿರುವ ವಿಶಾಲ ತಳಹದಿಯ ವೇದಿಕೆಯಾಗಿದೆ. ಈ ವೇದಿಕೆ ಪೋಸ್ಕೊ ಯೋಜನೆಗೆ ಪ್ರಬಲವಾದ ಪ್ರತಿರೋಧ ಒಡ್ಡುತ್ತಿರುವುದು ರಾಷ್ಟ್ರಕ್ಕೇ ಮಾದರಿಯ ಬೆಳವಣಿಗೆಯಾಗಿದೆ.

ಕೇಂದ್ರ ಸರ್ಕಾರದ ಪರಿಸರ ಮತ್ತು ಅರಣ್ಯ ಸಚಿವಾಲಯವೇ ನೇಮಿಸಿದ್ದ ಮೀನಾಗುಪ್ತ ಸಮಿತಿಯು ಸಲ್ಲಿಸಿದ ವರದಿಯು ಪೋಸ್ಕೊ ಯೋಜನೆಯಿಂದಾಗಬಹುದಾದ ಪರಿಸರ ಕಾಯಿದೆ ಮತ್ತು ಅರಣ್ಯ ಹಕ್ಕುಗಳ ಉಲ್ಲಂಘನೆಯ ಬಗ್ಗೆ ಆಕ್ಷೇಪಿಸಿದೆ. ಕಂಪೆನಿಗೆ ನೀಡಿರುವ ಎಲ್ಲ ಪರವಾನಗಿಗಳನ್ನು ಹಿಂತೆಗೆದುಕೊಳ್ಳಬೇಕೆಂದು ಶಿಫಾರಸು ಮಾಡಿದೆ. ಈ ಹಿನ್ನೆಲೆಯಲ್ಲಿ ಈ ಯೋಜನೆಯ ಭವಿಷ್ಯದ ಬಗ್ಗೆ ಅಂತಿಮ ತೀರ್ಮಾನ ತೆಗೆದುಕೊಳ್ಳಬೇಕಾದ ಜವಾಬ್ದಾರಿ ಕೇಂದ್ರ ಹಾಗೂ ಒರಿಸ್ಸಾ ಸರಕಾರಗಳ ಹೆಗಲ ಮೇಲಿದೆ. ಒರಿಸ್ಸಾ ಸರ್ಕಾರ ಏನೇ ಒಡೆದು ಆಳುವ ನೀತಿಯನ್ನು ಅನುಸರಿಸಿ ಪ್ರತಿಭಟನಾಕಾರರಲ್ಲಿ ಒಡಕು ಉಂಟುಮಾಡಲು ಯತ್ನಿಸಿದರೂ ತಲೆತಲಾಂತರದಿಂದ ತಮ್ಮ ಜೀವನೋಪಾಯಕ್ಕೆ ಆಸರೆಯಾಗಿರುವ ಭೂಮಿಯನ್ನು, ಅರಣ್ಯಪ್ರದೇಶವನ್ನು, ಸಮುದ್ರತೀರದ ದಂಡೆಗಳನ್ನು ಬಿಟ್ಟುಕೊಡಲು ತಯಾರಿಲ್ಲದ ಸಹಸ್ರಾರು ಜನ ಬಡ ರೈತರು, ಮೀನುಗಾರರು, ಅರಣ್ಯವಾಸಿಗಳು ತಮ್ಮ ಪ್ರಾಣವನ್ನೇ ಒತ್ತೆಯಿಟ್ಟು 'ಪೋಸ್ಕೊ ಪ್ರತಿರೋಧ ಸಂಗ್ರಾಮ ಸಮಿತಿ'ಯ ಕರೆಗೆ ಓಗೊಟ್ಟು ನಿರಂತರ ಹೋರಾಟಗಳಲ್ಲಿ ತೊಡಗಿದ್ದಾರೆ. ಒಂದು ಅಂದಾಜಿನಂತೆ ಈ ಯೋಜನೆಯಡಿ ಬರುವ ಪ್ರದೇಶದಲ್ಲಿ ಪ್ರಮುಖವಾದ ಬೆಳೆಯೆಂದರೆ ವೀಳ್ಯದೆಲೆ, ನುಗ್ಗೇಕಾಯಿ ಮತ್ತು ಗೋಡಂಬಿ. ಅಲ್ಲಿಯ ಬಹುತೇಕ ರೈತರಿಗೆ ತಿಂಗಳಿಗೆ ಸರಾಸರಿ ೫೦೦೦/- ರೂ.ಗಳ ವರಮಾನವಿದೆ. ಎಂದರೆ ವರ್ಷಕ್ಕೆ ೬೦,೦೦೦/- ರೂ.ಗಳು. ಪೋಸ್ಕೊ ಅವರಿಗೆ ನೀಡಲು ಮುಂದೆ ಬಂದಿರುವ ಪರಿಹಾರ ಧನದಿಂದ ತಮ್ಮ ಭವಿಷ್ಯವನ್ನು ರೂಪಿಸಿಕೊಳ್ಳಲಾರೆವು, ಆ ಅರಣ್ಯಪ್ರದೇಶವೇ, ಆ ಭೂಮಿಯೇ ತಮ್ಮ

# ಇದೇನಾ ಸಾಧನೆ !

ಅವ್ವನ ಗರ್ಭದಿಂದ
ಹೊರಬಿದ್ದ ದಿನದಿಂದ
ಲೆಖ್ಖವಿಡದ ಹೆಜ್ಜೆ ಗಾಳಿಗೊದ್ದಿದ್ದೇನೆ
ಸಾರ ಬಲಿತ ದಿನದಿಂದ
ಅಸಂಖ್ಯ ನಡೆ ನಡೆದು
ಇನ್ನೂ ಮೂರಡಿಯನ್ನೇ ಇಡುತ್ತಿದ್ದೇನೆ
ಅಪರೂಪಕ್ಕೊಮ್ಮೆಯಾದರೂ ಹಿಂದಿರುಗಿ
ಹೆಜ್ಜೆ ಗುರುತ ನೋಡಲೇ ಇಲ್ಲಾ
ನಾಳೆ ಯಾರಾದರೂ ಕೇಳಬಹುದು
ನಿನ್ನ ಪಾದ ಭೂಮಿಗೊತ್ತಿದ ರಂಗೋಲಿಯಲ್ಲಿ
ಎಷ್ಟು ಗೆರೆಗಳಿವೆ ಎಣಿಸಿದೆಯಾ...
ಹೇಗೆ ಹೇಳಲಿ ಉತ್ತರ ;

ಅದೋ ಅಲ್ಲಿಂದ ಬಂದ ಮೇಲೆ
ನಾಲಿಗೆ ಆಡಿದ್ದೆಷ್ಟು ಉಸಿರ ಪ್ರತಿಯುಸಿರ
ಎಣಿಕೆಯನ್ನು ಯಾರೂ ಅಂದಾಜಿಸಿಲ್ಲ,

ಮತ್ತೆ ನನ್ನನ್ನೇ ಕೇಳಿಕೊಳ್ಳುತ್ತಿದ್ದೇನೆ
ನೀನೊಬ್ಬ ಶಿಸ್ತು ಪರಿಪಾಲಕನೆಂದ ಮೇಲೆ
ಏನು ಕಲಿತೆ ಮತ್ತೇನು ಸಾಧಿಸಿದೆ
ನಡೆದ ಹೆಜ್ಜೆ ಉಸಿರಿಟ್ಟ ಗಳಿಗೆ
ಎಲ್ಲವನ್ನೂ ನೆನಪಿಟ್ಟು ಹೇಳದ ಮೇಲೆ.

**ಎನ್. ವಿ. ಮಂಜುನಾಥ**
ಉಂಬಳೇಕೊಪ್ಪ ಅಂಚೆ, ಸಿರಸಿ ತಾಲ್ಲೂಕು
ಉತ್ತರ ಕನ್ನಡ ಜಿಲ್ಲೆ - ೫೮೧ ೩೧೮



ಬದುಕಿನ, ತಮ್ಮ ಸಂಸ್ಕೃತಿಯ ಸಂಕೇತ ಎನ್ನುತ್ತಾರೆ ಅಲ್ಲಿನ ಸ್ಥಳೀಯರು.

ಕಬ್ಬಿಣದ ಅದಿರಿನ ಗಣಿಗಾರಿಕೆಯಿಂದ ಪೋಸ್ಕೊ ಕಂಪನಿಗೆ ಮುಂದಿನ ೩೦ ವರ್ಷಗಳಲ್ಲಿ ಪ್ರತಿವರ್ಷ ಬರುವ ವರಮಾನ ಸರಾಸರಿ ೬೫೦೦ರಿಂದ ೭೦೦೦ ಕೋಟಿ ರೂ.ಗಳು. ಕಂಪನಿ ಈ ಯೋಜನೆಗೆ ಹೂಡಲಿರುವ ಬಂಡವಾಳ ೫೫೦೦೦ ಕೋಟಿ ರೂ.ಗಳು.

ಈಗ ಪೋಸ್ಕೊ ಕಂಪನಿಗಾಗಿ ಮೀಸಲಾಗಿಟ್ಟಿರುವ ಭೂಮಿ ಸುಮಾರು ೨೨೦೦೦ ಕೃಷಿಕರ ಬದುಕಿಗೆ ಆಸರೆಯಾಗಿದೆ. ಅದರ ಬದಿಗೇ, ಎಂದರೆ ೫-೭ ಕಿಲೋ ಮೀಟರ್ ದೂರದಲ್ಲಿ, ಈ ಯೋಜನೆಗೆ ಪೂರಕವಾಗಬಹುದಾದ ಬಂಜರು ಭೂಮಿಯಿದೆ. ಅಲ್ಲಿ ಇದೇ ಯೋಜನೆಗಾಗಿ ಬಂಡವಾಳ ಹೂಡಿದ್ದೇ ಆದರೆ ಆ ಬಂಡವಾಳದ ಮೊತ್ತಕ್ಕಿಂತಲೂ ೪೦೦೦ ಕೋಟಿ ರೂ.ಗಳು ಹೆಚ್ಚು ವೆಚ್ಚ ಮಾಡಬೇಕಾಗುತ್ತದೆ ಎಂಬ ಕಾರಣಕ್ಕಾಗಿ ಆ ಪ್ರದೇಶ ತನಗೆ ಬೇಡವೆಂದು ಸಾರಾಸಗಟಾಗಿ ತಿರಸ್ಕರಿಸಿದೆ ಪೋಸ್ಕೊ ಕಂಪನಿ. ಒರಿಸ್ಸಾ ಸರ್ಕಾರ ಸಾಮಾಜಿಕ ನ್ಯಾಯವನ್ನು ಗಾಳಿಗೆ ತೂರಿ ನೀಡಲಿರುವ ಭೂಮಿಯಲ್ಲಿ ಯಥೇಚ್ಛವಾದ ಪ್ರಮಾಣದಲ್ಲಿ ನೈಸರ್ಗಿಕವಾಗಿ ಲಭ್ಯವಿರುವ ಮರಳು ಇಲ್ಲದೆ ಯಾವ ಕಟ್ಟಡವನ್ನು ತಾನೆ ಕಟ್ಟಲು ಸಾಧ್ಯ ? ಇತರೆಡೆ ತನ್ನ ಘಟಕವನ್ನು ಸ್ಥಾಪಿಸಿದ್ದೇ ಆದರೆ ಕಟ್ಟಡದ ನಿರ್ಮಾಣಕ್ಕಾಗಿ ಮರಳು ಸಾಗಿಸಲು ಹೆಚ್ಚಿನ ಖರ್ಚು ತಗಲುತ್ತದೆ ಎಂಬ ಆತಂಕ ಈ ದೈತ್ಯ ಬಹುರಾಷ್ಟ್ರೀಯ ಕಂಪನಿಗೆ ! ರೈತರ, ಅರಣ್ಯವಾಸಿಗಳ, ಮೀನುಗಾರರ ಬದುಕು ಹಾಳಾದರೇನು , ತಾನು ಎಗ್ಗಿಲ್ಲದ ಲಾಭ ಗಳಿಸಬೇಕು – ಇದು ಆ ಕಂಪನಿಯ ಹುನ್ನಾರ.

ಆತಂಕಕಾರಿ ಅಂಶವೆಂದರೆ ಈ ಯೋಜನೆಯಿಂದಾಗಿ ಸುಮಾರು ೨೨೦೦೦ ಜನರನ್ನು ಸ್ಥಳಾಂತರಗೊಳಿಸಬೇಕಾಗುತ್ತದೆ. ೨೦೦೦೦ ಮೀನುಗಾರರು ತಮ್ಮ ಜೀವನೋಪಾಯಕ್ಕೆ ಆಧಾರವಾಗಿರುವ ಸಮುದ್ರ ತೀರದಿಂದ ವಂಚಿತರಾಗುತ್ತಾರೆ. ೩ ಲಕ್ಷ ಮರಗಳು ನೆಲಕ್ಕುರುಳಬೇಕಾಗುತ್ತದೆ. ಅರಣ್ಯಪ್ರದೇಶಗಳು 'ಕಾಂಕ್ರೀಟ್ ಕಾಡು'ಗಳಾಗುತ್ತವೆ. ಆನೆಗಳಿಗೆ ತಾಣವಿಲ್ಲದಂತಾಗುತ್ತದೆ. ಜಗತ್ತಿನಲ್ಲೇ ವಿನಾಶದ ಅಂಚಿಗೆ ಸರಿಯುತ್ತಿರುವ, ವಿಶೇಷವಾಗಿ ಒರಿಸ್ಸಾದ ಕಡಲ ತೀರದಲ್ಲಿ ವಾಸಿಸುವ, ಆಲಿವ್ ರಿಡ್ಲಿ ಆಮೆಗಳು ಇತಿಹಾಸದ ಪುಟಗಳಿಗೆ ಸೇರಿಹೋಗುತ್ತವೆ. ಪೋಸ್ಕೊದಿಂದ ರಾಷ್ಟ್ರಕ್ಕೆ ಹರಿದುಬರುವ ಅಭಿವೃದ್ಧಿಯೇ ಇದು ?!

ಇಂದು ಗಣಿಗಾರಿಕೆಯ ಹೆಸರಲ್ಲಿ, ಅಭಿವೃದ್ಧಿಯ ಹೆಸರಲ್ಲಿ ನಮ್ಮ ದೇಶೀಯ ಬಂಡವಳಿಗರು, ಕಾರ್ಪೊರೇಟ್ ಸಂಸ್ಥೆಗಳು ಮತ್ತು ವಿದೇಶಿ ಬಹುರಾಷ್ಟ್ರೀಯ ಕಂಪನಿಗಳು ರಾಷ್ಟ್ರದ ನೈಸರ್ಗಿಕ ಸಂಪನ್ಮೂಲಗಳನ್ನು ಅವ್ಯಾಹತವಾಗಿ ಲೂಟಿ ಮಾಡುತ್ತಲೇ ತಂತಮ್ಮ ಖಾಸಗಿ ಸಾಮ್ರಾಜ್ಯಗಳನ್ನು ಕಟ್ಟಿಕೊಳ್ಳಲು ಹಾತೊರೆಯುತ್ತಿವೆ, ಪರಸ್ಪರ ಪೈಪೋಟಿಯಲ್ಲಿ ತೊಡಗಿವೆ. ನಮ್ಮ ಬಂಡವಾಳಶಾಹಿ ಆಡಳಿತ ವರ್ಗಗಳು, ಅವು ಯು.ಪಿ.ಎ. ಸರ್ಕಾರ ಆಗಿರಲಿ ಅಥವಾ ಎನ್.ಡಿ.ಎ. ಆಗಿರಲಿ, ನವ ಉದಾರವಾದಿ ನೀತಿಗಳನ್ನು ಜಾರಿಗೊಳಿಸುವ ಮೂಲಕ ಬಗೆಬಗೆಯ ಜನವಿರೋಧಿ ಕಾರ್ಯಾಚರಣೆಗಳಲ್ಲಿ ತೊಡಗಿರುವುದು, ಅದರ ವಿರುದ್ಧ ರಾಷ್ಟ್ರವ್ಯಾಪಿ ಸ್ಪಷ್ಟ ರೂಪ ಪಡೆಯಲು ಇನ್ನೂ ಸಾಧ್ಯವಾಗದಿರುವುದು ನಮ್ಮ ಮುಂದಿರುವ ದುರಂತ.

ನವ ಉದಾರವಾದಿ ನೀತಿಗಳಿಂದಾಗಿ ಸರ್ಕಾರಗಳ ವೈಫಲ್ಯ, ಲಕ್ಷ ಲಕ್ಷ ಕೋಟಿ ರೂ.ಗಳನ್ನೊಳಗೊಂಡ ಹಗರಣಗಳು, ವ್ಯಾಪಕ ಭ್ರಷ್ಟಾಚಾರ, ಆರ್ಥಿಕ ಕ್ಷೇತ್ರದಲ್ಲಿನ ಹಿನ್ನಡೆ ಇವುಗಳ ವಿರುದ್ಧ ಶೋಷಿತರು ಸಮಗ್ರವಾದ ವರ್ಗ ಹೋರಾಟಗಳನ್ನು ರೂಪಿಸಲು ಸಾಧ್ಯವಾಗಿಲ್ಲ, ಅದಕ್ಕೆ ಕಾರಣಗಳು ಹಲವಾರು. ಇಷ್ಟಾದರೂ ಭಾರತ ಕಮ್ಯುನಿಸ್ಟ್ ಪಕ್ಷದ ಅಭಯ ಸಾಹು ಅವರ ನೇತೃತ್ವದಲ್ಲಿ ಒರಿಸ್ಸಾ ಜಗತ್‌ಸಿಂಗ್‌ಪುರದಲ್ಲಿ ನಡೆಯುತ್ತಿರುವ ಉಗ್ರ ಹೋರಾಟ, ಇತ್ತೀಚೆಗೆ ನಮ್ಮದೇ ರಾಜ್ಯ ಕರ್ನಾಟಕದಲ್ಲಿ ಗದಗ ಜಿಲ್ಲೆಯ ಮುಂಡರಗಿ ತಾಲ್ಲೂಕಿನ ಹಳ್ಳಿಗುಡಿ ಗ್ರಾಮದ ಪ್ರದೇಶದಲ್ಲಿ ಇದೇ ಪೋಸ್ಕೊ ಕಂಪನಿ ಯೋಜನೆಯ ವಿರುದ್ಧ ನಡೆದ ಜನಾಂದೋಲನಗಳು ನಡೆಯುತ್ತಿರುವುದು ಆಶಾದಾಯಕ ಬೆಳವಣಿಗೆಗಳಾಗಿವೆ.

ಕಳೆದ ತಿಂಗಳು ಬೆಂಗಳೂರಿಗೆ ಬಂದಿದ್ದ ಪೋಸ್ಕೊ ಪ್ರತಿರೋಧ ಸಂಗ್ರಾಮ ಸಮಿತಿಯ ನಾಯಕ ಅಭಯ ಸಾಹು ಅವರನ್ನು ಭೇಟಿಯಾಗಿ ಅವರೊಡನೆ ಒರಿಸ್ಸಾದಲ್ಲಿ ಜರುಗುತ್ತಿರುವ ಹೋರಾಟದ ಹಿನ್ನೆಲೆ, ಅದರ ಧ್ಯೇಯೋದ್ದೇಶಗಳು ಮುಂತಾದ ವಿಷಯಗಳ ಬಗ್ಗೆ ಚರ್ಚಿಸುವ ಅವಕಾಶ 'ಹೊಸತು' ಸಂಪಾದಕ ಮಂಡಳಿಯ ಸದಸ್ಯರಿಗೆ ದೊರಕಿತ್ತು. ಸಾಹು ಅವರ ನಿಲುವು, ಮಾತುಗಳು ನೇರ, ನಿಷ್ಠುರ ಹಾಗೂ ಬದ್ಧತೆಯಿಂದ ಕೂಡಿರುವಂತಹವು. ಭಾರತ ಕಮ್ಯುನಿಸ್ಟ್ ಪಕ್ಷದ ಮಾಜಿ ಪ್ರಧಾನ ಕಾರ್ಯದರ್ಶಿ ಎ. ಬಿ. ಬರ್ಧನ್, ಈಗಿನ ಪ್ರಧಾನ ಕಾರ್ಯದರ್ಶಿ ಸುಧಾಕರ ರೆಡ್ಡಿ, ರಾಷ್ಟ್ರೀಯ ಕಾರ್ಯದರ್ಶಿಗಳಲ್ಲೊಬ್ಬರಾದ ಡಿ. ರಾಜಾ ಎಲ್ಲರೂ ಈ ಹೋರಾಟಕ್ಕೆ ಬೆಂಬಲ ವ್ಯಕ್ತಪಡಿಸುವ ಸಲುವಾಗಿ ಹಳ್ಳಿಹಳ್ಳಿಗಳಿಗೆ ಭೇಟಿ ಇತ್ತು ಜನರ ಸಂಕಷ್ಟಗಳಿಗೆ ಸ್ಪಂದಿಸಿದ್ದಾರೆ. ಇತರ ಕೆಲವು ಪಕ್ಷಗಳ, ಸಂಘಸಂಸ್ಥೆಗಳ ನಾಯಕರು ಸಾಹು ಅವರ ಹೋರಾಟದೊಡನೆ ಕೈಜೋಡಿಸಿದ್ದಾರೆ. ಸಾಹು ಅವರ ವಿರುದ್ಧ ಒರಿಸ್ಸಾ ಸರ್ಕಾರ ೪೮ ಮೊಕದ್ದಮೆಗಳನ್ನು ಹೂಡಿದೆ. ಒಂದು ವರ್ಷ ಜೈಲುವಾಸದ ಅನುಭವವಿದೆ. ೪ ವರ್ಷ ಭೂಗತರಾಗಿದ್ದರು ಸಾಹು. ಇವರಂತೆ ಸಾವಿರಾರು ಜನರು ಪೊಲೀಸರ ದೌರ್ಜನ್ಯಕ್ಕೆ ತುತ್ತಾಗುತ್ತಿದ್ದಾರೆ. ಇದು ನವೀನ್ ಪಟ್ನಾಯಕ್ ಸರ್ಕಾರ ಪ್ರಜಾಪ್ರಭುತ್ವವಾದಿ ಚಳುವಳಿಗಳನ್ನು ನಿಯಂತ್ರಿಸುವ ವೈಖರಿ.




ಒರಿಸ್ಸಾ ಸರ್ಕಾರ ಜುಲೈ ೨೦೦೨ - ಮಾರ್ಚ್ ೨೦೧೧ರ ಅವಧಿಯಲ್ಲಿ ಭೂಸ್ವಾಧೀನ ಕಾಯಿದೆಯ ಪರಿಚ್ಛೇದ ೮೫ರ ಪ್ರಕಾರ ತುರ್ತು ಪರಿಸ್ಥಿತಿ ಘೋಷಿಸಿ ೮೫ ಪ್ರಕರಣಗಳಲ್ಲಿ ೪೯೬೭.೦೮ ಎಕರೆ ಖಾಸಗಿ ಭೂಮಿಯನ್ನು ವಶಪಡಿಸಿಕೊಂಡಿದೆ. ೯೦೧ ಕೋಟಿ ಬೆಲೆ ಬಾಳುವ ಈ ಭೂಮಿಗೆ ಸರ್ಕಾರ ಮಂಜೂರು ಮಾಡಿರುವ ಹಣ ೧೬೫ ಕೋಟಿ ರೂ.ಗಳು ಮಾತ್ರ. ಇದೇ ಬಗೆಯಲ್ಲಿ ೩೩೫ ಕೋಟಿ ರೂ.ಗಳಷ್ಟು ಬೆಲೆಬಾಳುವ ಭೂಮಿಯನ್ನು ೯೫.೮೪ ಕೋಟಿ ''ದಯಪಾಲಿಸಿ'' ಆದಿತ್ಯ ಅಲ್ಯೂಮಿನಿಯಂ ಕಂಪನಿಗೆ ನೀಡಲಾಗಿದೆ. ಅದೇ ರೀತಿ ಸಂಬಾಲ್‌ಪುರದಲ್ಲಿ ಸ್ಥಾಪಿಸಿರುವ ಭೂಷಣ್ ಪವರ್ ಆ್ಯಂಡ್ ಸ್ಟೀಲ್ ಕಂಪನಿಗೆ ಯಕಃಶ್ಚಿತ್ ೧೬.೩೫ ಕೋಟಿ ರೂ.ಗಳನ್ನು ರೈತರಿಗೆ ಕೊಟ್ಟು ೬೦೮.೬೭ ಎಕರೆ ಭೂಮಿಯನ್ನು ಮಂಜೂರು ಮಾಡಲಾಗಿದೆ. ಮಾರುಕಟ್ಟೆಯಲ್ಲಿ ಅದರ ಬೆಲೆ ಸುಮಾರು ೩೦೦ ಕೋಟಿ ರೂ.ಗಳು. ಒರಿಸ್ಸಾ ಸರ್ಕಾರದ ''ಔದಾರ್ಯ''ದ ಲಾಭ ಗಿಟ್ಟಿಸಿಕೊಂಡಿರುವ ಇತರ ಕಂಪನಿಗಳೆಂದರೆ ವೇದಾಂತ ಅಲ್ಯೂಮಿನಿಯಂ ಮತ್ತು ಧರ್ಮ ಪೋರ್ಟ್ ಲಿಮಿಟೆಡ್. ಇವೆಲ್ಲವನ್ನು ಹಿಂದೆ ಹಾಕಿ ದಾಖಲೆ ಸೃಷ್ಟಿಸಿದೆ ಪೋಸ್ಕೊ ಸ್ಟೀಲ್ ಕಂಪನಿ.

ಭಾರತದಂತಹ ಒಂದು ಸ್ವತಂತ್ರ ಹಾಗೂ ಪ್ರಜಾಪ್ರಭುತ್ವವಾದಿ ರಾಷ್ಟ್ರದಲ್ಲಿ ಸಾರ್ವಜನಿಕ ಮತ್ತು ಬಡಜನರ ಭೂಮಿ ಕಾಣಿಯನ್ನು, ಆಸ್ತಿಪಾಸ್ತಿಗಳನ್ನು ಖಾಸಗಿ ಕಂಪನಿಗಳು ದರೋಡೆ ಮಾಡಲು ಅವಕಾಶ ಮಾಡಿಕೊಡುತ್ತಿರುವ ಈ ನಮ್ಮ ಚುನಾಯಿತ ಜನಪ್ರತಿನಿಧಿಗಳಿಗೆ ಏನೆನ್ನಬೇಕು ? ನಮ್ಮ ಪ್ರಜಾಪ್ರಭುತ್ವ ವ್ಯವಸ್ಥೆ ಎತ್ತ ಸಾಗುತ್ತಿದೆ ? – ಎಂಬ ಪ್ರಶ್ನೆಗಳು ಪ್ರಜ್ಞಾವಂತ ಜನವಿಭಾಗಗಳನ್ನು ಕಾಡತೊಡಗಿವೆ.

ಸಮಾಧಾನಕರ ಸಂಗತಿಯೆಂದರೆ ರಾಷ್ಟ್ರೀಯ ಹಸಿರು ನ್ಯಾಯ ಮಂಡಳಿ, ಕೇಂದ್ರ ಲೆಕ್ಕಾಧಿಕಾರಿ ಇಲಾಖೆಯಂತಹ ಕೇಂದ್ರ ಸರ್ಕಾರಕ್ಕೆ ಸೇರಿದ ಸಂಸ್ಥೆಗಳು, ಎಲ್ಲೋ, ಒಂದೆರಡು ಲೋಕಾಯುಕ್ತ ಕಛೇರಿಗಳು ಅಕ್ರಮ ಭೂಸ್ವಾಧೀನ ಪ್ರಕ್ರಿಯೆಗಳನ್ನು, ಗಣಿಗಾರಿಕೆಯನ್ನು ಖಂಡಿಸಿ ಅವುಗಳ ವಿರುದ್ಧ ತೀರ್ಪು ನೀಡುತ್ತಿರುವುದು.

ಸಾರ್ವಜನಿಕ ಆಸ್ತಿಪಾಸ್ತಿಗಳ ಈ ಕೋಟಿ ಕೋಟಿ ಲಕ್ಷಗಳ ಲೂಟಿ ಒರಿಸ್ಸಾದಲ್ಲಿ ಮಾತ್ರವಲ್ಲ, ದೇಶದೆಲ್ಲೆಡೆ ಅಡೆತಡೆಯಿಲ್ಲದೆ ಸಾಗುತ್ತಿದೆ. ಈ ದಿಶೆಯಲ್ಲಿ ಪಕ್ಷ ಭೇದವಿಲ್ಲದೆ ಎಲ್ಲ ಬಂಡವಾಳಶಾಹಿ ವರ್ಗಗಳು, ಅವರನ್ನು ಪ್ರತಿನಿಧಿಸುವ ಪಕ್ಷಗಳ ರಾಜಕಾರಣಿಗಳು, ಅಧಿಕಾರಶಾಹಿ ನವ ಉದಾರೀಕರಣ ನೀತಿಗಳನ್ನು ಜಾರಿಗೆ ತರುವ ನೆಪದಲ್ಲಿ ಕೈ ಜೋಡಿಸುತ್ತಿದ್ದಾರೆ. ಈ ದಿಶೆಯಲ್ಲಿ ಒರಿಸ್ಸಾದ 'ಪೋಸ್ಕೊ ಪ್ರತಿರೋಧ್ ಸಂಗ್ರಾಮ್ ಸಮಿತಿ'ಯ ಹೋರಾಟ ಇಡೀ ದೇಶದ ವಂಚಿತ ಜನಸಮುದಾಯಕ್ಕೆ ಮಾದರಿಯಾಗಿದೆ. ದಕ್ಷಿಣ ಕೊರಿಯಾದ ಈ ಬಹುರಾಷ್ಟ್ರೀಯ ಸಂಸ್ಥೆ ಪೋಸ್ಕೊ ಕರ್ನಾಟಕದಲ್ಲೂ ಪ್ರವೇಶಿಸಲು ಎಲ್ಲ ರೀತಿಯ ಪ್ರತಿರೋಧದ ಮಧ್ಯೆಯೂ ಮತ್ತೆ ಮತ್ತೆ ಪ್ರಯತ್ನಿಸುತ್ತಿದೆ ಎನ್ನುವುದನ್ನು ಮರೆಯದಿರೋಣ.

**ಎಸ್. ಸುರೇಂದ್ರ**
ನಂ. ೨೪, ಕೆನರಾ ಬ್ಯಾಂಕ್ ಕಾಲನಿ, ೧ನೇ ಅಡ್ಡರಸ್ತೆ, ೩ನೇ ಬ್ಲಾಕ್, ಜಯನಗರ (ಪೂರ್ವ), ಬೆಂಗಳೂರು - ೧೧

# ಗ್ರಹಗಳ ಜೋಡಿಗಳು




**ಕ**ಳೆದ ತಿಂಗಳು ಸುದ್ದಿಯಲ್ಲಿದ್ದ ಶುಕ್ರಗ್ರಹ ಈಗ ಮುಂಜಾವಿನಲ್ಲಿ ಪೂರ್ವದಲ್ಲಿ ಕೋರೈಸತೊಡಗಿದೆ. ದಿನೇದಿನೇ ಮೇಲೇರುವ ಅದು ಗುರುಗ್ರಹದೊಡನೆ ಜೋಡಿಯಾಗಲಿದೆ. ಗುರುಗ್ರಹವೂ ಸಾಕಷ್ಟು ಪ್ರಕಾಶಮಾನವಾಗಿರುವುದರಿಂದ ಈ ಮಿಲನ ಕ್ಯಾಮರಾಗಳಿಗೆ ಆಹ್ವಾನ ನೀಡುತ್ತದೆ. ವೃಷಭ ರಾಶಿಯ ರೋಹಿಣಿ ಮತ್ತು ಕೃತ್ತಿಕಾ ನಕ್ಷತ್ರಗಳೂ ಇವುಗಳೊಡನೆ ಸೇರಿ ಗಮನ ಸೆಳೆಯುತ್ತವೆ. ೧೫ರಂದು ಬಾಲಚಂದ್ರ ಗುರುಗ್ರಹವನ್ನು ಮರೆಮಾಡುವ ಆಚ್ಛಾದನೆ ನಡೆಯಲಿದೆ. ಆದರೆ ನಮಗೆ ಅದು ಕಾಣಿಸದು. ಈ ಮೂರೂ ಕಾಯಗಳ ಪುಟ್ಟ ಗುಂಪು ಕಣ್ಣುಗಳಿಗೆ ಹಬ್ಬವಾಗಲಿದೆ. ತೆಳ್ಳನೆಯ ಮೋಡವಿದ್ದರೂ ಈ ಗ್ರಹಗಳನ್ನು ಕಾಣುವ ಸಾಧ್ಯತೆ ಇದೆ.

ಸಂಜೆಯ ಆಕಾಶದಲ್ಲಿ ಇನ್ನೊಂದು ಮಿಲನ ನಡೆಯುವುದರಲ್ಲಿದೆ. ಈ ಗ್ರಹಗಳು ಮಂಗಳ ಮತ್ತು ಶನಿ. ಸನಿಹದಲ್ಲಿ ಚಿತ್ರಾ ನಕ್ಷತ್ರವೂ ಇರುತ್ತದೆ. ಇವು ಅಷ್ಟೇನೂ ಪ್ರಕಾಶವಿಲ್ಲದಿದ್ದರೂ ಮಿನುಗುವುದಿಲ್ಲವಾದ್ದರಿಂದ ಪತ್ತೆಮಾಡಬಹುದು. ೨೫ರಂದು ಚಂದ್ರ ಇವುಗಳ ಜೊತೆ ಕೂಡಿದಾಗ ಗುರುತಿಸುವುದು ಸುಲಭವಾಗುವುದು.

ಹೀಗೆ ಸಂಜೆಗೆ ಎರಡು ಮುಂಜಾವಿಗೆ ಎರಡು ಗ್ರಹಗಳು ಸಮವಾಗಿ ಹಂಚಿಕೆಯಾಗಿವೆ ಎಂದ ಮೇಲೆ ಬರಿಗಣ್ಣಿಗೆ ಕಾಣುವ ಐದನೆಯ ಗ್ರಹ ಎಲ್ಲಿ, ಎಂಬ ಪ್ರಶ್ನೆ ಏಳುವುದು. ಈ ಬುಧ ಗ್ರಹವನ್ನು ನೋಡುವುದು ಯಾವಾಗಲೂ ಕಷ್ಟವೇ ಆದರೂ ಈ ತಿಂಗಳ ಮೊದಲನೆಯ ದಿನ ಅದನ್ನು ನೋಡಲು ಸಂಜೆ ಒಳ್ಳೆಯ ಅವಕಾಶವಿದೆ. ಅಂದು ಗರಿಷ್ಠ ಎತ್ತರದಲ್ಲಿ ಕಾಣುವುದು. ಮೊದಲ ವಾರದಲ್ಲಿ ಅದು ಸಂಜೆ ಸ್ವಲ್ಪ ಹೊತ್ತು ಕಾಣುವುದು. ಆಮೇಲೆ ಅದು ದಿಗಂತದ ಅಂಚಿಗೆ ಸರಿದು ಕ್ರಮೇಣ ಕಾಣದಂತಾಗುವುದು. ೨೦ರಂದು ಚಂದ್ರ ಅದನ್ನು ತಾಗಿಕೊಂಡು ಹೋಗುವ ವೈಶಿಷ್ಟ್ಯಪೂರ್ಣ ಘಟನೆ ನಡೆಯಲಿದೆ. ಆದರೆ ಅದು ನಮಗೆ ಕಾಣುವುದಿಲ್ಲ. ಸೂರ್ಯನನ್ನು ಹಾದುಹೋಗುವ ಘಟನೆ (ಯುತಿ) ೨೮ರಂದು ನಡೆಯಲಿದೆ.



ಜುಲೈ ೧ರಂದು ರೋಹಿಣಿ, ಶುಕ್ರ, ಗುರು, ಕೃತ್ತಿಕಾ

ಮೋಡಗಳ ನಡುವೆ ಕ್ಷೀಣ ಪುಂಜಗಳನ್ನು ಗುರುತಿಸುವುದು ಕಷ್ಟವೇ ಆಗಬಹುದು. ಆದರೂ ಸಂಜೆ ಧನು, ವೃಶ್ಚಿಕ ರಾಶಿಗಳನ್ನು ನೋಡಲು ಇದೇ ಸದವಕಾಶ. ಹೆಸರಿಗೆ ಒಪ್ಪುವಂತೆ ಇರುವ ವಿನ್ಯಾಸ ಈ ಪುಂಜದ್ದು ಮಾತ್ರ. ಜುಲೈ ೩ರ ಹುಣ್ಣಿಮೆಯಂದು ಧನು ರಾಶಿಯಲ್ಲಿ ಚಂದ್ರ ಕಾಣುವುದು. ಈಶಾನ್ಯದಲ್ಲಿ ವೀಣಾ (ಲೈರಾ) ಪುಂಜದಲ್ಲಿ ಅಭಿಜಿತ್ (ವೇಗಾ) ನಕ್ಷತ್ರ ಮತ್ತು ಗರುಡ (ಆಕ್ವಿಲಾ)ದಲ್ಲಿ ಶ್ರವಣ (ಆಲ್ಟೇರ್), ರಾಜಹಂಸ (ಸಿಗ್ನಸ್)ನಲ್ಲಿ ಡೆನೆಬ್ - ಈ ಮೂರು ನಕ್ಷತ್ರಗಳ ತ್ರಿಕೋಣ ಕಾಣುವುದು. ಸಪ್ತರ್ಷಿ ಮಂಡಲ ಮತ್ತು ಸುಯೋಧನ (ಡ್ರಾಕೋ) ಉತ್ತರದಲ್ಲಿ ಕಾಣುವುವು. ದಕ್ಷಿಣದಲ್ಲಿ ಕಾಣುವುದು ತ್ರಿಶಂಕು (ಕ್ರಕ್ಸ್). ಅದರ ಪಕ್ಕದಲ್ಲಿ ಎರಡು ಪ್ರಕಾಶಮಾನ ಚುಕ್ಕೆಗಳು ಕಿನ್ನರ (ಸೆಂಟಾರಸ್) ಪುಂಜದ ಆಲ್ಫಾ ಮತ್ತು ಬೀಟಾ. ಆಕಾಶಗಂಗೆಯನ್ನು ನೋಡಲು ಈ ತಿಂಗಳು ಒಳ್ಳೆಯ ಅವಕಾಶವಿದೆ. ಧನು, ವೃಶ್ಚಿಕ ರಾಶಿಯ ಭಾಗವನ್ನು ಶುಭ್ರ ಆಕಾಶದ ಅವಕಾಶ ದೊರಕಿದಾಗ ತಪ್ಪದೇ ನೋಡಿ. ದುರ್ಬೀನು, ದೂರದರ್ಶಕಗಳಿಂದ ನೋಡಿದಲ್ಲಿ ಸಹಸ್ರಾರು ನಕ್ಷತ್ರಗಳ ದಟ್ಟಣೆ ಕಾಣುತ್ತದೆ. ಇದರ ತುಸು ಉತ್ತರಕ್ಕಿರುವ ಹರ್‌ಕ್ಯುಲಿಸ್ (ಭೀಮ) ಪುಂಜದಲ್ಲಿ ಹೀಗೆ ದಟ್ಟಣೆ ಇಲ್ಲ, ಆದರೆ ದಕ್ಷಿಣದ ಕಿನ್ನರ, ತ್ರಿಶಂಕುಗಳಲ್ಲಿ ಅಸಂಖ್ಯಾತ ನಕ್ಷತ್ರಗಳು, ನೆಬ್ಯುಲಗಳು ಕಾಣುತ್ತವೆ. ಆಕಾಶಗಂಗೆ ಎಂಬ ನದಿ ಹೀಗೆ ವೃಶ್ಚಿಕದಿಂದ ದಕ್ಷಿಣದ ಅಂಚಿನಲ್ಲೇ ಕಿನ್ನರ ತ್ರಿಶಂಕುಗಳ ಮೂಲಕ ಹರಿಯುವಂತೆ ಕಾಣುತ್ತದೆ.

ಈ ತಿಂಗಳಲ್ಲಿ ಉಲ್ಕಾವೃಷ್ಟಿ ಇದೆ. ತಿಂಗಳ ಕೊನೆಗೆ ೨೮-೨೯ರಂದು ಕುಂಭರಾಶಿಯಿಂದ ಹೊರಟಂತೆ ಕಾಣುವ ಉಲ್ಕೆಗಳಿಗೆ ಡೆಲ್ಟಾ ಅಕ್ವಾರಿಡ್ಸ್ ಎಂಬ ಹೆಸರಿದೆ. ಮುಂಜಾವಿನಲ್ಲಿ ಗಂಟೆಗೆ ಸುಮಾರು ೨೦ ಉಲ್ಕೆಗಳು ಬೀಳುವುವು.

ಜುಲೈ ೫ರಂದು ಭೂಮಿ ಸೂರ್ಯನಿಂದ ಗರಿಷ್ಠ ದೂರದಲ್ಲಿರುತ್ತದೆ. ದೂರದ ಈ ವ್ಯತ್ಯಾಸ ಸಣ್ಣದು; ಬರಿಗಣ್ಣಿಗೆ ಗೋಚರಿಸುವಂತಹುದಲ್ಲ. ಸೂರ್ಯ ನಮಗೆ ದೂರ ಇರುವಾಗ ಬೇಸಿಗೆ ಎಂದಾಯಿತಲ್ಲವೇ ? ಋತುಮಾನಗಳಿಗೆ ದೂರದ ವ್ಯತ್ಯಾಸ ಕಾರಣವಲ್ಲ ಎಂದು ಹೀಗೆ ಪರೋಕ್ಷವಾಗಿ ತಿಳಿಯಬಹುದು.

ಉ

ಸುಯೋಧನ

ಸಪ್ತರ್ಷಿ ಮಂಡಲ

ವೀಣಾ

ಭೀಮ

ಪೂ

ಸ್ವಾತಿ

ಸಿಂಹ

ಬುಧ

ಪ

ಉರಗಧರ

ಮಂಗಳ

ಕನ್ಯಾ

ಶನಿ

ಚಿತ್ರಾ

ಹಸ್ತ

ತುಲಾ

ಧನು

ವೃಶ್ಚಿಕ

ಕಿನ್ನರ

ತ್ರಿಶಂಕು

ದ

**ಖಗೋಳ ದಿನಚರಿ**

ಜುಲೈ ೧ ಬುಧಗ್ರಹದ ಗರಿಷ್ಠ ಕೋನೋನ್ನತಿ*

ಚಂದ್ರ - ಭೂಮಿ ನಡುವೆ ಕನಿಷ್ಠ ಅಂತರ

೪ ಹುಣ್ಣಿಮೆ ೦೦:೨೨ಕ್ಕೆ

೫ ಭೂಮಿ - ಸೂರ್ಯರ ನಡುವೆ ಗರಿಷ್ಠ ಅಂತರ

೯ ರೋಹಿಣಿ - ಶುಕ್ರ ಜೋಡಿ*

೧೧ ಚಾಂದ್ರಮಾಸದ ಕೊನೆಯ ಪಾದ

೧೩ ಚಂದ್ರ - ಭೂಮಿ ನಡುವೆ ಗರಿಷ್ಠ ಅಂತರ

೧೪ ಬುಧ ಗ್ರಹದ ಹಿನ್ನಡೆ ಆರಂಭ

೧೫ ಗುರು - ಚಂದ್ರ ಜೋಡಿ (ಆಚ್ಛಾದನೆ ಕಾಣುವುದಿಲ್ಲ)

ಶುಕ್ರ - ಚಂದ್ರ ಜೋಡಿ*

೧೯ ಅಮಾವಾಸ್ಯೆ ೦೯:೫೪ಕ್ಕೆ

೨೦ ಬುಧ - ಚಂದ್ರ ಜೋಡಿ

೨೫ ಶನಿ - ಚಂದ್ರ - ಮಂಗಳ - ಚಿತ್ರಾ - ಇವುಗಳ ಪುಟ್ಟಗುಂಪು*

೨೬ ಚಾಂದ್ರಮಾಸದ ಮೊದಲ ಪಾದ

೨೮ ಬುಧ ಗ್ರಹದ ಯುತಿ

೨೯ ಚಂದ್ರ - ಭೂಮಿ ನಡುವೆ ಕನಿಷ್ಠ ಅಂತರ

(* ಛಾಯಾಗ್ರಹಣಕ್ಕೆ ಉತ್ತಮ ಅವಕಾಶ)

**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್
ಬೆಂಗಳೂರು - ೫೬೦ ೦೦೧

# ಮಕ್ಕಳ ಸಾಹಿತ್ಯದಲ್ಲಿ ಶಾಂತಿ ಮತ್ತು ಸೌಹಾರ್ದತೆ

ಎಂ. ಡಿ. ಗೋಗೇರಿ

**ಹೇಗೆ ಪರಿಶುದ್ಧವಾದ ಬಿಳಿ ಬಟ್ಟೆಯ ಮೇಲೆ ಅಂದವಾದ ನಿಸರ್ಗದ ಚಿತ್ರವನ್ನು, ಪ್ರಾಣಿಗಳ ಚಿತ್ರವನ್ನು, ಸುಂದರವಾದ ಕವನಗಳನ್ನು ಬರೆಯಬಹುದೊ, ಹಾಗೆಯೇ ಇದಕ್ಕೆ ವ್ಯತಿರಿಕ್ತವಾಗಿ ಅದೇ ಬಿಳಿಬಟ್ಟೆಯ ಮೇಲೆ ಕೆಟ್ಟ ಕೆಟ್ಟ ಚಿತ್ರಗಳನ್ನು ಬರೆದು ಬಟ್ಟೆಯ ಶುದ್ಧತೆಯನ್ನು ಕೆಡಿಸಬಹುದು. ಇಲ್ಲವೆ ಬಟ್ಟೆಯ ತುಂಬ ಮಲಿನವಾದ ರೊಜ್ಜು ಸುರುವಿ ಬಿಳಿ ಬಟ್ಟೆಯ ಅಸ್ತಿತ್ವವನ್ನೇ ಹಾಳುಮಾಡಬಹುದು. ಅಂತೆಯೇ ಬಿಳಿಬಟ್ಟೆಯಂತಿರುವ ಮಕ್ಕಳ ಮನಸ್ಸಿನ ಮೇಲೆ ನಾವು ಯಾವ ಉತ್ತಮ ನಡೆ-ನುಡಿಗಳನ್ನು ಬಿತ್ತುತ್ತೇವೆಯೋ ಅದೇ ನಡೆ-ನುಡಿಗಳನ್ನು ತಮ್ಮ ಮುಂದಿನ ಬಾಳಿನಲ್ಲಿ ಅಳವಡಿಸಿಕೊಂಡು ಆದರ್ಶ ವ್ಯಕ್ತಿಗಳಾಗುತ್ತಾರೆ.**



ಮುಗ್ಧ ಕುತೂಹಲಗಳಿಂದ ಸುತ್ತಲಿನ ಆಗುಹೋಗುಗಳನ್ನು ನೋಡುತ್ತಿರುವಂಥ ಮಕ್ಕಳು. ಅದೇ ಆಗ ಅರಳಿದ ಹೂವಿನಂತೆ ಮಧುರ ಮಕರಂದ ಸೂಸುತ್ತಿರುತ್ತಾರೆ. ಶುಭ್ರವಾದ ಬಿಳಿ ಬಟ್ಟೆಯಂತೆ ಹೊಳೆಯುತ್ತಿರುತ್ತಾರೆ. ತಂದೆ-ತಾಯಿ, ಬಂಧು-ಬಳಗದವರ ಮಾತುಗಳನ್ನು ಕಿವಿಗೊಟ್ಟು ಕೇಳುತ್ತಾರೆ. ಅವರ ನಡತೆಯನ್ನು ಗಮನವಿಟ್ಟು ನೋಡುತ್ತಾರೆ. ಕಲಿಸುವ ಗುರುಗಳಿಗೆ ವಿಧೇಯರಾಗಿ ಅವರು ಹೇಳಿದ್ದೇ ವೇದವಾಕ್ಯವೆಂದು ನಂಬುತ್ತಾರೆ. ಅವರ ವರ್ತನೆಗಳನ್ನೇ ಆದರ್ಶವೆಂದು ಅನುಕರಿಸಲು ಪ್ರಯತ್ನಿಸುತ್ತಾರೆ. ಇದಲ್ಲದೆ, ಮಕ್ಕಳಲ್ಲಿ ಮುಗ್ಧತೆಯೊಂದೇ ಇರುವುದಿಲ್ಲ. ಚಂಚಲತೆಯೂ ಆಟವಾಡುತ್ತಿರುತ್ತದೆ. ಹಾಗೆಯೇ ಹಟಮಾರಿತನವೂ ಪೈಪೋಟಿ ನಡೆಸುತ್ತದೆ. ಇವೆಲ್ಲವುಗಳ ಮೊತ್ತವೇ ಬಾಲ್ಯ. ಸುಕುಮಾರತನ, ಬಾಳು ಕಟ್ಟಿಕೊಳ್ಳುವ ಬುನಾದಿ ಸ್ಥಲವೆಂದು ಮಕ್ಕಳನ್ನು ಕುರಿತು ಹೇಳಬಹುದು.

ಹೇಗೆ ಪರಿಶುದ್ಧವಾದ ಬಿಳಿ ಬಟ್ಟೆಯ ಮೇಲೆ ಅಂದವಾದ ನಿಸರ್ಗದ ಚಿತ್ರವನ್ನು, ಪ್ರಾಣಿಗಳ ಚಿತ್ರವನ್ನು, ಸುಂದರವಾದ ಕವನಗಳನ್ನು ಬರೆಯಬಹುದೊ, ಹಾಗೆಯೇ ಇದಕ್ಕೆ ವ್ಯತಿರಿಕ್ತವಾಗಿ ಅದೇ ಬಿಳಿಬಟ್ಟೆಯ ಮೇಲೆ ಕೆಟ್ಟ ಕೆಟ್ಟ ಚಿತ್ರಗಳನ್ನು ಬರೆದು ಬಟ್ಟೆಯ ಶುದ್ಧತೆಯನ್ನು ಕೆಡಿಸಬಹುದು. ಇಲ್ಲವೆ ಬಟ್ಟೆಯ ತುಂಬ ಮಲಿನವಾದ ರೊಜ್ಜು ಸುರುವಿ ಬಿಳಿ ಬಟ್ಟೆಯ ಅಸ್ತಿತ್ವವನ್ನೇ ಹಾಳು ಮಾಡಬಹುದು. ಅಂತೆಯೇ ಬಿಳಿಬಟ್ಟೆಯಂತಿರುವ ಮಕ್ಕಳ ಮನಸ್ಸಿನ ಮೇಲೆ ನಾವು ಯಾವ ಉತ್ತಮ ನಡೆ-ನುಡಿಗಳನ್ನು ಬಿತ್ತುತ್ತೇವೆಯೋ ಅದೇ ನಡೆ-ನುಡಿಗಳನ್ನು ತಮ್ಮ ಮುಂದಿನ ಬಾಳಿನಲ್ಲಿ ಅಳವಡಿಸಿಕೊಂಡು ಆದರ್ಶ ವ್ಯಕ್ತಿಗಳಾಗುತ್ತಾರೆ. ಶಾಂತಿ, ಸಮತೆ, ಭಾವೈಕ್ಯತೆಯನ್ನು ಮೈಗೂಡಿಸಿಕೊಳ್ಳುತ್ತಾರೆ. ರಾಷ್ಟ್ರ ಪ್ರೀತಿ, ನಾಡು, ನುಡಿ ಬಗ್ಗೆ ಅಭಿಮಾನ ಬೆಳೆಸಿಕೊಳ್ಳುತ್ತಾರೆ. ಮಾನವರೆಲ್ಲ ಒಂದು ಎಂಬ ಏಕತಾ ಮನೋಭಾವನೆಯನ್ನು ತಾಳುತ್ತಾರೆ. ಪರಸ್ಪರ ಬದುಕಿನಲ್ಲಿ ಸೌಹಾರ್ದತೆ ಔದಾರ್ಯಗಳೇ ಬಾಳಿನ ಜೀವಾಳವೆಂದು ತಿಳಿಯುತ್ತಾರೆ. ಇಂತಹ ಮಕ್ಕಳೇ ಸುಖೀ ಸಮಾಜದ ಅಡಿಗಲ್ಲಾಗಿ ನಿಲ್ಲುತ್ತಾರೆ.

'ಮಗು ಪರಿಸರದ ಕೂಸು' ಎಂದು ಸಮಾಜವಿಜ್ಞಾನದ ತಜ್ಞರು ಹೇಳುತ್ತಾರೆ. ಇದು ಬಹುಪಾಲು ಸತ್ಯವೇ ಆಗಿರುತ್ತದೆ. ಮಕ್ಕಳ ಮೇಲೆ ಅವರು ಹುಟ್ಟಿ ಬೆಳೆಯುವ ಪರಿಸರದ ಪ್ರಭಾವ ದಟ್ಟವಾಗಿ ಆವರಿಸಿಕೊಳ್ಳುತ್ತದೆ. ಮನೆಯಲ್ಲಿ ಹಾಗೂ ಶಾಲೆಯಲ್ಲಿ ಯಾವ ವಾತಾವರಣ ಇರುತ್ತದೆಯೋ ಆಯಾ ವಾತಾವರಣಕ್ಕೆ ಹೊಂದಿಕೊಂಡು ಮಕ್ಕಳು ಬೆಳೆಯುತ್ತಾರೆ. ಮಗು ಜೀವಿಸುವ ಮುಖ್ಯವಾದ ಪರಿಸರಗಳೆಂದರೆ ಮನೆ ಮತ್ತು ಶಾಲೆ. ಈ ಪರಿಸರಗಳಲ್ಲಿ ಅಕ್ಷರಾಭ್ಯಾಸದೊಂದಿಗೆ ಸಂಗೀತ, ಸಾಹಿತ್ಯ, ನಾಟಕ ಮುಂತಾದ ಸಾಂಸ್ಕೃತಿಕ ಚಟುವಟಿಕೆಗಳು ಜರುಗುತ್ತಿದ್ದರೆ ಆಯಾ ಮಕ್ಕಳು ನಿಧಾನವಾಗಿ ಸಾಹಿತ್ಯ, ಸಂಗೀತದಲ್ಲಿ ಆಸಕ್ತರಾಗುತ್ತಾರೆ. ಕಥೆ, ಕವನ, ನಾಟಕಗಳು ಬೋಧಿಸುವ ಮಾನವೀಯತೆ, ಶಾಂತಿ, ಭಾವಕ್ಯತೆ, ಸೌಹಾರ್ದತೆಗಳಿಗೆ ಸ್ಪಂದಿಸುತ್ತಾರೆ. ದಯೆ ಅಂತಃಕರಣಗಳನ್ನು ಅವಳವಡಿಸಿಕೊಳ್ಳುತ್ತಾರೆ. ಸಹಾಯ ಸಹಕಾರ ಗುಣಗಳನ್ನು ಬೆಳೆಸಿಕೊಳ್ಳುತ್ತಾರೆ. ಅವು ನೀಡುವ ಸಂದೇಶಗಳಿಗೆ ಮಾರುಹೋಗುತ್ತಾರೆ. ಇಂತಹ ಮಾನವೀಯ ಮೌಲ್ಯಗಳನ್ನು ಆವಾಹಿಸಿಕೊಂಡು ಬೆಳೆದ ಮಕ್ಕಳು ಪ್ರೌಢರಾದ ಮೇಲೆ



ಶಾಂತಿಯ ನೇತಾರರಾಗುತ್ತಾರೆ. ಜನಸಮೂಹದಲ್ಲಿ ಸೌಹಾರ್ದತೆಯ ಕೊಂಡಿಯಾಗಿ ಬಾಳುತ್ತಾರೆ. ಇಂತಹ ಮೌಲ್ಯಗಳು ಮಕ್ಕಳಲ್ಲಿ ಮೊಳೆತು ಬೆಳೆಯಲು ಸಾಹಿತ್ಯವೇ ಮೂಲ ಸೆಲೆಯಾಗಿರುತ್ತದೆ.

ದೇವರು ಮನುಷ್ಯನಿಗೆ ಕೊಟ್ಟ ಅತ್ಯಂತ ಅಮೂಲ್ಯವಾದ ವಸ್ತು ಎಂದರೆ ವಿವೇಕ. 'ಇದು ಒಳ್ಳೆಯದು, ಅದು ಕೆಟ್ಟದ್ದು', 'ಇದು ಸತ್ಯ, ಅದು ಅಸತ್ಯ', 'ಇದು ಮಾನವೀಯತೆ, ಅದು ಅಮಾನವೀಯತೆ' – ಇಂತಹ ಭಿನ್ನತೆಗಳನ್ನು ತಿಳಿಯುವ ವಿಚಾರಶಕ್ತಿಯನ್ನು ಮಾನವನು ಪಡೆದಿದ್ದಾನೆ. ಒಂದೊಂದು ಸಂದರ್ಭದಲ್ಲಿ ಈ ವಿವೇಕವು ಅವಿವೇಕತನಕ್ಕೂ ಇಳಿಯುತ್ತದೆ. ಹೀಗೆ ಅವಿವೇಕವನ್ನು ಹೋಗಲಾಡಿಸಿ ವಿವೇಕತ್ವಕ್ಕೆ ಒಯ್ಯುವುದೇ ಸಾಹಿತ್ಯದ ಮುಖ್ಯ ಗುರಿಯಾಗಿರುತ್ತದೆ.

೧೦ನೇ ಶತಮಾನದಲ್ಲಿದ್ದ ಕನ್ನಡದ ಆದಿಕವಿ ಪಂಪನು ಒಂದು ಮಾತು ಹೇಳುತ್ತಾನೆ. ಅದು ಚಿಕ್ಕ ಮಕ್ಕಳಿಗೂ ತಿಳಿಯುವಂತಿದೆ: ''ಮಾನವ ಕುಲಂ ಒಂದೆಯಲ್ತೆ'' ಮಾನವರೆಲ್ಲರೂ ಒಂದೇ ಕುಲದವರು. ಮಾನವರಲ್ಲಿ ಮೇಲು-ಕೀಳುಗಳಿಲ್ಲ. ಆದರೆ ನಾವಿಂದು ಕುಲದ ಜಾಲದಲ್ಲಿ ಬಿದ್ದು ತೊಳಲಾಡುತ್ತೇವೆ. ಬಿರುಕು-ಒಡಕುಗಳಲ್ಲಿ ಸಿಲುಕಿ ಇಂದಿಗೂ ಬಳಲತೊಡಗಿದ್ದೇವೆ. ಪಂಪನ ಈ ಮಾತನ್ನು ಹಾಗೂ ಆಶಯವನ್ನು ಮಕ್ಕಳು ಅರಿತುಕೊಂಡರೆ ಅವರನ್ನು ಜಾತಿಯ ಜಾಲವು ಸುತ್ತಿಕೊಳ್ಳುವುದು ಸಾಧ್ಯವಾಗುವುದಿಲ್ಲ. ಮಕ್ಕಳ ಮನಸ್ಸಿನಿಂದ ಮೇಲು-ಕೀಳುಗಳೆಂಬ ಸಂಕೋಲೆಗಳನ್ನು ಕಿತ್ತುಹಾಕಿ ಶಾಂತಿ ಸೌಹಾರ್ದತೆಯನ್ನು ನೆಲೆಗೊಳಿಸುವಂತಹ ಸಾಹಿತ್ಯವನ್ನು ಪಂಪನಂತೆ ನೂರಾರು ಕವಿ, ಸಾಹಿತಿಗಳು ಮಕ್ಕಳಿಗಾಗಿ ಒದಗಿಸಿಕೊಟ್ಟಿದ್ದಾರೆ.

೧೬ನೇ ಶತಮಾನದಲ್ಲಿ ಕರ್ನಾಟಕದ ಹಿರೇಕೆರೂರ ತಾಲೂಕಿನ ಬಾಡ ಗ್ರಾಮದಲ್ಲಿ ಹುಟ್ಟಿದ ಕವಿ ಸರ್ವಜ್ಞನು ತನ್ನ ಮೂರು ಸಾಲಿನ ಕವಿತೆಗಳಲ್ಲಿ ಸಮಾಜದ ಅಂಕುಡೊಂಕುಗಳನ್ನು ತೀವ್ರವಾಗಿ ಖಂಡಿಸಿ ಸೌಹಾರ್ದತೆಯನ್ನು ಸಾರುತ್ತ ಕರ್ನಾಟಕದ ತುಂಬ ಸಂಚರಿಸಿದ್ದು ಕಂಡುಬರುತ್ತದೆ. ಅವನ ವಚನಗಳು ಇಂದಿಗೂ ಮಕ್ಕಳ ಬಾಯಲ್ಲಿ ನಲಿಯುತ್ತವೆ. ಸಮಾನತೆ ಮತ್ತು ಶಾಂತಿಯನ್ನು ಹೃದಯಕ್ಕೆ ಇಳಿಸುತ್ತವೆ.

*ಉದಾಹರಣೆ : ನಡೆಯುದೊಂದೇ ಭೂಮಿ*
*ಕುಡಿಯುದೊಂದೇ ನೀರು*
*ಸುಡುವಗ್ನಿ ಒಂದೆ ಇರುತಿರಲು ಕುಲಗೋತ್ರ*
*ನಡುವೆ ಎತ್ತಣದು ? ಸರ್ವಜ್ಞ*

*ಯಾತರದು ಹೂವೇನು ?*
*ನಾತರದು ಸಾಲದೆ ?*
*ಜಾತಿ ವಿಜಾತಿ ಎನಬೇಡ*
*ದೇವನೊಲಿದಾತನೇ ಜಾತ ಸರ್ವಜ್ಞ*

– ಸರ್ವಜ್ಞನ ವಚನಗಳು, ಪುಟ-೨೮ ಸಂ. ಭೀಮಭಟ್ಟ ಪೂಜಾರ, ಗದಗ

**ನನಗೇಕೆ ಕತ್ತಲಿಲ್ಲ...**

ಇಡೀ ಜಗಕೆ,
ಕತ್ತಲೆಯೆ ತುಂಬಿಹೋದರೂ
ನನಗೆ ಕತ್ತಲಾಗುವುದೇ ಇಲ್ಲ
ಏಕೆಂದರೆ......
ನಿನ್ನ ನಗುಮೊಗದ
ಹೊಂಬೆಳಕೆ ಇರುತ್ತದಲ್ಲಾ

ಢಣಾಪುರ ಕೃಷ್ಣಮೂರ್ತಿ
೧೧೬, ಹಿರೇಹಳ್ಳಿ
ತುಮಕೂರು ತಾಲ್ಲೂಕು

– ಸರಳವಾದ ಪದಗಳೊಂದಿಗೆ ಗೇಯತೆಯನ್ನು ಒಳಗೊಂಡ ಈ ವಚನಗಳು ಸೌಹಾರ್ದವನ್ನು ಸಾರುತ್ತವಲ್ಲದೆ ಜಾತಿ-ಭೇದ ಎಣಿಸುವ ಮತಾಂಧ ಮನಸ್ಸುಗಳನ್ನು ಖಂಡಿಸುತ್ತವೆ. ಚಿಕ್ಕಮಕ್ಕಳು ಇಂತಹ ವಚನಗಳನ್ನು ಹಾಡುತ್ತ ಅವುಗಳ ಅಂತರಾರ್ಥಗಳನ್ನು ತಿಳಿಯುತ್ತ ಬೆಳೆದರೆ ಅವರೆಂದಿಗೂ ಸಮಾಜಕಂಟಕರಾಗುವುದಿಲ್ಲ. ಮನುಷ್ಯನ ಶ್ರೇಯಸ್ಸಿಗಾಗಿ, ಮಾನವ ಕುಲದ ಒಳಿತಿಗಾಗಿ ನಿಲ್ಲುವಂತಹ ಗುಣಗಳನ್ನು ಮಕ್ಕಳಲ್ಲಿ ಬೆಳೆಸುವ ಸಾಹಿತ್ಯವೇ ನಿಜವಾದ ಮಾನವೀಯ ಸಾಹಿತ್ಯ. ಅಂತಹ ಶ್ರೇಷ್ಠವಾದ ಸಂಸ್ಕಾರವನ್ನು ಮಕ್ಕಳಿಗೆ ಬಾಲ್ಯದಲ್ಲಿಯೇ ನೀಡಿದರೆ ಸೌಹಾರ್ದತೆಯ ವ್ಯಕ್ತಿಗಳಾಗುತ್ತಾರೆ. ಭಾವೈಕ್ಯತೆಯ ಶಕ್ತಿಗಳಾಗಿ ಸಮಾಜದಲ್ಲಿ ಶಾಂತಿಯನ್ನು ನೆಲೆಗೊಳಿಸುತ್ತಾರೆ.

ರಾಷ್ಟ್ರಕವಿ ಕುವೆಂಪುರವರು ರಚಿಸಿದ 'ಜಯ ಹೆ ಕರ್ನಾಟಕ ಮಾತೆ' ಎಂಬ ನಾಡಗೀತೆಯನ್ನು ಕರ್ನಾಟಕದ ಶಾಲಾ-ಕಾಲೇಜುಗಳಲ್ಲಿ ಮತ್ತು ಸಭೆ ಸಮಾರಂಭಗಳಲ್ಲಿ ಪ್ರಾರ್ಥನೆಯ ರೂಪದಲ್ಲಿ ಪ್ರತಿದಿನ ಮಕ್ಕಳು ಹಾಡುತ್ತಾರೆ. ಕವಿ ಕುವೆಂಪುರವರು ಕವಿತೆಯ ಪ್ರತಿ ಸಾಲುಗಳಲ್ಲಿ ಶಾಂತಿ ಮತ್ತು ಸೌಹಾರ್ದತೆಯನ್ನು ತುಂಬಿರುತ್ತಾರೆ :

*ಸರ್ವಜನಾಂಗದ ಶಾಂತಿಯ ತೋಟ*
*ರಸಿಕರ ಕಂಗಳ ಸೆಳೆಯುವ ನೋಟ*
*ಹಿಂದು ಕ್ರೈಸ್ತ ಮುಸಲ್ಮಾನ*
*ಪಾರಸಿಕ ಜೈನರುದ್ಯಾನ*

– ಕುವೆಂಪು, ಪಠ್ಯಪುಸ್ತಕ ೫ನೇ ವರ್ಗ ಪುಟ-೧

– ನಮ್ಮ ನಾಡಿನಲ್ಲಿ ನಮ್ಮ ಭಾರತ ದೇಶದಲ್ಲಿ ಬಾಳುವಂಥ ಸಕಲ ಧರ್ಮದ ಜನರು ಶಾಂತಿಯಿಂದ, ಸೌಹಾರ್ದತೆಯಿಂದ ಬಾಳುತ್ತಾರೆ. ಬಗೆ ಬಗೆಯ ಸಸ್ಯಗಳಿಂದ, ಹೂಗಳಿಂದ ಅಂದವಾಗಿ ಕಾಣುವ ತೋಟದಂತೆ ಈ ನಮ್ಮ ನಾಡು ಸರ್ವಜನಾಂಗದ ಉದ್ಯಾನದಂತಿದೆ ಎಂಬುದು ಕವಿಯ ಸಂದೇಶವಾಗಿದೆ. ಇಂತಹ ಕವನಗಳನ್ನು ಮಕ್ಕಳು ಕಲಿಯುವುದರಿಂದ, ಪಾಠ ಮಾಡುವುದರಿಂದ ಪರಿಶುದ್ಧ ಹೃದಯವಂತರಾಗುತ್ತಾರೆ. ಶಾಂತಿ ಸೌಹಾರ್ದತೆಗೆ ತಳಪಾಯವಾಗುತ್ತಾರೆ.

ಭಾವೈಕ್ಯತೆಯ ಕವಿ ಎಂದೇ ಹೆಸರು ಪಡೆದ ಎಂ. ಡಿ. ಗೋಗೇರಿ ಅವರ ಮಕ್ಕಳ ಕವನಗಳಲ್ಲಿ ಏಕತೆ ಮತ್ತು ಸೌಹಾರ್ದತೆ ಸಾರುವ ಹಲವಾರು ಕವನಗಳನ್ನು ಗಮನಿಸಬಹುದು :

*ಭಾಷೆ ಭಿನ್ನವಾದರೂ ಭಾವ ಒಂದು*
*ವೇಷ ನೂರಾದರೂ ಕಾಯ ಒಂದು*
*ನಾಮ ಸಾವಿರವಾದರೂ ದೈವ ಒಂದು*
*ಧರ್ಮ ಯಾವುದಾದರೂ ತತ್ವ ವಂದು*

– ಎಂ. ಡಿ. ಗೋಗೇರಿ, ಪುಟ್ಟನ ಪರಿಸರ, ಪುಟ-೯೯

– ಭಾಷೆ, ವೇಷ ಬೇರೆಯಾದರೂ ಅರಿತುಕೊಳ್ಳುವ ಭಾವ ಹಾಗೂ ವೇಷ ಧರಿಸುವ ದೇಹ ಒಂದೇ. ಧರ್ಮ ಮತ್ತು ದೇವರ ಹೆಸರು ಬೇರೆ ಇದ್ದರೂ ದೈವ ಹಾಗೂ ಧರ್ಮದ ತಿರುಳೂ ಒಂದೇ ಎಂಬ ಭಾವನೆ ಕವನದಲ್ಲಿ ಅಭಿವ್ಯಕ್ತಗೊಂಡಿದೆ. ಶ್ರೀ ಗೋಗೇರಿಯವರು ತಾವು ಹುಟ್ಟಿದ ದೇಶವನ್ನು ಅಭಿಮಾನದಿಂದ ನೆನೆಸುವುದು ಹೀಗೆ :

*ಈ ದೇಶ ನಮ್ಮದು ದೈವ ನಮ್ಮದು ನಾವೆಲ್ಲ ಒಂದು*
*ಈ ಭಾವ ಬಂದರೆ ಭಾರತಾಂಬೆಗೆ ಇಲ್ಲ ಯಾವ ಕುಂದು*
*ಜಾತಿ ಪಂಥಗಳನೆಲ್ಲವ ನಳಿಸಿ*
*ಪ್ರೀತಿ ಶಾಂತಿಗಳ ಬಾಳಲಿ ಬೆರೆಸಿ*
*ಮಮತೆಯಲ್ಲಿ ಸಿರಿ ಸಮತೆಯನರಿಸಿ*
*ಭಾರತ ಕಟ್ಟೋಣ ಖ್ಯಾತಿಯ ಕಳಸುವ ಮೆರೆಸೋಣ*

– ಪುಟ್ಟನ ಪರಿಸರ, ಪುಟ-೯೨

'ಕಾವ್ಯಾನಂದ' ಎಂಬ ಕಾವ್ಯನಾಮದಿಂದ ಪ್ರಸಿದ್ಧರಾದ ಸಿದ್ಧಯ್ಯ ಪುರಾಣಿಕರು ಅನೇಕ ಮಕ್ಕಳ ಕವನಗಳನ್ನು ರಚಿಸಿದ್ದಾರೆ. 'ಏನಾದರೂ ಆಗು ಮೊದಲು ಮಾನವನಾಗು' ಎನ್ನುವ ಕವನ ಹಿರಿಯರಿಗೂ ಕಿರಿಯರಿಗೂ ಶಾಂತಿ ಸೌಹಾರ್ದತೆಯ ದೀಪ್ತಿಯಾಗಿ ಬೆಳಕು ನೀಡುತ್ತದೆ :

*ಓದಿ ಬ್ರಾಹ್ಮಣನಾಗು ಕಾದಿ ಕ್ಷತ್ರಿಯನಾಗು*
*ವಣಿಕ ರೈತನೆ ಆಗು ದುಡಿದು ಗಳಿಸಿ*
*ಏನಾದರೂ ಆಗು ನಿನ್ನೊಲವಿನಂತಾಗು*
*ಏನಾದರೂ ಸರಿಯೆ ಮೊದಲು ಮಾನವನಾಗು*

ಹಿಂದು ಮುಸ್ಲಿಮನಾಗು ಬೌದ್ಧ ಕ್ರೈಸ್ತನೆ ಆಗು
ಚಾರ್ವಾಕನೆ ಆಗು ಭೋಗ ಬಯಸಿ
ಏನಾದರೂ ಆಗು ಹಾರೈಸಿದಂತಾಗು
ಏನಾದರೂ ಸರಿಯೆ ಮೊದಲು ಮಾನವನಾಗು
ರಾಜಕಾರಣಿಯಾಗು, ಸಚಿವ ಸಂಸದನಾಗು
ಕಲೆಗಾರ ವಿಜ್ಞಾನಿ ಖ್ಯಾತ ವೈದ್ಯನೆ ಆಗು
ಏನಾದರೂ ಆಗು ನೀ ಬಯಸಿದಂತಾಗು
ಏನಾದರೂ ಸರಿಯೇ ಮೊದಲು ಮಾನವನಾಗು

– 'ಕಾವ್ಯಾನಂದರ ಕವಿತೆಗಳು' ಸಂ. ಶೈಲಜಾ, ಉಡಚಣ, ಪುಟ-೨೦೭



– ಕೇವಲ ಮೂರು ನುಡಿಯ ಈ ಪದ್ಯವು ಮಾನವೀಯತೆಯಿಂದ ಕೂಡಿದ ಮಾನವನಾಗು. ನಿನ್ನ ಆರಾಧನೆಗಳಿಂದ ಯಾವುದೇ ಧರ್ಮದವನಾಗಿರಲಿ, ಮೊದಲು ಮಾನವನಾಗು. ಅಂತಸ್ತು, ಸಂಪತ್ತು ಅವುಗಳೆಲ್ಲ ನಂತರದ ವಿಚಾರಗಳು. ಆದರೆ ಮೊದಲು ಮಾನವನಾಗು ಎಂದು ಕವಿ ಒತ್ತಾಯ ಮಾಡುತ್ತಾನೆ. ಇಂತಹ ಕವನಗಳನ್ನು ಮಕ್ಕಳು ಮನನ ಮಾಡಿಕೊಳ್ಳುವುದರಿಂದ, ಓದುವುದರಿಂದ, ಹಾಡುವುದರಿಂದ ಅವರಲ್ಲಿ ಮಾನವೀಯತೆ, ಶಾಂತಿ ಮತ್ತು ಸೌಹಾರ್ದತೆಗಳು ನೆಲೆಯೂರುತ್ತವೆ. ಅಂತಹ ಮಕ್ಕಳು ಬೆಳೆದು ದೊಡ್ಡವರಾದ ಮೇಲೆ ಸಮಾಜದ ಬದುಕಿನಲ್ಲಿ ಸೌಹಾರ್ದತೆಯನ್ನು ಬಿತ್ತುತ್ತಾರೆ.

ಚುಟುಕು ಕವನಗಳನ್ನು ಚೌಪದಿಯಲ್ಲಿ ಬರೆದು ನಾಡಿನ ತುಂಬ ಪ್ರಸಿದ್ಧಿ ಪಡೆದ ದಿನಕರ ದೇಸಾಯಿಯವರು ಭಾರತದ ವಿವಿಧತೆಯಲ್ಲಿ ಏಕತೆಯನ್ನು ಕಂಡುಕೊಂಡ ಚುಟುಕು ಚೌಪದಿಯನ್ನು ಎಂದೂ ಮರೆಯುವಂತಿಲ್ಲ. ಮಕ್ಕಳಿಗೆ ಈ ಚುಟುಕು ಚಾಕಲೇಟ್ ಇದ್ದಂತಿದೆ :

*ಕೋಟಿ ಜಾತಿಗಳಿದ್ದರೂ ಇಲ್ಲ ಚಿಂತೆ*
*ಭಾರತದ ಒಗ್ಗಟ್ಟು ಕ್ಯಾಬೇಜಿನಂತೆ*
*ಒಂದೊಂದು ಎಲೆ ಒಂದೊಂದು ಜಾತಿ*
*ಅಪ್ರತಿಮವಾದುದು ಭಾರತದ ನೀತಿ*

– ದಿನಕರ ದೇಸಾಯಿ, ಕನ್ನಡ ಕವಿವಾಣಿ, ಪುಟ-೬೬ ಪ್ರಕಾಶಕರು ಕ.ಸಾ.ಪ., ಬೆಂಗಳೂರು.

ವರಕವಿ ದ. ರಾ. ಬೇಂದ್ರೆಯವರು ಮಾತನಾಡಿದರೆ ಕವನವಾಗಿರುತ್ತವೆ, ಕವನಗಳೇ ಮಾತಾಗಿರುತ್ತವೆ. ಜಾತಿಯನ್ನು ನಿರಾಕರಿಸುತ್ತ ಪ್ರೀತಿಯನ್ನು ಅಪ್ಪಿಕೊಂಡಿದ್ದನ್ನು 'ರಸಿಕಾ ಪೇಳೋ' ಎಂಬ ಕವಿತೆಯಲ್ಲಿ ಕಾಣಬಹುದು. ಈ ಕವಿತೆಯನ್ನು ಮಕ್ಕಳು ತುಂಬ ಇಷ್ಟಪಡುತ್ತಾರೆ :

*ಕಬ್ಬಿನ ಗಣೆ ಡೊಂಕು, ಅದರ ಹಾಲದು ಡೊಂಕೆ ? ರಸಿಕಾ ಪೇಳೋ*
*ಹುಬ್ಬಿನ ಗೆರೆ ಡೊಂಕು, ಕಣ್ಣ ನೋಟವು ಡೊಂಕೆ ? ರಸಿಕಾ ಪೇಳೋ*
*ಬಿದಿಗೆ ಚಂದ್ರಮ ಡೊಂಕು, ಬೆಳದಿಂಗಳದು ಡೊಂಕೆ ? ರಸಿಕಾ ಪೇಳೋ*
*ವಿಧಿ ಇತ್ತ ಕುಲ ಡೊಂಕು, ನನ್ನ ಪ್ರೀತಿಯು ಡೊಂಕೆ ? ರಸಿಕಾ ಪೇಳೋ*

– ದ. ರಾ. ಬೇಂದ್ರೆ, ಗರಿ, ಪುಟ-೩೨

ಹುಟ್ಟಿನ ಜಾತಿಯಿಂದ ಮನುಷ್ಯನನ್ನು ಅಳೆಯಬಾರದು. ಅವನ ವ್ಯಕ್ತಿತ್ವ ಮತ್ತು ಒಳ್ಳೆಯತನವನ್ನು ನೋಡಬೇಕೆಂಬುದೇ ಕವಿಯ ಆಶಯವಾಗಿದೆ. ಇಂತಹ ಕವನಗಳನ್ನು ಮಕ್ಕಳು ಅರಗಿಸಿಕೊಂಡರೆ ಅವರ ಸ್ವಭಾವದಲ್ಲಿ ಮೇಲು-ಕೀಳುಗಳ ಭಾವನೆ ಬರುವುದಿಲ್ಲ.

ಡಾ॥ ವ್ಹಿ. ಕೆ. ಗೋಕಾಕರು ತಮ್ಮ ಮಹಾಕಾವ್ಯ ''ಭಾರತ ಸಿಂಧು ರಶ್ಮಿ''ಯಲ್ಲಿ ಒಂದು ಮಾತು ಹೇಳುತ್ತಾರೆ :

*ಅವರವರ ಧರ್ಮ ಅವರವರಿಗೆ ಮಾನ್ಯ*
*ಅನ್ಯ ಧರ್ಮ ದ್ವೇಷಿಗಿದೇ ಪಥ, ಪರಮ ಶೂನ್ಯ*

– ಡಾ॥ ವ್ಹಿ. ಕೆ. ಗೋಕಾಕ, ಕನ್ನಡ ಕವಿವಾಣಿ, ಪುಟ-೧೭

– ಇಲ್ಲಿ ಪರಮತದ್ವೇಷಿಯಾಗುವುದು ರಾಕ್ಷಸ ಪ್ರವೃತ್ತಿ. ಅವನ ಅಸ್ತಿತ್ವ ಶೂನ್ಯವೆಂದು ಹೇಳುತ್ತಾರೆ.

– ಹಸ್ತದ ಐದು ಬೆರಳಿನಲ್ಲಿ ಒಂದು ಬೆರಳಿಗೆ ಗಾಯವಾದರೆ ಉಂಡುಡಲು ಎಷ್ಟು ಕಷ್ಟವೋ ಅದರಂತೆ ಒಂದು ಧರ್ಮದವರಿಗೆ ತೊಂದರೆಯಾದರೆ ದೇಶದಲ್ಲಿಯ ಶಾಂತಿ, ಸೌಹಾರ್ದತೆಗೆ ಧಕ್ಕೆ ಬರುತ್ತದೆ. ಗಲಭೆ ದಂಗೆಗಳಾಗುತ್ತವೆ. ಮುಗ್ಧ ಜೀವಿಗಳ ಆಸ್ತಿ, ಪ್ರಾಣಗಳಿಗೆ ಹಾನಿ ಒದಗುತ್ತದೆ. ಆದುದರಿಂದ ಚಿಕ್ಕಮಕ್ಕಳಿರುವಾಗಲೇ ಶಾಂತಿ ಸೌಹಾರ್ದ ಬೋಧಿಸುವ ಇಂತಹ ಕಥೆ, ಕವನಗಳಿಂದ ಅವರ ಮನಸ್ಸು ಹೃದಯಗಳನ್ನು ತಿದ್ದುತ್ತ ಬಂದರೆ ಶಾಂತಿಯ ಬದುಕು ನಮ್ಮದಾಗುತ್ತದೆ.

ಖ್ಯಾತ ಮಕ್ಕಳ ಕವಿ ಶಂ. ಗು. ಬಿರಾದಾರ ಅವರ ಪ್ರಸಿದ್ಧ ಕವನ 'ನಾವು ಎಳೆಯರು' ಇಂದಿಗೂ ಮಕ್ಕಳ ಬಾಯಲ್ಲಿ ಹರಿದಾಡುತ್ತದೆ :

ನಾವು ಎಳೆಯರು, ನಾವು ಗೆಳೆಯರು
ಹೃದಯ ಹೂವಿನ ಮಂದಿರ
ನಾಳೆ ನಾವೇ ನಾಡ ಹಿರಿಯರು
ನಮ್ಮ ಕನಸದು ಸುಂದರ – ಶಂ. ಗು. ಬಿರಾದಾರ

ಕವಿ ಇಕ್ಬಾಲರು ಜಾತಿಯ ವೈಷಮ್ಯ ತೊರೆಯಲು ಬರೆದ ಕವನ ಸಾಮರಸ್ಯದ ಸಂದೇಶವಾಗಿರುತ್ತದೆ :

*ಜಾತಿ ಜಾತಿಗಳಲ್ಲಿ ಒಡಕು*
*ಹುಟ್ಟಿಸುವ ಮಾತು ಆಡುತಿರುವೆ ಏಕೆ ?*
*ಆಡಿದೇಯೋ ! ಅದು ಬಿಡದ ಕೇಡಿನ*
*ಮಾರಿ ಅಡಗಿ ಕುಳಿತಿದೆ ಜೋಕೆ !*

– 'ರಾಷ್ಟ್ರಪ್ರೇಮಿ ಇಕ್ಬಾಲ್', ಪುಟ-೧೪, ಕೋ. ಚನ್ನಬಸಪ್ಪ

ಖ್ಯಾತ ಕವಿ ಬಿ. ಎ. ಸನದಿ ಅವರು ಸಂಭವ ಎಂಬ ಕವನದಲ್ಲಿ ಮಹತ್ವದ ಸಾಲುಗಳನ್ನು ಬರೆದು ಎಚ್ಚರಿಸುವುದು ಹೀಗೆ :

*ಬತ್ತಿ ಇದ್ದರೂ ಕೂಡ ಉರಿಯಲರಿಯದು ಪಾಪ !*
*ಎಣ್ಣೆ ಇಲ್ಲದ ದೀಪ*
*ಹೊಗೆಯಲ್ಲಿ ಧಗೆಯಲ್ಲಿ ಹೀಗೆ ನಡೆವುದು*
*ಯಾವ ಯುಗದವರೆಗೆ*
*ಎಲ್ಲಿ ಹುಡುಕಲಿ ಹೇಳಿ ಮನುಜ ಮನುಜರ ಗುರುತು ?*

– ಇಲ್ಲಿ ಕವಿ ಮನುಷ್ಯ ಆಕಾರವಿದೆ, ಆದರೆ ಮನುಷ್ಯತ್ವ ಇಲ್ಲವೆಂದು ಚಿಂತಿಸುತ್ತಾರೆ.

– 'ಸಂಭವ' ಪುಟ-೮೬, ಬಿ. ಎ. ಸನದಿ

ಕಾಡು ಕಡಿದು ಪರಿಸರ ನಾಶ ಮಾಡುವುದನ್ನು ಮಕ್ಕಳು ಬಯಸುವುದಿಲ್ಲ ಎಂಬುದನ್ನು ಕವಿ ಪ. ಗು. ಸಿದ್ದಾಪುರ ಅವರು ತಮ್ಮದೊಂದು ಕವನದಲ್ಲಿ ಹೀಗೆ ಚಿತ್ರಿಸಿದ್ದಾರೆ :

*ಕಾಡು ಬೆಳೆಸಿ ನಾಡು ಉಳಿಸಿ*
*ಸಾಕು ಇಂಥ ಘೋಷಣೆ*
*ಇದ್ದ ಕಾಡು ನಶಿಸುತಿಹುದು*
*ಮೊದಲು ಮಾಡಿ ಪೋಷಣೆ*

– ಪ. ಗು. ಸಿದ್ದಾಪುರ, 'ಸಕ್ಕರೆ ತುಪ್ಪ' ಪುಟ-೨೩

– ಪರಿಸರದ ಪ್ರೀತಿ ಪೋಷಣೆಗೆ ಇಂತಹ ಕವನಗಳೂ ಮಕ್ಕಳ ಮನಸ್ಸಿನಲ್ಲಿ ಬದಲಾವಣೆ ತರುತ್ತವೆ.

ಮಕ್ಕಳ ಕವಿ ಎ. ಕೆ. ರಾಮೇಶ್ವರ ಅವರು 'ಕಲ್ಲಿನಲ್ಲಿ ದೇವ ಬಂದ' ಎಂಬ ಕವನದಲ್ಲಿ ಇಹದ ಬದುಕು ಹಲವಾರು ಸಮಸ್ಯೆಗಳಿಂದ ಕೂಡಿದೆ. ಅದನ್ನು ಸಹಿಸಿಕೊಳ್ಳಬೇಕೆಂದು ಮಕ್ಕಳಿಗೆ ತಿಳಿ ಹೇಳುವುದು ಹೀಗೆ :

*ಉಳಿಯ ಹೊಡೆತ ತಿಂದ ಕಲ್ಲು । ಚೆಲವ ರೂಪ ಪಡೆಯಿತು*
*ಇಂತು ಮಗುವೆ ಮನುಜ ಬಾಳು । ಸಹಿಸು ಇಹದ ಪೆಟ್ಟನು*

– 'ಮಕ್ಕಳ ಸಾಹಿತ್ಯ' ೧೯೭೬, ಪುಟ-೮೩

– ಚಿಕ್ಕಮಕ್ಕಳಿಗೆ ದೇವರೆಂದರೆ ಹೇಗೆ ಇರುತ್ತಾನೆ, ಎಲ್ಲಿ ಇರುತ್ತಾನೆ ಎಂಬುದು ತಿಳಿದಿರುವುದಿಲ್ಲ. ತಂದೆ-ತಾಯಿಗಳು ಮತ್ತು ಗುರುಗಳು ತೋರಿಸಿದ್ದೇ ದೇವರೆಂದು ನಂಬುತ್ತಾರೆ. ಕವಯಿತ್ರಿ ಶಶಿಕಲಾ ವಸ್ತ್ರದ ಅವರು ಮಕ್ಕಳಿಗಾಗಿ ಬರೆದ ಈ ಕವಿತೆಯಲ್ಲಿ ದೇವರು ಯಾರು ಎಂಬುದನ್ನು ಅಜ್ಜನಿಂದ ಮೊಮ್ಮಕ್ಕಳಿಗೆ ಹೇಳಿಸಿದ್ದಾರೆ. ಮಕ್ಕಳಲ್ಲಿ ಕರುಣೆ, ದಯೆ, ಮಾನವ ಪ್ರೀತಿ, ಹೊಮ್ಮಿಸಲು ಈ ಸಾಲುಗಳು ಸಹಾಯಕವಾಗಿರುತ್ತವೆ.

*ಶಾಂತಿ, ಶರಣ ಓಡಿ ಬಂದು ಅಜ್ಜನೆದುರು ಕೂತುಕೊಂಡು'*
*ದೇವರೆಲ್ಲಿ ತೋರಿಸಜ್ಜಾ ಎಂದು ಅಂದರು*
*ಬಿಳಿಯ ಪಟಗ ಕೆಳಗೆ ಇಟ್ಟು ಬೋಳು ತಲೆಯ ಸವರಿಕೊಂಡು*
*ಎಲೆ-ಅಡಿಕೆ ಉಗುಳಿ ಬಂದು ಅಜ್ಜ ಅಂದನು*
*ಕುರುಡ, ಕುಂಟ ದಾರಿತಪ್ಪಿ ಬಿಸಿಲಿನಲ್ಲಿ ಬೇಯುವಾಗ*
*ಕರೆದು ದಾರಿ ತೋರಿದವರು ದೇವರಲ್ಲವೇ ?*
*ಹಸಿದ ಮುದುಕ ಬೇಡಿಕೊಳಲು ತನ್ನ ಪಾಲಿನನ್ನದಲ್ಲಿ*
*ನೀಡಿ ಪ್ರೀತಿ ತೋರಿದವನು ದೇವರಲ್ಲವೆ ?*
*ದೀನ-ದಲಿತರೆಲ್ಲರನ್ನು ತನ್ನ ಗೆಳೆಯರಂತೆ ಕಂಡು*
*ಸ್ನೇಹ ಪ್ರೀತಿ ತೋರಿದವನು ದೇವರಲ್ಲವೇ ?*
*ಜಗದ ಜೀವಿಗಳಿಗೆ ಶಾಂತಿ ಮೊಗೆದು ಮೊಗೆದು ತುಂಬಿ ಪ್ರೀತಿ*
*ಕರುಣೆಯುಳ್ಳ ಮನುಜರೆಲ್ಲ ದೇವರೆಂದನು.*

– ಶಶಿಕಲಾ ವಸ್ತ್ರದ, ಮಕ್ಕಳ ಸಾಹಿತ್ಯ ಕವಿತೆಗಳು, ಪುಟ-೧೭೪

ಮಕ್ಕಳ ಕವಿ ಪಂಜೆ ಮಂಗೇಶರಾವ್ ಅವರು 'ಉದಯರಾಗ' ಎಂಬ ಕವನದಲ್ಲಿ ಸೂರ್ಯನ ಉದಯ, ಮಧ್ಯಾಹ್ನ, ಅಸ್ತ ಇವುಗಳನ್ನು ವರ್ಣಿಸುತ್ತ ಮಕ್ಕಳಿಗೊಂದು ನೀತಿಪಾಠ ಹೇಳಿರುವುದು ಆಪ್ಯಾಯಮಾನವಾಗಿದೆ :



ಮೂಡುವನು ರವಿ ಮೂಡುವನು
ಕತ್ತಲೊಡನೆ ಜಗಳಾಡುವನು
ಮೂಡಣ ರಂಗಸ್ಥಳದಲ್ಲಿ ನೆತ್ತರು
ಮಾಡುವನು ಕುಣಿದಾಡುವನು
ಏರುವನು ರವಿ ಏರುವನು
ಬಾನಲಿ ಸಣ್ಣಗೆ ತೋರುವನು
ಏರಿದವನು ಚಿಕ್ಕವನಿರಬೇಕಲೇ
ಎಂಬಾ ಮಾತನು ಸಾರುವನು

– ಪಂಜೆ ಮಂಗೇಶರಾವ್, ತಟ್ಟು ಚಪ್ಪಾಳೆ ಪುಟ್ಟ ಮಗು, ಪುಟ-೨೩೦

## ಮಕ್ಕಳ ಕಥಾ ಸಾಹಿತ್ಯದಲ್ಲಿ ಶಾಂತಿ ಸೌಹಾರ್ದತೆ

ಮಕ್ಕಳಲ್ಲಿ ಉತ್ತಮವಾದ ಗುಣಗಳನ್ನು ಬೆಳೆಸಲಿಕ್ಕೆ ಕಥೆಗಳೂ ಮುಖ್ಯಪಾತ್ರ ವಹಿಸುತ್ತವೆ. ಉದಾಹರಣೆ : ಕೆಳಗಿನ ಕಥೆಯನ್ನು ನೋಡಬಹುದು.

**ಪರೋಪಕಾರ :** ಮಹಮ್ಮದ ಪೈಗಂಬರರು ತಮ್ಮ ಹತ್ತಿರ ಸಹಾಯ ಕೇಳಿ ಬಂದ ಬಡವರನ್ನು ತಮ್ಮ ಶಿಷ್ಯರ ಬಳಿಗೆ ಕಳಿಸುತ್ತಿದ್ದರು. ಶಿಷ್ಯರು ಬೇಡಿ ಬಂದ ಬಡವರಿಗೆ ಸಹಾಯ ಮಾಡುತ್ತಿದ್ದರು. ಪೈಗಂಬರರ ಮಗಳು ಫಾತಿಮಾ ಮತ್ತು ಅಳಿಯ ಹಜರತ್ ಅಲಿಯವರು ಚಿಂತಿಸುತ್ತ ನಮ್ಮ ಹತ್ತಿರ ಸಹಾಯ ಬೇಡಲು ಯಾರೂ ಬರುತ್ತಿಲ್ಲ, ಪ್ರವಾದಿಗಳು ನಾವು ಬಡವರೆಂದು ಕಳಿಸುತ್ತಿಲ್ಲ ಎಂದು ನೊಂದುಕೊಳ್ಳುತ್ತಿದ್ದರು. ಒಂದು ಸಲ ಪೈಗಂಬರರು ಮಗಳು ಮತ್ತು ಅಳಿಯನ ಹತ್ತಿರ ಸಹಾಯ ಬೇಡಲು ಒಬ್ಬ ಬಡವನನ್ನು ಕಳುಹಿಸಿದರು. ಆದರೆ ಫಾತೀಮಾ ಮತ್ತು ಅಲಿ ಅವರ ಹತ್ತಿರ ದಾನ ಮಾಡಲು ಏನೂ ಇರಲಿಲ್ಲ, ಆಗ ಅಲಿಯವರು ಸಾಲ ಬೇಡಿಯಾದರೂ ಅತಿಥಿಗೆ ನೀಡಬೇಕೆಂದು ಒಬ್ಬ ಯಹೂದಿ ಶ್ರೀಮಂತನ ಹತ್ತಿರ ಹೋಗಿ ದುಡ್ಡು ಕೇಳಿದರು. ಅವನು ಕರಾರು ಹಾಕುತ್ತ ಇನ್ನು ಎಂಟು ದಿನದಲ್ಲಿ ನಾನು ಕೊಟ್ಟ ಹಣವನ್ನು ಮರಳಿ ಕೊಡಬೇಕು. ಅಲ್ಲಿಯವರೆಗೆ ನಿಮ್ಮ ಮಗನನ್ನು ನನ್ನ ಮನೆಯಲ್ಲಿ ಒತ್ತೆ ಇಡಬೇಕು ಎಂದು ಹೇಳಿದ. ಅದರಂತೆ ಮಗುವನ್ನು ಒತ್ತೆ ಇಟ್ಟು ಅಲಿಯವರು ಹಣವನ್ನು ಸಾಲದಂತೆ ಒಯ್ದು ಅತಿಥಿಗಳಿಗೆ ನೀಡಿದರು.

ಸಾಲ ಕೊಡುವ ದಿನ ಬಂತು. ಆದರೆ ಅವರ ಹತ್ತಿರ ಹಣ ಇರಲೇಇಲ್ಲ, ಎಲ್ಲಿಯಾದರೂ ದುಡಿದು ತರಲು ಅಲಿಯವರು ಹೊರಗೆ ಹೋದರು. ಆದರೆ ಎಲ್ಲಿಯೂ ದುಡಿಮೆ ಸಿಕ್ಕಲಿಲ್ಲ, ಕೊನೆಗೆ ಹತಾಶರಾಗಿ ಒಂದು ಮಸೀದಿ ಮುಂದೆ ಮಲಗಿಕೊಂಡರು. ಫಾತೀಮಾ ಪತಿಗಾಗಿ ಕಾದು ಕಾದು ಹುಡುಕುತ್ತ ಮಸೀದಿಯ ಮುಂದೆ ಬಂದರು. ಆ ಸ್ಥಳದಲ್ಲಿ ಹಜರತ್ ಅಲಿಯವರು ಮಲಗಿದ್ದನ್ನು ನೋಡಿ ದುಃಖದಿಂದ ಕಣ್ಣೀರು ಸುರಿಸಹತ್ತಿದರು. ಅದೇ ಕಣ್ಣೀರು ಮುತ್ತುಗಳಾಗಿ ಮಾರ್ಪಟ್ಟವು. ಗಂಡನನ್ನು ಎಬ್ಬಿಸಿ ಉದುರಿದ ಮುತ್ತುಗಳನ್ನು ಅಲಿಯವರ ಕೈಯಲ್ಲಿ ಕೊಟ್ಟರು. ಸಂತೋಷದಿಂದ ಅಲಿಯವರು ಯಹೂದಿ ಸಾಹುಕಾರನಿಗೆ ಮುತ್ತುಗಳನ್ನು ಕೊಟ್ಟು ಸಾಲ ತೀರಿಸಲು ಹೋದರು. ಆದರೆ ಯಹೂದಿ ಸಾಹುಕಾರನು ಅಲಿಯವರ ಮಗನನ್ನು ಜೀತ ಇಟ್ಟುಕೊಳ್ಳುವ ಆಶೆಯಿಂದ, ''ಸಾಲ ತೀರಿಸುವ ಅವಧಿ ಮುಗಿದು ಹೋಯಿತು, ಸೂರ್ಯ ಮುಳುಗಿ ಕತ್ತಲಾಗಿದೆ. ನಿನ್ನ ಮಗನನ್ನು ಕಳುಹಿಸುವುದಿಲ್ಲ'' ಎಂದು ಹೇಳಿದನು.

ಆಗ ಅಲಿಯವರು ''ಸಾಹುಕಾರರೇ, ಹೊರಗೆ ಬಂದು ನೋಡಿ. ಸೂರ್ಯ ಇನ್ನು ಮುಳುಗಿಯೇ ಇಲ್ಲ, ನೆತ್ತಿಯ ಮೇಲೆ ಇದ್ದಾನೆ'' ಎಂದು ಹೊರಗೆ ಕರೆದುಕೊಂಡು ಬಂದು ತೋರಿಸಿದಾಗ ಸೂರ್ಯನು ಆಕಾಶದ ಮಧ್ಯದಲ್ಲಿ ಹೊಳೆಯುತ್ತಿದ್ದನು. ಆಗ ಯಹೂದಿಯು ಸೂರ್ಯನನ್ನು ನೋಡಿ ಪಶ್ಚಾತ್ತಾಪ ಪಟ್ಟನು. ತನ್ನೆಲ್ಲ ಸಂಪತ್ತನ್ನು ದಾನ ಮಾಡಿ ಅಲಿಯವರ ಅನುಯಾಯಿ ಆದನು. ಇಲ್ಲಿ ಕಥೆಯ ಸಂದೇಶವೇನೆಂದರೆ ದುರಾಶೆಯನ್ನು ತೊರೆದು ಕರುಣೆಯಿಂದ ನಡೆಯಬೇಕು. ಅಲಿ ಮತ್ತು ಫಾತೀಮರ ದಾನ ಶ್ರೇಷ್ಠತೆಗೆ ಅಲ್ಲಾಹನು ಸಹಾಯ ಮಾಡಿದನೆಂಬುದು ತಿಳಿಯುತ್ತದೆ. ಇಂತಹ ಕಥೆಗಳೆಂದರೆ ಮಕ್ಕಳಿಗೆ ಬಲು ಇಷ್ಟ. ಮಕ್ಕಳು ಆಶೆಯಿಂದ ಓದುತ್ತಾರೆ, ನೀತಿಯ ಪಾಠಗಳನ್ನು ಕಲಿಯುತ್ತಾರೆ. ಸಹಾಯ, ಸಹಕಾರ, ದಯೆ, ಕರುಣೆಗಳನ್ನು ಅಳವಡಿಸಿಕೊಳ್ಳುತ್ತಾರೆ. ಶಾಂತಿ-ಸೌಹಾರ್ದದ ಬದುಕು ಅವರಿಗೇ ಗೊತ್ತಾಗದಂತೆ ಅವರ ಹೃದಯದಲ್ಲಿ ನೆಲೆಗೊಳ್ಳುತ್ತದೆ. ಗಲಭೆ ದಂಗೆಗಳಿಂದ ಯಾರಿಗೂ ಶಾಂತಿ ದೊರಕುವುದಿಲ್ಲ ಎಂಬ ಅರಿವು ಮೂಡುತ್ತದೆ.

ಇಂದಿನ ಮಕ್ಕಳಲ್ಲಿ ಶಾಂತಿ-ಸೌಹಾರ್ದದ ನಡುವಳಿಕೆ ಕಡಿಮೆಯಾಗುವ ಸನ್ನಿವೇಶಗಳು ಹೆಚ್ಚಾಗಿರುತ್ತವೆ. ಅವರಿಗೆ ಉತ್ತಮ ಸಂಸ್ಕಾರ ಕೊಡುವುದು, ಕಲಿಸುವುದು, ಅವಶ್ಯವಾಗಿದೆ. ಎಲ್ಲ ದೇಶದ ಮಕ್ಕಳು ಈ ನಿಟ್ಟಿನಲ್ಲಿ ಹೆಜ್ಜೆ ಇಟ್ಟರೆ ಬಾಂಧವ್ಯದ ಹೂವು ಅರಳುತ್ತದೆ. ದೇಶ ದ್ರೋಹ, ಸಮಾಜ ದ್ರೋಹ, ಕ್ರೌರ್ಯದ ವರ್ತನೆಗಳು ಕಂಡುಬರುವುದಿಲ್ಲ, ದುಷ್ಟ ಶಕ್ತಿಗಳ ಮಾರ್ಗದಲ್ಲಿ ವಿವೇಚಿಸದೆ ಧುಮುಕುವುದು ನಿಲ್ಲುತ್ತದೆ. ತಾವು ಆತಂಕಕ್ಕೆ ಈಡಾಗಿ ದೇಶದ ಶಾಂತಿಯನ್ನು ಕೆಡಿಸುತ್ತ ಪ್ರಾಣಹಾನಿ ಮಾಡಿಕೊಳ್ಳುವುದು ಕಡಿಮೆಯಾಗುತ್ತದೆ. ಮಕ್ಕಳಿಗೆ ಶಾಂತಿ-ಸೌಹಾರ್ದ ತೋರುವ ಸಾಹಿತ್ಯದ ದೀಕ್ಷೆ ಕೊಟ್ಟರೆ ಅವರು ಶಾಂತಿಯ ಮೂರ್ತಿಗಳಾಗುತ್ತಾರೆ. ಆದುದರಿಂದ ಮಕ್ಕಳಲ್ಲಿ ಸಾಹಿತ್ಯ, ಸಂಗೀತ, ಕಥೆ, ಕವನ, ನಾಟಕ ಮುಂತಾದ ಮಾನವೀಯ ಗುಣಗಳನ್ನು ಬೆಳೆಸುವ ಕಲೆಗಳ ಅರಿವು ಮೂಡಿಸುವುದು ಅವಶ್ಯವಾಗಿರುತ್ತದೆ.

**ಎಂ. ಡಿ. ಗೋಗೇರಿ**
ನವ ಅಯೋಧ್ಯಾನಗರ ಹುಬ್ಬಳ್ಳಿ - ೫೮೦ ೦೨೪









# ಲೇಖಕಿಯರು ಅಭಿವ್ಯಕ್ತಿ ಸ್ವಾತಂತ್ರ್ಯ

**ಕ**ವಯಃ ನಿರಂಕುಶಾಃ ಎಂದಿದ್ದಾರೆ ನಮ್ಮ ಪೂರ್ವದ ಲಾಕ್ಷಣಿಕರು. ಅದು ಆ ಕಾಲದ ಯುಗ ಧರ್ಮವಾಗಿದ್ದಿರಬಹುದು. ಏನೇ ಆದರೂ ಅಂದಿನ ಕವಿಗಳು ತಮ್ಮ ಕೃತಿಗಳಲ್ಲಿ ತಮ್ಮ ಸಮಕಾಲೀನ ಸಮಾಜಸ್ಥಿತಿಯ ಬಗ್ಗೆಯಾಗಲೀ, ಅಂದಿನ ಸಾಮಾನ್ಯ ಪ್ರಜೆಗಳ ನೋವು ನಲಿವುಗಳಿಗಾಗಲೀ ಹೆಚ್ಚಿನ ಪ್ರಾಶಸ್ತ್ಯಕೊಟ್ಟಿಲ್ಲ. ಅದರಲ್ಲೂ ಸಾಮಾನ್ಯ ಹೆಣ್ಣಿನ ಬವಣೆಗಳನ್ನು ಉಲ್ಲೇಖಿಸಿದಂತೆ ಕಾಣೆ. ಹಾಲನ ಗಾಥಾ ಸಪ್ತಶತಿಯ ರಚನೆಗಳನ್ನು ಹೊರತುಪಡಿಸಿದರೆ ಪ್ರಾಚೀನ ಕವಿಗಳ ಕಾವ್ಯಗಳಲ್ಲಿ ನಾವು ಕಾಣುವ ಸ್ತ್ರೀಯರು ಸಾಮಾನ್ಯ ಉತ್ಸವ ಪ್ರಿಯರು. ರಾಜ ಮಹಾರಾಜರ ಅರಮನೆಯ ಅರಗಿಣಿಗಳು. ಇವರನ್ನು ಬಿಟ್ಟರೆ ಹೊಲಗದ್ದೆಗಳಲ್ಲಿ ಹಕ್ಕಿಗಳನ್ನೋಡಿಸುವ, ಅರವಟ್ಟಿಗೆಗಳಲ್ಲಿ ನೀರೆರೆಯುವ ನೀರೆಯರು, ಹೂಗಳನ್ನು ಮಾರುವ ಪುಷ್ಪಲಾವಿಕೆಯರು (ಹೂವಾಡಿಗಿತ್ತಿಯರು) ಅವರ ಸರಸಸಲ್ಲಾಪಗಳು, ಜೊತೆಗೆ ನಗರಗಳಲ್ಲಿ ಕಾಣುವ ವೇಶ್ಯೆಯರ ವಿಲಾಸ ವೈಭವಗಳೇ !

'ಸ್ತ್ರೀರೂಪಮೆ ರೂಪಂ' ಎಂದು ನೇಮಿಚಂದ್ರನೂ, ''ಸಾರಂ ಅನಂಗಮಲ್ತೆ ಜಂಗಮ ಲತಾ ಲತಾಂಗಿಯರಿಂದಮಲ್ತೆ ಸಂಸಾರಂ'' ಎಂದು ಪಂಪ ಕವಿಯೂ, ಹೀಗೆಯೇ ಇತರ ಕವಿಗಳು ಸ್ತ್ರೀರೂಪದ ಅಗ್ಗಳಿಕೆಯನ್ನು ಹೊಗಳಿದ್ದಾರೆ. ಅವರ ಕಾವ್ಯಗಳಲ್ಲಿ ಬರುವ ಸ್ತ್ರೀಯರು ಶೃಂಗಾರದ ಅಧಿದೇವತೆಗಳು, ಅವರ ಸೌಂದರ್ಯದ ಬಗೆ ಬಗೆಯ ವರ್ಣನೆಗಳನ್ನು ಕಾಣುತ್ತೇವೆ. ಈ ಕಾವ್ಯಗಳಲ್ಲಿ ಚಿತ್ರಿತಗೊಂಡ ಸ್ತ್ರೀಯರು ದಂತದ ಗೊಂಬೆಗಳಂತಿದ್ದು ಸದಾ ರಾಜ ಮಹಾರಾಜರ ಅಥವಾ ಧನಿಕರ ಮನೆಗಳಲ್ಲಿ ವಾಸಿಸುತ್ತ ಉದ್ಯಾನವನಗಳಲ್ಲಿ ವಿಹರಿಸುತ್ತ, ತಿಳಿಗೊಳದಲ್ಲಿ ಜಲಕ್ರೀಡೆಯಾಡುತ್ತ, ಗಾನ ನರ್ತನಾದಿಗಳಿಂದ ಮಹಾರಾಜರನ್ನು ರಂಜಿಸುವ ರಾಗಿಣಿಯರೇ. ಇವರಿಗೆ ಬಹುಮಟ್ಟಿಗೆ ಒದಗುವ ನೋವೆಂದರೆ ವಿರಹ ತಾಪ, ಇಲ್ಲವೆ ಪುತ್ರದೋಹಳ (ಪುತ್ರರಿಲ್ಲವೆಂಬ ಕೊರಗು) ಇವುಗಳ ಹೊರತು ನೋವಿನ ನೆರಳೇ ಸೋಂಕದ ಶೃಂಗಾರ ಮಂಟಪದ ಪುತ್ಥಳಿಗಳಿವರು.

ಈಗ ಕಾಲ ಬದಲಾಗಿದೆ. ಅರಸರ ಆಳ್ವಿಕೆ ಎಂದೋ ಮುಗಿದುಹೋದ ಕಥೆ. ನಾವೀಗ ಪ್ರಜಾಪ್ರಭುತ್ವದ ಆಡಳಿತದಲ್ಲಿದ್ದೇವೆ. ಆದರೇನು ? ಅಭಿವ್ಯಕ್ತಿ ಸ್ವಾತಂತ್ರ್ಯದ ವಿಷಯದಲ್ಲಿ ಹಿಂದಿನ ಲಾಕ್ಷಣಿಕರ ಮಾತು ಈಗ ಲವಲೇಶವೂ ನಡೆಯುವಂತಿಲ್ಲ. ಇಂದು, ಅದರಲ್ಲೂ ನಮ್ಮ ಲೇಖಕಿಯರ ವಿಷಯಕ್ಕೆ ಬಂದಾಗ ಅಭಿವ್ಯಕ್ತಿ ಎನ್ನುವುದು ಸಂಕುಚಿತ ಕಡಿವಾಣಕ್ಕೆ ಸಿಕ್ಕಿ, ಸೃಜನಶೀಲತೆ ಕೊರಗುತ್ತಿದೆ.

ಕೆಲ ವರುಷಗಳ ಹಿಂದೆ ಕೇಂದ್ರ ಸಾಹಿತ್ಯ ಅಕಾಡೆಮಿ ಆಯೋಜಿಸಿದ್ದ ಅಖಿಲ ಭಾರತ ಲೇಖಕಿಯರ ಸಮ್ಮೇಳನವನ್ನು ಉದ್ಘಾಟಿಸುತ್ತ ಬಂಗಾಳಿ ವಿಖ್ಯಾತ ಲೇಖಕಿ, ನೊಬೆಲ್ ಪ್ರಶಸ್ತಿ ಪಡೆದ ಖ್ಯಾತ ಅರ್ಥ ತಜ್ಞ ಡಾ|| ಅಮರ್ತ್ಯ ಸೇನ್‌ರ ಪತ್ನಿ ಡಾ|| ನಬನೀತಾ ಸೇನ್ ಹೇಳಿದ ಮಾತು ನೆನಪಿಗೆ ಬರುತ್ತದೆ :

''ನಮ್ಮ ಜನರು ಶ್ರೀಮತಿ ಸುಬ್ಬಲಕ್ಷ್ಮಿ ಹಾಡಿದರೆ, ಬಾಲ ಸರಸ್ವತಿ ನೃತ್ಯ ಮಾಡಿದರೆ ಸಂತೋಷಪಡುತ್ತಾರೆ. ಹೊಗಳಿ ಹರಸುತ್ತಾರೆ. ಆದರೆ ನಾಲ್ಪಾಟ್ ಬಾಲಾಮಣಿಯಮ್ಮ (ಈಕೆ ಕೇರಳದ ಹಿರಿಯ ಲೇಖಕಿ ಹಾಗೂ ಖ್ಯಾತ ಲೇಖಕಿ ಕಮಲಾದಾಸ್‌ರ ತಾಯಿ) ಸಾಹಿತ್ಯ ರಚನೆ ಮಾಡಿದರೆ ಪುರುಷ ಜಗತ್ತಿನ ಮೇಲೆ ದಬ್ಬಾಳಿಕೆ ನಡೆಸಿದಂತೆ ಭಾವಿಸಿ, ಆಕೆ ಪುರುಷ ದ್ವೇಷಿಯೇ ಎಂಬ ತೀರ್ಮಾನಕ್ಕೆ ಬಂದುಬಿಡುತ್ತಾರೆ, ಸತ್ಯಜಿತ್ ರಾಯ್ ಪುರುಷರು ವಿವಾಹೇತರ ಸಂಬಂಧ ಹೊಂದಿದ್ದರ ಬಗ್ಗೆ ಸಿನಿಮಾ ತೆಗೆದರೆ ಯಾರೂ ಆತನ ಜೀವನಕ್ಕೂ ಸಿನಿಮಾಗೂ ಸಂಬಂಧ ಕಲ್ಪಿಸುವುದಿಲ್ಲ, ಆದರೆ ಅಪರ್ಣಾ ಸೇನ್ 'ಪರೋಮಾ' ಎಂಬ ಸಿನಿಮಾ ತೆಗೆದಿದ್ದಕ್ಕೆ ಆ ಕಥೆ ಅಪರ್ಣಾ ಸೇನ್‌ಳ ಖಾಸಗಿ ಜೀವನಕ್ಕೆ ಸಂಬಂಧಿಸಿದ್ದು ಎಂಬ ತೀರ್ಮಾನಕ್ಕೆ ಬಹುಬೇಗನೆ ಬಂದು ಬಿಡುತ್ತಾರೆ. ಅಭಿವ್ಯಕ್ತಿ ಸ್ವಾತಂತ್ರ್ಯದಲ್ಲಿ ಪುರುಷರಿಗೊಂದು ಸ್ತ್ರೀಯರಿಗೊಂದು ಮಾನದಂಡವೇಕೆ ? ಇದೇ ನಮಗೆ ಅರ್ಥವಾಗದ ಪ್ರಶ್ನೆ'' ಎಂದು ಆಕೆ ನೊಂದು ನುಡಿದರು.

ಹೌದು, ಈ ಪ್ರಶ್ನೆ ಬಹು ದಿನಗಳಿಂದ ನಮ್ಮನ್ನು ಸಹ ಕಾಡುತ್ತಲೇ ಬಂದಿದೆ. ಇನ್ನೊಂದು ಅಚ್ಚರಿಯ ವಿಷಯ ಎಂದರೆ ಈ ಸಂದಿಗ್ಧತೆ ವಿಪರ್ಯಾಸ ಎಷ್ಟು ಹಳೆಯದೆಂದರೆ ಹದಿನೆಂಟನೆಯ ಶತಮಾನದ ಮಧ್ಯಭಾಗದಲ್ಲಿದ್ದ ಕವಯಿತ್ರಿಯೊಬ್ಬಳ ಕಾವ್ಯವನ್ನು ಒಂದೂವರೆ ಶತಮಾನದ ನಂತರ ಬಂದ ಭಾರತ ಸರ್ಕಾರ ಆ ಕೃತಿಯನ್ನು ಮುಟ್ಟುಗೋಲು ಹಾಕಿಕೊಂಡು ಆ ಪ್ರತಿಗಳನ್ನೆಲ್ಲ ಸುಟ್ಟುಹಾಕಿದ ಪ್ರಕರಣದವರೆಗೆ ನಡೆದು ನಮ್ಮನ್ನು ವಿಸ್ಮಯಗೊಳಿಸುತ್ತದೆ.

ವಿಜಯನಗರ ಸಾಮ್ರಾಜ್ಯದ ಸಾಮಂತ ಅರಸನಾಗಿ ದಕ್ಷಿಣಾಪಥವನ್ನಾಳಿದ ನಾಯಕ ರಾಜರಲ್ಲಿ ಒಬ್ಬನಾದ ಪ್ರತಾಪಸಿಂಹನ (೧೭೪೦-೧೭೮೦) ಉಪ ಪತ್ನಿಯಾಗಿದ್ದ ಮುದ್ದು ಪಳನಿ ಒಳ್ಳೆಯ ಕವಯಿತ್ರಿ ಎಂದು ಹೆಸರಾಗಿದ್ದಳು. ಈಕೆ ತೆಲುಗಿನಲ್ಲಿ ಬರೆದ 'ರಾಧಿಕಾ ಸಾಂತ್ವನಂ' ನಾಲ್ಕು ಆಶ್ವಾಸಗಳಿಂದ ಕೂಡಿದ ಶೃಂಗಾರ ರಸಭರಿತ ಕಾವ್ಯವೆಂದು ಹೆಸರಾಗಿದೆ. ಶ್ರೀಕೃಷ್ಣನ ಸಖಿಯಾದ ರಾಧೆ ತನ್ನ ಸಾಕು ಮಗಳಾದ ಇಳೆಯನ್ನು ಕೃಷ್ಣನಿಗಿತ್ತು ಮದುವೆ ಮಾಡಿ ನಂತರ ತಾನೇ ಕೃಷ್ಣನ ವಿರಹದಿಂದ ಪರಿತಪಿಸುತ್ತಾಳೆ. ರಾಧೆ ತನ್ನ ಸಾಕು ಗಿಳಿಯನ್ನು ಕೃಷ್ಣನೆಡೆಗೆ ಕಳುಹಿಸಿಕೊಟ್ಟು ಕೃಷ್ಣನನ್ನು ತನ್ನೆಡೆಗೆ ಬರಮಾಡಿಕೊಳ್ಳುವಳು. ಇಂತಹ ಕಥಾ ಭಾಗವಿರುವ ಈ ಕಾವ್ಯದಲ್ಲಿ ಶೃಂಗಾರದ ಹೆಸರಿನಲ್ಲಿ ಮುದ್ದು ಪಳನಿ ಅಶ್ಲೀಲವೆನಿಸುವ ವರ್ಣನೆಗಳನ್ನು ಮಾಡಿದ್ದಾಳೆಂಬ ಆಕ್ಷೇಪಣೆಯನ್ನು ಈ ಕಾವ್ಯ ರಚಿತವಾಗಿ ಸುಮಾರು ಒಂದೂ ಕಾಲು



**ನಿರುಪಮಾ**

ಶತಮಾನದ ನಂತರ ತೆಲುಗಿನ ವಿಮರ್ಶಕರು ಬಹಳ ಖಾರವಾಗಿ ವಿಮರ್ಶಿಸತೊಡಗಿದರು. ಆಂಧ್ರದ ಖ್ಯಾತ ಲೇಖಕರೂ, ವಿಮರ್ಶಕರೂ ಎಲ್ಲಕ್ಕಿಂತ ಹೆಚ್ಚಾಗಿ ಸಮಾಜ-ಸುಧಾರಕರಾಗಿ ಸ್ತ್ರೀಪರ ಹೋರಾಡಿದವರೂ ಆಗಿದ್ದ ಕಂದುಕೂರಿ ವೀರೇಶ ಲಿಂಗಂ ಪಂತುಲು, ಆಂಧ್ರ ಕವಿ ಚರಿತ್ರೆ ಬರೆಯುವಾಗ (೧೮೮೬ - ೧೯೯೪) ಮುದ್ದುಪಳನಿ ಬರೆದ 'ರಾಧಿಕಾ ಸಾಂತ್ವನ'ವನ್ನು ತೀವ್ರವಾಗಿ ಟೀಕಿಸಿದರು. ಈಕೆ ಸ್ತ್ರೀಜನ ಸ್ವಾಭಾವಿಕವಾದ ನಾಚಿಕೆ, ಮರ್ಯಾದೆಗಳನ್ನು ಬಿಟ್ಟು ಶೃಂಗಾರ ರಸ ಪೋಷಣೆಯ ಹೆಸರಿನಲ್ಲಿ ಸಂಭೋಗ ಶೃಂಗಾರವನ್ನು ಹಸಿ ಹಸಿಯಾಗಿ ಚಿತ್ರಿಸಿದ್ದಕ್ಕೆ ವಿರೋಧ ವ್ಯಕ್ತಪಡಿಸಿದ್ದಲ್ಲದೆ ಮುದ್ದು ಪಳನಿ ತಾನು ವೇಶ್ಯೆಯಾಗಿದ್ದರಿಂದಲೇ ಹೀಗೆ ಬರೆದಿದ್ದಾಳೆ ಎಂದು ಜರಿದು, ಈ ಕಾವ್ಯ ಮಹಿಳೆಯರು ಓದಬಾರದಷ್ಟು ಅಶ್ಲೀಲವಾಗಿದೆ ಎಂದು ದಾಖಲುಗೊಳಿಸಿದರು. ಇನ್ನೂ ಕೆಲ ವಿಮರ್ಶಕರು ಮುದ್ದು ಪಳನಿ ವಾರಾಂಗನೆಯಾದ್ದರಿಂದ ಇಂತಹ ವರ್ಣನೆಗಳನ್ನು ಮಾಡಿದ್ದಾಳೆ ಎಂದು ಆಕ್ಷೇಪಿಸಿದರು.



ಈ ವಿಷಯ ತಿಳಿದು ಬೆಂಗಳೂರು ನಾಗರತ್ನಮ್ಮ ಕುತೂಹಲಗೊಂಡು ಈ ಕೃತಿಗಾಗಿ ಬಹಳ ಹುಡುಕಿಸಿ ಅತಿ ಕಷ್ಟದಿಂದ ಒಂದು ಪ್ರತಿಯನ್ನು ಪಡೆದು ಬಹಳ ಗೌರವದಿಂದ ಆ ಕಾವ್ಯವನ್ನು ತಾವೇ ಪುನಃ ೧೯೧೦ರಲ್ಲಿ ಪ್ರಕಟಿಸಿದರು. ನಾಗರತ್ನಮ್ಮನವರು ಈ ಪುಸ್ತಕದ ಮುನ್ನುಡಿಯಲ್ಲಿ ಈ ಕಾವ್ಯದಲ್ಲಿನ ರಸಿಕತೆಯನ್ನು, ವರ್ಣನೆಗಳನ್ನು ಬಹುವಾಗಿ ಹೊಗಳಿದ್ದರು. ಇದಕ್ಕೆ ತೀವ್ರವಾದ ಆಕ್ಷೇಪಣೆ ಪುರುಷ ಸಾಹಿತಿಗಳಿಂದ, ವಿಮರ್ಶಕರಿಂದ ವ್ಯಕ್ತವಾಗಿ ಜೊತೆಗೆ ಈ ಕೃತಿಯನ್ನು ಮುಟ್ಟುಗೋಲು ಹಾಕಿಕೊಳ್ಳಬೇಕೆಂಬ ಒತ್ತಡ ಆಗಿನ ಬ್ರಿಟಿಷ್ ಸರ್ಕಾರದ ಮೇಲೆ ಹಾಕಲಾಯಿತು. ಆದರೆ ತೆಲುಗಿನ ಭಾಷಾತಜ್ಞ ಸಿ. ಪಿ. ಬ್ರೌನ್ ತನ್ನ ಸಹಾಯಕ ವೆಂಕಟನರಸಯ್ಯ ಎಂಬಾತನ ಸಹಕಾರದಿಂದ ಹಿಂದೆಯೇ ಈ ಕಾವ್ಯವನ್ನು ಪ್ರಕಟಿಸುವ ಯತ್ನ ಮಾಡಿದ್ದರೆನ್ನಲಾಗಿದೆ. ನಾಗರತ್ನಮ್ಮ ಈ ಕಾವ್ಯವನ್ನು ಪ್ರಕಟಿಸಿದ್ದಕ್ಕೆ ಕೆಲ ವಿಮರ್ಶಕರು ತಮ್ಮ ವಿರೋಧವನ್ನು ಪ್ರಕಟಿಸಿ, ಜೊತೆಗೆ ಆ ಕಾಲದಲ್ಲಿ ಸರ್ಕಾರದ ಭಾಷಾಂತರಕಾರ ರಾಗಿದ್ದ ಗೋಟೇಟಿ ಕನಕರಾಜು ಪಂತುಲು ಅವರು ಈ ಕಾವ್ಯದಲ್ಲಿನ ಕೆಲ ಭಾಗಗಳನ್ನು, ಅದರಲ್ಲೂ ಸ್ತ್ರೀಯರು ಓದಬಾರದಷ್ಟು ಅಶ್ಲೀಲ ವರ್ಣನೆಗಳಿಂದ ಕೂಡಿದೆ ಎಂದು ಅದನ್ನು ಇಂಗ್ಲಿಷಿಗೆ ತರ್ಜುಮೆಗೊಳಿಸಿ, ಅದನ್ನು ಇಂಗ್ಲಿಷ್ ಪಾಲಕರಿಗೆ ತೋರಿಸಿ, ಆ ಕೃತಿಯನ್ನು ಮುಟ್ಟುಗೋಲು ಹಾಕಿಕೊಳ್ಳುವಂತೆ ಅವರನ್ನು ಒಪ್ಪಿಸಿದರು. ನಂತರ ಖ್ಯಾತ ಇತಿಹಾಸ ತಜ್ಞರೆನಿಸಿದ್ದ ಪ್ರೊ॥ ಕೃಷ್ಣಸ್ವಾಮಿ ಅಯ್ಯಂಗಾರ್ ಸಹ ಇದನ್ನು ಸಮರ್ಥಿಸಿದರು. ಹೀಗಾಗಿ ಆಗ್ಗೆ ಜಾರಿಯಲ್ಲಿದ್ದ ಪೀನಲ್ ಕೋಡ್ ೨೯೨ರ ಅನುಚ್ಛೇದದ ಪ್ರಕಾರ ೧೯೧೧ರಲ್ಲಿ ಈ ಕೃತಿಯನ್ನು ಸರ್ಕಾರ ಮುಟ್ಟುಗೋಲು ಹಾಕಿಕೊಂಡಿತು. ಆಗ್ಗೆ ಪೊಲೀಸ್ ಕಮೀಷನರ್ ಆಗಿದ್ದ ಕನ್ನಿಂಗ್ ಹ್ಯಾಮ್ ಇದರ ಎಲ್ಲ ಪ್ರತಿಗಳನ್ನು ತಮ್ಮ ವಶಕ್ಕೆ ತೆಗೆದುಕೊಂಡರು.

ಈ ಕೃತಿಯನ್ನು ನಾಗರತ್ನಮ್ಮನವರ ಪರವಾಗಿ ಪ್ರಕಟಿಸಿದ ತೆಲುಗಿನ ಖ್ಯಾತ ಪ್ರಕಾಶಕರಾದ ವಾವಿಳ್ಳ ವೆಂಕಟೇಶ್ವರ ಶಾಸ್ತ್ರಿಯವರು ತಮ್ಮ ಪರವಾಗಿ ಕೋರ್ಟಿನಲ್ಲಿ ವಾದಿಸಲು ಆಗಿನ ಖ್ಯಾತ ವಕೀಲರಾಗಿದ್ದ ಪೇರಿ ನಾರಾಯಣಮೂರ್ತಿಯವರನ್ನು ನೇಮಿಸಿ ಕೊಂಡರು. ಇದಕ್ಕೆ ಪ್ರತಿಯಾಗಿ ತೆಲುಗು ಅಕಾಡೆಮಿಯ ಪರವಾಗಿ ನಾಡಿನ ಹಿರಿಯ ಕಿರಿಯ ವಿದ್ವಾಂಸರೂ ಲೇಖಕರೂ ಸೇರಿ ಈ ಕೃತಿಯ ವಿರುದ್ಧವಾಗಿ ಹೇಳಿಕೆಗಳನ್ನು ಕೊಟ್ಟು ಯಾವ ಕಾರಣಕ್ಕೂ ಈ ಕೃತಿ ಪುನಃ ಹೊರ ಬೀಳದಂತೆ ಮಾಡಬೇಕೆಂದು ಆಗಿನ ಸರ್ಕಾರದ ಮೇಲೆ ಒತ್ತಡ ತಂದರು. ಇನ್ನೊಂದು ಸ್ವಾರಸ್ಯಕರ ವಿಷಯವೇನೆಂದರೆ ಈ ಕೃತಿಗೆ ನಾಗರತ್ನಮ್ಮ ಬರೆದ ಪೀಠಿಕೆ ಅಂದಿನ ಸಮಾಜದಲ್ಲಿ ಭಾರೀ ಚರ್ಚೆಯನ್ನೇ ಹುಟ್ಟುಹಾಕಿತು. ಒಬ್ಬ ವೇಶ್ಯೆ, ಇನ್ನೊಬ್ಬ ವೇಶ್ಯೆಯನ್ನು ಸಮರ್ಥಿಸಿ ಹೊಗಳಿ ಬರೆದದ್ದು ಈ ಚರ್ಚೆಯ ಪ್ರಮುಖ ಅಂಶ ವಾಯಿತು. ಇದೇ ಸಮಯದಲ್ಲಿ ತೆಲುಗಿನ ಪ್ರಮುಖ ಲೇಖಕರೊಬ್ಬರು ಇದಕ್ಕಿಂತ ಅಶ್ಲೀಲ ವರ್ಣನೆಗಳಿಂದ ಕೂಡಿದ 'ರಸಿಕ ಮನೋರಂಜನಂ' ಎಂಬ ಕೃತಿಯನ್ನು ಬರೆದು ಅದನ್ನು ಪ್ರಕಟಿಸಿ ತಮ್ಮ ಅಧಿಕಾರ ಬಲದಿಂದ ಅದನ್ನು ವಿಶ್ವವಿದ್ಯಾಲಯ ಗಳಿಗೆ ಪಠ್ಯಪುಸ್ತಕವನ್ನಾಗಿ ಮಾಡಿದ್ದು, ಬೆಂಗಳೂರು ನಾಗರತ್ನಮ್ಮ ಅದಕ್ಕೆ ತೀವ್ರವಾಗಿ ಪ್ರತಿಕ್ರಿಯಿಸಿದರು :

''ಮುದ್ದು ಪಳನಿ ಒಳ್ಳೆಯ ನೃತ್ಯಪಟು, ಸಂಗೀತದಲ್ಲಿ ನಿಷ್ಣಾತಳಾಗಿದ್ದಳು. ಒಳ್ಳೆಯ ಕವಯಿತ್ರಿಯೂ ಆಗಿದ್ದಳು. ಅವಳ ಕಾಲದಲ್ಲಿ ರಾಜಸಭೆಯಲ್ಲಿ ಅವಳ ಬಗ್ಗೆ ಎಲ್ಲರಿಗೂ ತುಂಬ ಗೌರವವಿತ್ತು, ಆಕೆ ಬರೆದ ಕಾವ್ಯ ಶೃಂಗಾರ ವರ್ಣನೆಗಳಿಂದ ಕೂಡಿದೆಯೆಂದೂ, ಆಕೆ ವೇಶ್ಯೆ ಎಂದೂ ವೀರೇಶಲಿಂಗಂ ಪಂತುಲು ಮತ್ತಿತರ ವಿಮರ್ಶಕರು ಜರಿದು ಆಕೆಯ ಕೃತಿಯನ್ನು ತಿರಸ್ಕರಿಸಿದರು. ಆದರೆ ಅದಕ್ಕಿಂತ ಹಸಿ ಹಸಿಯಾದ ವಿಕೃತ ಕಾಮನೆಯ ಲೈಂಗಿಕ ವರ್ಣನೆಗಳಿಂದ ಕೂಡಿದ ರಚನೆಗಳನ್ನು ಗೌರವನೀಯರೆನಿಸಿದ ಪುರುಷ ಸಾಹಿತಿಗಳು ಬರೆದುದಲ್ಲದೇ ಅದನ್ನೇ ವಿದ್ಯಾರ್ಥಿಗಳಿಗೆ ಓದಲು ಒತ್ತಾಯಿಸುತ್ತಾರಲ್ಲ, ಅದರ ಬಗ್ಗೆ ವಿಮರ್ಶಕರೇನು ಹೇಳುತ್ತಾರೆ ?'' ಎಂದು ಸವಾಲೆಸೆದರು.

ಇನ್ನೊಂದು ದುರದೃಷ್ಟದ ಸಂಗತಿ ಎಂದರೆ ಮುದ್ದು ಪಳನಿಯ 'ರಾಧಿಕಾ ಸಾಂತ್ವನ'ದ ಕಾವ್ಯದ ಪ್ರತಿಗಳನ್ನು ಮುಟ್ಟುಗೋಲು ಹಾಕಿಕೊಳ್ಳುವ ನೆಪದಲ್ಲಿ ವಾವಿಳ್ಳ ಪ್ರಕಾಶಕರ ಅಂಗಡಿಯಲ್ಲಿದ್ದ ಅನೇಕ ಅಪರೂಪದ ಸಾಹಿತ್ಯಿಕವಾಗಿ, ಭಾಷಾ ಶಾಸ್ತ್ರದ ದೃಷ್ಟಿ, ಸಂಸ್ಕೃತಿಯ ದೃಷ್ಟಿಯಿಂದ ಅತ್ಯುತ್ತಮವೆನಿಸಿದ್ದ ಹಲವಾರು ಪುಸ್ತಕಗಳನ್ನು ಪೊಲೀಸರು ನಿರ್ದಾಕ್ಷಿಣ್ಯವಾಗಿ ಸುಟ್ಟುಹಾಕಿದರು. ಅವುಗಳಲ್ಲಿ ನಾರಾಯಣಾಮಾತ್ಯನು ಬರೆದ 'ಹಂಸವಿಂಶತಿ' ಮತ್ತು ಹಲವಾರು ಸಂಶೋಧಕ ಉತ್ತಮ ಪುಸ್ತಕಗಳೂ ಪುನಃ ಸಿಗದಂತೆ ಸುಟ್ಟು ಕರಕಲಾದವು.

೧೯೫೭ರಲ್ಲಿ ಟಂಗಟೂರಿ ಪ್ರಕಾಶಂ ಆಂಧ್ರದ ಮುಖ್ಯಮಂತ್ರಿಯಾದಾಗ ಮುದ್ದು ಪಳನಿಯ 'ರಾಧಿಕಾ ಸಾಂತ್ವನ'ದ ಮೇಲಿನ ನಿರ್ಬಂಧವನ್ನು ತೆಗೆದುಹಾಕಲಾಯಿತು. ನಾಗರತ್ನಮ್ಮನವರಿಗೆ ಪುನಃ ಆ ಕೃತಿಯನ್ನು ಪ್ರಕಟಿಸಲು ಅನುಮತಿ ದೊರಕಿ ೧೯೫೨ರಲ್ಲಿ ವಾವಿಳ್ಳ ಪ್ರಕಾಶನದವರೇ ನಾಗರತ್ನಮ್ಮನವರ ಪರವಾಗಿ ಆ ಕೃತಿಯನ್ನು ಪ್ರಕಟಿಸಿದರು.

ಇಲ್ಲಿ ಕಾಣುವ ವಿಚಿತ್ರವೆಂದರೆ ಮುದ್ದು ಪಳನಿ ಬದುಕಿದ್ದ ಕಾಲದಲ್ಲಾಗಲೀ ನಂತರ ಒಂದು ಶತಮಾನದವರೆಗೆ 'ರಾಧಿಕಾ ಸಾಂತ್ವನ' ಕಾವ್ಯದ ಬಗ್ಗೆ ಯಾರೂ ಚಕಾರವೆತ್ತದೆ, ಆಕೆ ಮಹಾನ್ ಕವಯಿತ್ರಿ ಎಂದು ಸನ್ಮಾನಿಸಿ, ನಂತರ ನೂರಾರು ವರುಷಗಳ ನಂತರ ಆಕೆಯ ಕಾವ್ಯ ಅಶ್ಲೀಲ ಕೃತಿ ಎಂದು ವಿಮರ್ಶಕರು ಅಂದಿನ ಸರ್ಕಾರದ ಮೇಲೆ ಒತ್ತಡ ತಂದು ಅದನ್ನು ಮುಟ್ಟುಗೋಲು ಹಾಕಿಕೊಳ್ಳುವ ನೆಪದಲ್ಲಿ ಒಬ್ಬ ಖ್ಯಾತ ಪ್ರಕಾಶಕರ ಅಂಗಡಿಯಲ್ಲಿದ್ದ ಅಮೂಲ್ಯ ಕೃತಿಗಳನ್ನೆಲ್ಲ ಸುಟ್ಟು ಹಾಕಿದ್ದು ಎಂತಹ ದುರ್ದೈವದ ಸಂಗತಿ !




ಆದರೆ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಮೊಟಕುಗೊಳಿಸುವುದು, ಲೇಖಕಿಯರು ಸಮಕಾಲೀನ ಸಾಮಾಜಿಕ, ರಾಜಕೀಯ ಚಟುವಟಿಕೆಗಳ ಕುರಿತು ವ್ಯಾಖ್ಯಾನ ಮಾಡಿದಾಗ ಇಂದಿನ ಬಹುತೇಕ ದೇಶಗಳ, ರಾಜ್ಯಗಳ ಸರ್ಕಾರಗಳು ತಲೆಹಾಕಿ ಆ ಕೃತಿಗಳ ವಿರುದ್ಧ ಕ್ರಮ ತೆಗೆದುಕೊಳ್ಳುವುದು ಒಂದು ಕೆಟ್ಟ ಸಂಪ್ರದಾಯವಾಗಿಬಿಟ್ಟಿದೆ. ಕೆಲ ದೇಶಗಳಲ್ಲಿ ಅಂತೂ ಕಠಿಣತರ ಕಾನೂನುಬದ್ಧ ಕಾಯಿದೆಯೇ ಆಗಿದೆ.

ಕೆಲ ವರುಷಗಳ ಹಿಂದೆ ಬಾಂಗ್ಲಾ ಲೇಖಕಿ ಹಾಗೂ ವೈದ್ಯೆ ತಸ್ಲೀಮಾ ನಸರೀನ್ ಬರೆದ ಎರಡು ಕೃತಿಗಳು ಆಕೆಯ ಬದುಕಿನಲ್ಲಿ ಭಾರಿ

ಅಲ್ಲೋಲ-ಕಲ್ಲೋಲವನ್ನೇ ಸೃಷ್ಟಿಸಿ ಅದು ಇಂದಿಗೂ ತಣ್ಣಗಾಗಿಲ್ಲ. ಈಕೆ ಬರೆದ 'ಲಜ್ಜಾ' ಎಂಬ ಕಾದಂಬರಿ. ಇನ್ನೊಂದು, ಬಾಂಗ್ಲಾದ ನಿಯತಕಾಲಿಕೆಗಳಲ್ಲಿ ಮತ್ತು ದೈನಿಕ ಪತ್ರಿಕೆಗಳಲ್ಲಿ ಪ್ರಕಟಿತಗೊಂಡ ಲೇಖನಗಳ ಸಂಗ್ರಹ. ಈ ಎರಡು ಕೃತಿಗಳಿಂದ ತಸ್ಲೀಮಾ ವಿವಾದಗ್ರಸ್ತ ಲೇಖಕಿಯಾಗಿ ಗುರುತಿಸಲ್ಪಡುವುದರ ಜೊತೆಗೆ ವಿಶ್ವಾದ್ಯಂತ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಧಕ್ಕೆಯೊಡ್ಡುವ ಮುಸ್ಲಿಂ ಮೂಲಭೂತವಾದಿಗಳ ಕೆಂಗಣ್ಣಿಗೆ ಗುರಿಯಾಗಿ, ಅವರಿಂದ ಮರಣದಂಡನೆಯ 'ಮನ್ನಣೆ'ಗೊಳಗಾಗಿ ಸಲ್ಮಾನ್ ರಷ್ದಿಯಂತೆ ಅನುಕ್ಷಣವೂ ಜೀವಭಯವನ್ನೆದುರಿಸುತ್ತಿರುವ ಆಧುನಿಕ ಕಾಲದ ಪ್ರಥಮ ಮಹಿಳೆಯಾಗಿದ್ದಾಳೆ.

ಬಾಂಗ್ಲಾ ದೇಶದಲ್ಲಿನ ಅಲ್ಪಸಂಖ್ಯಾತ ಹಿಂದೂಗಳ ಮೇಲೆ ಬಹುಸಂಖ್ಯಾತ ಮುಸ್ಲಿಮರು ನಡೆಸಿದ ದಬ್ಬಾಳಿಕೆ ದೌರ್ಜನ್ಯದ ಕಾರಣದಿಂದ, ಹಿಂದೂಗಳು ನಿರ್ಗತಿಕರಾಗಿ ದೇಶ ಬಿಟ್ಟು ಓಡಿಹೋಗಬೇಕಾದ ಪರಿಸ್ಥಿತಿಯ ಕಾರಣಗಳನ್ನು ಈ 'ಲಜ್ಜಾ' ಕೃತಿ ವಿವರಿಸಿದೆ. ಈಕೆ ತನ್ನ ವಾದ ಸಮರ್ಥನೆಗೆ ೧೯೯೨ರ ಡಿಸೆಂಬರ್ ೬ರಂದು ಅಯೋಧ್ಯೆಯ ರಾಮಜನ್ಮಭೂಮಿಯಲ್ಲಿನ ವಿವಾದಗ್ರಸ್ತ ಕಟ್ಟಡ ನೆಲಸಮವಾದ ನಂತರ ಬಾಂಗ್ಲಾದೇಶದಲ್ಲಿ ರೊಚ್ಚಿಗೆದ್ದ ಬಹುಸಂಖ್ಯಾತ ಮುಸ್ಲಿಮರ ಕ್ರೌರ್ಯಕ್ಕೆ ಹೆದರಿ ಭಾರತಕ್ಕೆ ಓಡಿಹೋದ ಹಿಂದೂ ಕುಟುಂಬಗಳ ಕಥೆಯನ್ನಾಧರಿಸಿ ಕಾದಂಬರಿ ರೂಪದಲ್ಲಿ ಬರೆದಿದ್ದಾಳೆ. ಆಗ ಬಾಂಗ್ಲಾದೇಶ 'ಲಜ್ಜಾ' ಕೃತಿಯನ್ನು ನಿಷೇಧಿಸಿದ್ದು ಮಾತ್ರವಲ್ಲ ತಸ್ಲೀಮಾ ಕಳ್ಳತನದಿಂದ ಕಲ್ಕತ್ತೆಗೆ ಪರಾರಿಯಾಗಲಿದ್ದಾಳೆ ಎಂಬ ಆರೋಪ ಹೊರಿಸಿ ಆಕೆಯ ಪಾಸ್‌ಪೋರ್ಟನ್ನು ವಶಪಡಿಸಿಕೊಂಡಿತು. ೧೯೯೪ರ ಜೂನ್ ತಿಂಗಳಲ್ಲಿ ಆಕೆಯನ್ನು ಅರೆಸ್ಟ್ ಮಾಡಬೇಕೆಂದು ಆಜ್ಞೆ ಹೊರಡಿಸಲಾಯಿತು. ಆಗಿನಿಂದ ಆಕೆಯ ಅಜ್ಞಾತವಾಸ ಆರಂಭವಾಯಿತು. ಆಗ ತಸ್ಲೀಮಾ ವಿರುದ್ಧ 'ಫತ್ವಾ' ಜಾರಿಯಾದಾಗ ಆಕೆಗೆ ನೆರವು ನೀಡಲು ಭಾರತದ ಕವಿಗಳು, ಪ್ರಬಂಧಕಾರರು ಮತ್ತು ಕಾದಂಬರಿಕಾರರು ರಚಿಸಿಕೊಂಡಿರುವ (ಪಿ.ಇ.ಎನ್.) ಎಂಬ ಸಂಸ್ಥೆ ಮುಂದೆ ಬಂದಿತು. ಈ ಸಂಸ್ಥೆಗೆ ಸೇರಿದ ಲೇಖಕಿಯರೆಲ್ಲ ಸೇರಿ ತಸ್ಲೀಮಾರನ್ನು ಕ್ಷೇಮವಾಗಿ ಸ್ವೀಡನ್ ದೇಶಕ್ಕೆ ಹೋಗಲು ವ್ಯವಸ್ಥೆ ಮಾಡಿದರು. ಅಂದಿನಿಂದ ಈಕೆ ಸ್ವೀಡನ್, ಜರ್ಮನಿ, ಫ್ರಾನ್ಸ್, ನಾರ್ವೆ, ಅಮೇರಿಕಾ... ಹೀಗೆ ದೇಶದಿಂದ ದೇಶಕ್ಕೆ ಹೋಗಿ ಆಶ್ರಯ ಬೇಡುತ್ತ ಕೊನೆಗೆ ಭಾರತದ ಆಶ್ರಯ ಬೇಡಿ ಭಾರತದಲ್ಲೇ ಆಗಿಂದಾಗ್ಗೆ ಜಾಗ ಬದಲಿಸುತ್ತ ಸದಾ ಭಯದ ವಾತಾವರಣದಲ್ಲಿ ಬದುಕುತ್ತಿದ್ದಾರೆ.

ಈ ಘಟನೆಯಿಂದಾಗಿ ಜಗತ್ತಿನ ಮಹಿಳಾ ಸಾಹಿತಿಗಳಲ್ಲಿ ಒಂದು ರೀತಿಯ ಜಾಗೃತಿಯುಂಟಾಗಿ, ಯಾವುದೇ ಲೇಖಕಿಯರ ಅಭಿವ್ಯಕ್ತಿಸ್ವಾತಂತ್ರ್ಯಕ್ಕೆ ಮತವಾಗಲೀ, ಸರ್ಕಾರವಾಗಲೀ, ಆಡಳಿತ ವ್ಯವಸ್ಥೆಯಾಗಲೀ ಅಡ್ಡಿಪಡಿಸಬಾರದೆಂದು ವಿಶ್ವದ ಕೆಲ ಲೇಖಕಿಯರು ಜಾಗತಿಕ ಸಮ್ಮೇಳನಗಳನ್ನು ನಡೆಸಿದರು. ೧೯೯೫ರಲ್ಲಿ ನಡೆದ, ಬೀಜಿಂಗ್ ಸಮ್ಮೇಳನದಲ್ಲಿ ಲೇಖಕಿಯರೆಲ್ಲರೂ ಸೇರಿ 'ಪವರ್ ಆಫ್ ದಿ ವರ್ಡ್' ಎಂಬ 'ಶಬ್ದ ಶಕ್ತಿ'ಯ ಹೆಸರಿನಲ್ಲಿ ಒಂದು ವೇದಿಕೆಯನ್ನು ನಿರ್ಮಿಸಿಕೊಂಡು ಸೆನ್ಸಾರ್‌ಷಿಪ್‌ಅನ್ನು ಎದುರಿಸಲು ಸಿದ್ಧರಾಗಬೇಕೆಂದು ತೀರ್ಮಾನಿಸಿದರು. ಆಗ 'ಕಾಲಿಫರ್ ವಿಮೆನ್' ಎಂಬ ಪತ್ರಿಕೆಯ ಸಂಪಾದಕಿಯಾಗಿದ್ದ ರೀತೂ ಮೆನನ್ ಇದರ ರೂಪರೇಷೆಗಳನ್ನು ವಿವರಿಸಿದರು.

ಜಗತ್ತಿನ ಜನಸಂಖ್ಯೆಯಲ್ಲಿ ಅರ್ಧದಷ್ಟಿರುವ ಸ್ತ್ರೀಯರು ಇಂದು ಯಾವುದೋ ಒಂದು ರೂಪದಲ್ಲಿ ಕೌಟುಂಬಿಕ, ಸಾಮಾಜಿಕ, ಆರ್ಥಿಕ, ನೈತಿಕ ಸಮಸ್ಯೆಗಳನ್ನೆದುರಿಸುತ್ತಿದ್ದಾರೆ. ಇಂದು ಮಹಿಳೆಯರು ಯಾವ ದೇಶದಲ್ಲಿದ್ದರೂ, ಅವರ ಸಮಸ್ಯೆಗಳು ಭಿನ್ನ ಭಿನ್ನ ಸ್ವರೂಪದವುಗಳಾಗಿದ್ದರೂ ಅವುಗಳ ಸ್ವಭಾವ ಒಂದೇ ಆಗಿರುತ್ತದೆ. ಸಮಸ್ಯೆಗಳು ಬೆಳೆದು ಪರಾಕಾಷ್ಠೆಗೆ ತಲುಪಿದಾಗ ಪ್ರತಿಭಟನೆ ಸಹಜ. ಈ ಎರಡೂ ಒಂದು ಹಂತಕ್ಕೆ ಬಂದಾಗಲೇ ಚಳುವಳಿ ಆರಂಭವಾಗುತ್ತದೆ. ಇದು ಎಲ್ಲ ದೇಶಗಳಲ್ಲಿನ ಹಾಗೂ ಸಮಾಜಗಳಲ್ಲಿನ ಸಹಜ ಪ್ರಕ್ರಿಯೆ. ಆದರೆ ವಿಮರ್ಶಕರು ಮಾನದಂಡ ನಿರ್ಣಯಿಸುವಾಗ ಪುರುಷರಿಗೊಂದು ಬಗೆಯಲ್ಲಿ, ಸ್ತ್ರೀಯರಿಗೊಂದು ಬಗೆಯಲ್ಲಿ ಬೇರೆಯಾಗಿಯೇ ತೀರ್ಮಾನಿಸುತ್ತಾರೆ. ನಾವು ಇಂದು ವಿಶ್ವದಲ್ಲಿ ರಚಿತವಾಗುತ್ತಿರುವ ಸ್ತ್ರೀಯರ ಬರವಣಿಗೆಗಳ ಬಗೆಗೆ ಆಯಾ ದೇಶದ ವಿಮರ್ಶಕರು, ವಿದ್ವಜ್ಜನರು ತಳೆದಿರುವ ಧೋರಣೆ ನೋಡಿದಾಗ ತುಂಬ ಆಶ್ಚರ್ಯ ಹಾಗೂ ಖೇದವೆನಿಸುತ್ತದೆ.

ಈಜಿಪ್ಟ್ ದೇಶದ ಪ್ರಮುಖ ಲೇಖಕಿಯೂ ಮನೋವಿಜ್ಞಾನಿಯೂ ಆಗಿದ್ದ ಡಾ|| ನಾವಲ್ ಎಲ್. ಸಾದವಿ ಬರೆದ 'ಫಿರಡೌಸಿ' ಎಂಬ ಕಾದಂಬರಿಯನ್ನು ಅರಬಿಕ್ ಭಾಷೆಯಲ್ಲಿ ಬರೆದು ೧೯೭೮ರಲ್ಲಿ ಪ್ರಕಟಿಸಿದಾಗ ಆ ಸರ್ಕಾರ ಆ ಕಾದಂಬರಿಯನ್ನು ಮುಟ್ಟುಗೋಲು ಹಾಕಿಕೊಂಡು ಆಕೆಯನ್ನೂ ಸೆರೆಮನೆಯಲ್ಲಿಟ್ಟಿತು. ಫಿರಡೌಸಿ ಎಂಬ ಬಡ ಹುಡುಗಿ ಕಡುಬಡತನದಲ್ಲೂ ಓದಿ ವಿದ್ಯಾವಂತೆಯಾಗಿ ಕೆಲಸ ಹುಡುಕಲು ಪರದಾಡುತ್ತಾಳೆ. ಆದರೆ ಅವಳ ಸುತ್ತಲಿನ ಸಮಾಜ ಅವಳನ್ನೊಬ್ಬ ಮನುಷ್ಯಳನ್ನಾಗಿ ನೋಡದೇ ತಮ್ಮ ತಮ್ಮ ಕಾಮನೆಗಳನ್ನು ಈಡೇರಿಸಿಕೊಳ್ಳಲು ಅವಳನ್ನು ಪಾಪಕೂಪಕ್ಕೆ ತಳ್ಳುತ್ತಾರೆ. ಕೊನೆಗೆ ಅವಳನ್ನು ಬದುಕಗೊಡದೆ, ಅವಳಿಗೆ ಮರಣ ಶಿಕ್ಷೆ ವಿಧಿಸುತ್ತಾರೆ. ಅವಳು ತನ್ನ ಆತ್ಮಕಥೆಯನ್ನು ಬರೆಯುವಂತೆ ಡಾ|| ನಾವಲ್ ಸಾದವಿಗೆ ಹೇಳಿ ಪ್ರಾಣಬಿಡುತ್ತಾಳೆ. ಅಲ್ಲಿ ನಿಜವಾಗಿಯೂ ನಡೆದ ಕಥೆ ಅದು. ಈ ಕಾದಂಬರಿ ಈಜಿಪ್ಟ್‌ನಲ್ಲೆ ಅಲ್ಲದೆ ಅನೇಕ ಮಧ್ಯಪ್ರಾಚ್ಯ ರಾಷ್ಟ್ರಗಳಲ್ಲಿ ನಿಷೇಧಿಸಲ್ಪಟ್ಟಿದ್ದರೂ ಇದಕ್ಕೆ ಫ್ರಾಂಕೋ - ಅರಬಿಕ್ ಬಹುಮಾನ ದೊರೆತಿದೆ.

ವಿಶ್ವವಿಖ್ಯಾತ ಖಳನೆಂದು ಪ್ರಸಿದ್ಧನಾಗಿ ಇತ್ತೀಚೆಗೆ ಅಮೆರಿಕೆಯ ಮಿಲಿಟರಿ ಪಡೆಯಿಂದ ಹತನಾದ ಒಸಾಮಾ ಬಿನ್ ಲಾಡೆನ್‌ನ ಅತ್ತಿಗೆ ಬರೆದ 'Inside the Kingdom' ಎಂಬ ಕೃತಿ ಅರೇಬಿಯಾ ರಾಜ್ಯದಲ್ಲಿ ನಿಷೇಧಿಸಲ್ಪಟ್ಟು, ಒಸಾಮಾನ ಅಣ್ಣನ ಹೆಂಡತಿ ಈ ಕೃತಿಯ ಲೇಖಕಿ ಕಾರ್‌ಮೆನ್ ಬಿನ್ ಲಾಡೆನ್ ತನ್ನ ಮಕ್ಕಳೊಂದಿಗೆ ಅಮೆರಿಕೆಯಲ್ಲಿ ನೆಲಸಿದ್ದರೂ ಪಡಬಾರದ ಕಷ್ಟಗಳನ್ನೂ ಪಟ್ಟಿದ್ದಲ್ಲದೇ ಇದೀಗ ಅಮೆರಿಕ ಆಕೆಯನ್ನು ತಮ್ಮ ದೇಶದಿಂದ ದೂರ ಇಡಲು ನಿರ್ಧರಿಸಿದೆ. ಇತ್ತ ಅರೇಬಿಯಾಕ್ಕೂ ಸೇರದೆ ಅತ್ತ ಅಮೆರಿಕಾದಲ್ಲೂ ಇರಲಾಗದ ಪರಿಸ್ಥಿತಿಯಲ್ಲಿದ್ದಾಳೆ ಒಂದು ಪುಸ್ತಕ ಬರೆದ ಪಾಪಕ್ಕೆ ಗುರಿಯಾಗಿ ಕಾರ್‌ಮೆನ್ ಬಿನ್ ಲಾಡೆನ್.

ಹೀಗೆಯೇ ಕಳೆದ ದಶಕದಲ್ಲಿ ಮಧ್ಯಪ್ರಾಚ್ಯಕ್ಕೆ ಸೇರಿದ ಒಬ್ಬ ರಾಜಕುಮಾರಿ ಬರೆದ 'ಪ್ರಿನ್ಸೆಸ್' ಎಂಬ ಕೃತಿಯನ್ನು ಮುಟ್ಟುಗೋಲು ಹಾಕಿಕೊಳ್ಳಲಾಯಿತು. ಪಾಕಿಸ್ತಾನದ ಡಾ|| ರುಕ್ಸಾನಾ ಅಹಮದ್ ಸಂಕಲಿಸಿದ 'ವಿ ಸಿನ್‌ಫುಲ್ ವಿಮೆನ್' ಎಂಬ ಕವನ ಸಂಕಲನದಲ್ಲಿ (ನಾವು ಪಾಪಿ ಮಹಿಳೆಯರು) ಅಲ್ಲಿನ ಲೇಖಕಿಯರು ತಮ್ಮ ನೋವನ್ನು ತೋಡಿಕೊಂಡಿದ್ದಾರೆ. ಹೀಗೆಯೇ ನೊಬೆಲ್ ಪ್ರಶಸ್ತಿ ಪಡೆದ ಆಫ್ರಿಕಾ-ಅಮೆರಿಕದ ಸ್ತ್ರೀವಾದಿ ಎಂದು ಖ್ಯಾತಳಾಗಿರುವ ಟೋನಿ ಮಾರಿಸನ್, ಟ್ರಿನಿಡಾಡಿನ ಕಪ್ಪು ಕವಯಿತ್ರಿ ಕ್ಲೆರ್ ಹ್ಯಾರಿಸ್, 'ನರ್ವಸ್ ಕಂಡೀಷನ್ಸ್' ಎಂಬ ಕೃತಿ ಬರೆದ ಟೆಟ್ಸಿಡೆಂಗುರಾಂಬಾ, 'ಎಲ್ಲೋ ವಾಲ್ ಪೇಪರ್' ಎಂಬ ಕೃತಿ ರಚಿಸಿದ ಚಾರ್ಲೆಟ್ ಪರ್ಕಿನ್ಸ್ ಗಿಲ್ಮನ್, ಏಂಜೆಲಾ ಡೇವಿಸ್ – ಮುಂತಾದವರು ಈ ಸಂದರ್ಭದಲ್ಲಿ ನಮ್ಮ ನೆನಪಿಗೆ ಬರುತ್ತಾರೆ. ಇಂದಿನ ಮಹಿಳೆಯರ ಪರಿಸ್ಥಿತಿಯನ್ನು ವಿವರಿಸುವ ಕೇಟ್ ಮಿಲೆಟ್ ಬರೆದ 'ಸೆಕ್ಸ್ ಪಾಲಿಟಿಕ್ಸ್' ನಮಗೊಂದು ನಿಜ ಸ್ಥಿತಿಯ ಚಿತ್ರಣವನ್ನು ಕೊಡುತ್ತದೆ.

ಭಾರತ ದೇಶದಲ್ಲಿ ಸ್ತ್ರೀಪರವಾದ ಚಳುವಳಿಗಳು, ಸ್ತ್ರೀವಾದದ ರಚನೆಗಳು ಎಲ್ಲ ಭಾಷೆಗಳಲ್ಲಿ ಸಾಕಷ್ಟು ರಚಿತವಾಗುತ್ತಿವೆ. ವಿವಿಧ ಸಾಮಾಜಿಕ, ಆರ್ಥಿಕ ಹೋರಾಟಗಳಲ್ಲಿ ಮಹಿಳೆಯರು ನಿರ್ವಹಿಸಿದ ಪಾತ್ರಗಳ ಕುರಿತು ಇಲೀನಾ ಸೇನ್ ಬರೆದ 'ಎ ಸ್ಪೇಸ್ ವಿತಿನ್ ದಿ ಸ್ಟ್ರಗಲ್' ಒಂದು ಉತ್ತಮ ಉದಾಹರಣೆ. ಇಂದು ಹಲವಾರು ವಿಧವಾಗಿ ಹೋರಾಡುತ್ತಿರುವುದರ ಫಲವಾಗಿ ನಮ್ಮ ಮಹಿಳೆಯರಿಗೆ ಅಭಿವ್ಯಕ್ತಿ ಹಾಗೂ ಬೌದ್ಧಿಕ ಸ್ವಾತಂತ್ರ್ಯ ದೊರೆತೀತೆಂದು ನಿರೀಕ್ಷಿಸೋಣವೇ ?

**ನಿರುಪಮಾ**
ನಂ. ೮-೪, ೭ನೇ ಅಡ್ಡರಸ್ತೆ, ೮ನೇ ಮುಖ್ಯರಸ್ತೆ
೪ನೇ ಬ್ಲಾಕ್, ಬಿ.ಇ.ಎಲ್. ಬಡಾವಣೆ
ವಿದ್ಯಾರಣ್ಯಪುರ, ಬೆಂಗಳೂರು - ೫೬೦ ೦೯೭






**ರಾಮದುರ್ಗಾ ಸಂಸ್ಥಾನ : ವಿಮೋಚನಾ ಹೋರಾಟ**

*ಡಾ|| ಎ. ಬಿ. ವಗ್ಗರ, ಎಂ. ಆರ್. ಜರಕುಂಟಿ*

**ಪುಟ : xxiv + ೧೨೦ = ೧೪೪**

**ಬೆಲೆ : ರೂ. ೮೦**

**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ ಹಾಸ್ಟೆಲ್ ಗದಗ - ೫೮೨ ೧೦೧

*ಚರಿತ್ರೆಯ ಒಂದು ಭಾಗವಾಗಿ ರಾಮದುರ್ಗ ಸಂಸ್ಥಾನದ ಆಡಳಿತಾತ್ಮಕ ಸ್ವರೂಪದ ಜೊತೆಗೆ ಪ್ರಜೆಗಳ ವಿಮೋಚನಾ ಹೋರಾಟವನ್ನು ಪರಿಚಯಿಸಲಾಗಿದೆ. ಬ್ರಿಟಿಷ್ ಆಡಳಿತದ ನಿಯಂತ್ರಣ ಹೊಂದಿದ್ದ ಇಂತಹ ಸಂಸ್ಥಾನಗಳು ತಮ್ಮ ಅಸ್ತಿತ್ವಕ್ಕಾಗಿ ಆಂಗ್ಲರೊಂದಿಗೆ ಹೋರಾಡಿದರೆ, ಸಂಸ್ಥಾನದ ದಬ್ಬಾಳಿಕೆ ವಿರುದ್ಧ ಇನ್ನೊಂದು ಹಂತದಲ್ಲಿ ಅಲ್ಲಿನ ಪ್ರಜೆಗಳೇ ಬಂಡಾಯ ಎದ್ದಿದ್ದರು. ರಾಮದುರ್ಗದ ಅಂದಿನ ರಾಜಕೀಯ ಹಿನ್ನೆಲೆ, ಆರ್ಥಿಕ ಸ್ಥಿತಿ, ಶೈಕ್ಷಣಿಕ ವ್ಯವಸ್ಥೆ, ಭಾಷಾ ಸಮಸ್ಯೆಗಳ ಸುಳಿಯಲ್ಲಿ ಸಿಲುಕಿದ್ದು ನಮಗೆ ಇಂಥ ಪುಸ್ತಕಗಳಿಂದ ತಿಳಿದುಬರುತ್ತದೆ. ಪ್ರಜೆಗಳ ಹೋರಾಟ ಮುಂದೆ ಸ್ವಾತಂತ್ರ್ಯ ಸಂಗ್ರಾಮದೊಂದಿಗೆ ಕೈಜೋಡಿಸಿ ಸ್ವತಂತ್ರ ಭಾರತದೊಂದಿಗೆ ರಾಮದುರ್ಗ ಸಂಸ್ಥಾನ ವಿಲೀನಗೊಂಡಿತು. ದೇಶದೊಳಗಿನ ಬ್ರಿಟಿಷ್ ಚಕ್ರಾಧಿಪತ್ಯದ ಆಡಳಿತ ವೈಖರಿ, ಅಮಾನವೀಯ ಕೃತ್ಯಗಳ ಪುರಾವೆಗಾಗಿ ಸರಕಾರಿ ದಾಖಲೆಗಳನ್ನಿಲ್ಲಿ ಕಲೆಹಾಕಲಾಗಿದೆ. ಅಪರೂಪದ ಸ್ವಾತಂತ್ರ್ಯಪೂರ್ವ ಸ್ಥಳೀಯ ಘಟನೆಗಳ ಚಿತ್ರಗಳ ಸಂಗ್ರಹವೂ ಇದೆ. ಬ್ರಿಟಿಷರ ಆಡಳಿತಕ್ಕೆ ಅನುಕೂಲವಾಗಿದ್ದ ಸ್ಥಳೀಯ ಅಧಿಕಾರಿಗಳು, ಕಂದಾಯ ವಿಭಾಗದ ದೊಡ್ಡ ದೊಡ್ಡ ಜಮೀನ್ದಾರರೊಂದಿಗೆ ಶಾಮೀಲಾದ ಇಲ್ಲಿನ ಅಧಿಕಾರಿವರ್ಗದ ವಿರುದ್ಧ ಸಾಕಷ್ಟು ಬಂಡಾಯವೆದ್ದ ಘಟನೆಗಳನ್ನಿಲ್ಲಿ ಓದಬಹುದು. ಸಂಪೂರ್ಣ ಹೋರಾಟದ ವಿವರ ಇಲ್ಲಿ ಲಭ್ಯ.*

**ಸ್ತ್ರೀಪಥ (ಲೇಖನಗಳ ಸಂಗ್ರಹ)**

*ನಾಗಮಣಿ ಎಸ್. ರಾವ್*

**ಪುಟ : ೧೧೨** **ಬೆಲೆ : ರೂ. ೬೫**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ
ಅಂಚೆ ಪೆಟ್ಟಿಗೆ ಸಂಖ್ಯೆ ೫೧೪೫, ಬೆಂಗಳೂರು - ೫೬೦ ೦೦೧

*ಸ್ವಾತಂತ್ರ್ಯೋತ್ತರ ಕಾಲದ ಮಹಿಳೆ ಸಾಗಿಬಂದ ದಾರಿಯಲ್ಲಿನ ಪರಿಚಯವೊಂದು ಇಲ್ಲಿ ಸಿಗುತ್ತದೆ. ಆಧುನಿಕ ಯುಗದಲ್ಲಿ ಒದಗಿಬಂದ ಪೂರಕ ಅವಕಾಶಗಳನ್ನು ಸರಿಯಾಗಿ ಬಳಸಿಕೊಂಡು ಒಂದಿಷ್ಟು ನೆಮ್ಮದಿಯ ವಾತಾವರಣ ಆಕೆಗೆ ಲಭಿಸಿದ್ದು ಸುಳ್ಳಲ್ಲ. ಕೆಲವು ಶತಮಾನಗಳ ಹಿಂದಿನ ಮಹಿಳೆಗೆ ಹೋಲಿಸಿದಲ್ಲಿ ಅಂದಿನ ದಾರುಣ ಪರಿಸ್ಥಿತಿಯೇನೂ ಇಂದಿಲ್ಲವೆಂದು ಒಪ್ಪಿಕೊಳ್ಳಲೇಬೇಕು. ಸಮುದಾಯದಲ್ಲಿನ ಆಗುಹೋಗುಗಳಲ್ಲಿ ಮತ್ತು ಪ್ರಮುಖ ನಿರ್ಧಾರಗಳಲ್ಲಿ ಆಕೆ ಪಾಲ್ಗೊಳ್ಳುವುದನ್ನು ನಿರಾಕರಿಸಿ ಮರೆಯಲ್ಲಿಯೇ ಇರಿಸಿದಾಗ ಅಧೀನಬಾಳನ್ನು ಬಾಳಬೇಕಾಗಿ ಬಂದದ್ದು ಕೂಡ ಚರಿತ್ರೆಯಲ್ಲಿನ ಯಾವುದೋ ಒಂದು ಕಾಲಘಟ್ಟದಲ್ಲಿ ಮಾತ್ರ. ಹೆಣ್ಣುಮಕ್ಕಳ ರಕ್ಷಣೆಗೆಂದು ಪ್ರಾರಂಭವಾಗಿ ಮುಂದೆ ಆ ಹಿಡಿತ ಬಿಗಿಯಾಗಿ, ಶೋಷಣೆ - ಕ್ರೌರ್ಯದ ಹಂತ ತಲುಪಿ ತೀರ ಇತ್ತೀಚಿನವರೆಗೂ ಮುಂದುವರಿದು ಆಕೆಯ ಉಸಿರುಕಟ್ಟಿದ್ದು ಮಾತ್ರ ನಿಜ. ಇಪ್ಪತ್ತನೆಯ ಶತಮಾನದ ಸ್ತ್ರೀ ಬಿಡುಗಡೆಗಾಗಿ ಹಂಬಲಿಸಿದ್ದಾಳೆ. ಇಂದಿನ ಪರಿಸರದಲ್ಲಿ ಆಕೆಗೆ ಸಹೃದಯಿ ಪುರುಷ ವರ್ಗದಿಂದಲೂ ಸಹಕಾರ ದೊರೆಯುತ್ತಿದೆ. ಪುರುಷರಿಗಾಗಿ ಮಾತ್ರವಾಗಿದ್ದ ಕ್ಷೇತ್ರಗಳಲ್ಲೂ ಆಕೆ ಛಾಪು ಮೂಡಿಸುತ್ತಿದ್ದಾಳೆ. ಇಲ್ಲಿನ ಲೇಖನಗಳು ಈ ಬಗ್ಗೆ ಧಾರಾಳ ಮಾಹಿತಿ ನೀಡಿವೆ. ಬೀಜಿಂಗ್‌ನಲ್ಲಿ ನಡೆದ ನಾಲ್ಕನೆಯ ಬೃಹತ್ ವಿಶ್ವ ಮಹಿಳಾ ಸಮ್ಮೇಳನವು ಮಹಿಳೆ ಜಾಗತಿಕವಾಗಿ ಗಳಿಸಿದ ಸ್ಥಾನಮಾನವನ್ನು ಸೂಚಿಸುತ್ತದೆ. ಮಹಿಳೆಗೆ ದೊರಕಿದ ಈ ಸ್ವಾತಂತ್ರ್ಯ ಸ್ವೇಚ್ಛೆಯಾಗದಂತೆ ಜಾಗ್ರತೆಯಿಂದಿರಬೇಕಾದ ಹೊಣೆ ಆಕೆಯದು.*




**ಜನಕಾವ್ಯದೃಷ್ಟಿ (ಸಾಹಿತ್ಯ ವಿಮರ್ಶೆ)**

*ಬಿ. ಎ. ಸನದಿ*

**ಪುಟ : ೮೮** **ಬೆಲೆ : ರೂ. ೫೫**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ
ಅಂಚೆ ಪೆಟ್ಟಿಗೆ ಸಂಖ್ಯೆ ೫೧೪೫, ಬೆಂಗಳೂರು - ೫೬೦ ೦೦೧

*ಕವಿ ಬಿ. ಎ. ಸನದಿ ಇಲ್ಲಿ ಇತರರ ಕವನಗಳನ್ನು ವಿವೇಚನಾತ್ಮಕ ಮತ್ತು ವಿಮರ್ಶಾತ್ಮಕವಾಗಿ ವಿಶ್ಲೇಷಿಸಿದ್ದಾರೆ. ಕಾವ್ಯ ಜನರನ್ನು ತಲುಪಬೇಕು, ಅದು ಸಮುದಾಯದ ಒಳಿತಿಗಿರಬೇಕು, ಅದರಿಂದ ಏನಾದರೂ ಸಾಧಿತವಾಗಬೇಕು ಎಂದು ನಂಬಿದವರು ಸನದಿ. ಇದಕ್ಕೆ ಖಲಿಲ್ ಗಿಬ್ರಾನ್‌ನ ರೂಪಕ ಕತೆಯೊಂದರ ಸಾರಾಂಶವನ್ನು ಪುಸ್ತಕದಲ್ಲಿ ಉಲ್ಲೇಖಿಸಿದೆ: 'ಒಂದು ಮಹಾಕಾವ್ಯ ರಚಿತವಾಗಿ ಗ್ರಂಥಾಲಯ ಸೇರಿ ಅಥವಾ ಪಂಡಿತರು, ರಾಜ ಮಹಾರಾಜರ ಅರಮನೆಗಳಲ್ಲಿ ಭದ್ರವಾಗಿ ಬೆಚ್ಚಗೆ ಅಲಂಕಾರದ ವಸ್ತುವಿನಂತೆ ಸುದೀರ್ಘಕಾಲ ಉಳಿಯಬಹುದು. ಅರ್ಥಪೂರ್ಣವಾದ ಪುಟ್ಟ ಕವನವೊಂದು ಜನರ ಮನಸೂರೆಗೊಂಡು ಎದೆಯಾಳದಿಂದ ಹಾಡಲ್ಪಟ್ಟು, ಹಾಡುವ-ಕೇಳುವ ಎಲ್ಲರಿಗೂ ಸಂತೋಷನೀಡಿ ಮನದಾಳದಲ್ಲಿ ಸ್ಥಿರವಾಗಿ ಉಳಿಯಬಹುದು. ಮೊದಲನೆಯದು ಕಷ್ಟಪಟ್ಟು ಬಾಳಿಸಿದ್ದು; ಎರಡನೆಯದು ತಾನಾಗಿ ಬಾಳಿದ್ದು.' ಸಾಹಿತ್ಯದಲ್ಲಿನ ಶುಷ್ಕ ಮತ್ತು ಆರ್ದ್ರತೆಯ ಪರಿಚಯ. ಇದೇ ಕವಿಯೊಬ್ಬನಿಗಿರಬೇಕಾದ ಜನಕಾವ್ಯದೃಷ್ಟಿ. ಇದು ಎರಡನೆಯ ಮುದ್ರಣ ಆದ್ದರಿಂದ ಇಲ್ಲಿನ ಓದು ನಮ್ಮನ್ನು ಇಪ್ಪತ್ತೈದು ವರ್ಷಗಳಷ್ಟು ಹಿಂದಕ್ಕೆ ಒಯ್ಯುತ್ತದೆ. 'ನಾಳಿನ ಕಾವ್ಯದ ಧ್ಯೇಯಧೋರಣೆ' ಎಂಬ ಇಲ್ಲಿನ ಲೇಖನವೊಂದರಲ್ಲಿ ಅವರು ನೀಡಿದ ಮಾರ್ಗದರ್ಶನದಂತೆ ಕಾವ್ಯ ಸೃಷ್ಟಿಯಾಗಿದೆಯೇ ಎಂಬ ಆತ್ಮಾವಲೋಕನ ನಮಗಿಂದು ಮುಖ್ಯವಾಗುತ್ತದೆ. ಜನರ ನೋವಿಗೆ ಸ್ಪಂದಿಸದ, ಅನ್ಯಾಯಕ್ಕೆ ಪ್ರತಿಭಟಿಸದ ಕಾವ್ಯ ವ್ಯರ್ಥ.*

**ರಂಗಸಾಂಗತ್ಯ**

*ಡಾ|| ವಿಜಯಾ*

**ಪುಟ : xiv + ೨೫೪** **ಬೆಲೆ : ರೂ. ೧೮೦**

**ಇಳಾ ಪ್ರಕಾಶನ,** ನಂ. ೩೬, ೪೦ಅಡಿ ರಸ್ತೆ, ರಾಘವನಗರ, ಎನ್‌ಟಿವೈ ಲೇಔಟ್, ಬೆಂಗಳೂರು - ೫೬೦ ೦೨೬



*ರಂಗಭೂಮಿಯ ಬಗ್ಗೆ ಅಪಾರ ಒಲವು ಮತ್ತು ಶ್ರದ್ಧೆ ತೋರುವ ಡಾ|| ವಿಜಯಾ ಅವರ ಲೇಖನಗಳ ಸಂಗ್ರಹ. ಕೆಲವು ದಶಕಗಳ ಹಿಂದೆ ಸದಭಿರುಚಿಯ ನಾಟಕಗಳ ಪ್ರದರ್ಶನ ಎಲ್ಲರ ಮೆಚ್ಚುಗೆ ಗಳಿಸಿದ್ದು ಅವು ಸಮಾಜದ ಅಂಕುಡೊಂಕುಗಳನ್ನು ತಿದ್ದುವ ಉದ್ದೇಶ ಹೊಂದಿದ್ದವು. ಹೆಸರಾಂತ ನಾಟಕ ಕಂಪೆನಿಗಳು ಇದ್ದವು. ನಾಟಕಗಳೂ ದೃಶ್ಯಮಾಧ್ಯಮವೇ ಆದರೂ ಸುಧಾರಿತಗೊಂಡು ಚಲನಚಿತ್ರವಾಗಿ ಪರಿವರ್ತಿತವಾದಾಗ ಜನರ ಒಲವು ಅತ್ತ ತಿರುಗಿ ಸ್ವಲ್ಪ ಮಟ್ಟಿಗೆ ನಾಟಕಗಳು ಹಿನ್ನಡೆ ಕಂಡವು. ಆದರೂ ರಂಗನಾಟಕಗಳ ಸೊಗಸನ್ನು – ಜೀವಂತಿಕೆಯನ್ನು ಕಂಡವರು ಮಾತ್ರ ಇಲ್ಲಿನ ಲೇಖನಗಳನ್ನು ಬರೆಯಬಲ್ಲರು. ರಂಗಭೂಮಿಗೆ ಸಂಬಂಧಿಸಿದ ಒಂದು ಸಮ್ಯಕ್ ದರ್ಶನವನ್ನು ನೀಡಬಲ್ಲ ಲೇಖನಗಳಿವು. ನಾಟಕದ ಕಥಾವಸ್ತುವಿನಿಂದ ಆದರ ಅಂತಃಸತ್ವವನ್ನು ಹೆಕ್ಕಿ ವಿವರಿಸುವ, ನಟವರ್ಗ-ನಿರ್ದೇಶಕರಲ್ಲಿನ ಅಂತಃಕರಣ-ವ್ಯಕ್ತಿತ್ವವನ್ನು ಪರಿಚಯಿಸುವ, ಬೀದಿನಾಟಕಗಳನ್ನು ಜನರು ಸ್ವೀಕರಿಸಿದಂತೆಯೇ ನಿರಾಕರಿಸಿದ ಕಾರಣವನ್ನು ಹುಡುಕುವ ಸತ್ವಪೂರ್ಣ ಬರಹ. ಕಾಲ ಬದಲಾದಂತೆ, ಬುದ್ಧಿಜೀವಿ ವರ್ಗ ಮರೆಯಾದಂತೆ ಯಾವುದೇ ಸಾಂಕೇತಿಕತೆಯನ್ನು ಸುಲಭವಾಗಿ ಅರ್ಥೈಸಿಕೊಳ್ಳಲಾಗದ ಪ್ರೇಕ್ಷಕ ಎದುರಾದಾಗ ಮಾಧ್ಯಮಗಳ ಪಾತ್ರ ಅತ್ಯಂತ ಶೋಚನೀಯ. ಇಲ್ಲಿ ಲೇಖಕಿ ರಂಗಕಲೆಯ ಉತ್ತುಂಗದ ದಿನಗಳನ್ನು ಸ್ಮರಿಸಿಕೊಳ್ಳುತ್ತ ಇಂದು ಕಲಾಪ್ರಕಾರಗಳು ಬಳಕೆಯಾಗುವ ಸನ್ನಿವೇಶವನ್ನು ನಮ್ಮರಿವಿಗೆ ತಂದಿದ್ದಾರೆ.*

## ಕರ್ನಾಟಕ ಜನಗಣತಿ ೨೦೧೧

*ಡಾ|| ಟಿ. ಆರ್. ಚಂದ್ರಶೇಖರ*

**ಪುಟ : xii + ೧೩೦** **ಬೆಲೆ : ರೂ. ೮೦**

**ನಿರ್ದೇಶಕರು, ಪ್ರಸಾರಾಂಗ,** ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

*ಕರ್ನಾಟಕ ರಾಜ್ಯದ ೨೦೧೧ರ ಜನಗಣತಿಯಿಂದ ಲಭ್ಯವಾದ ಮಾಹಿತಿ ನಮ್ಮನ್ನು ಹಲವು ಬಗೆಯಲ್ಲಿ ಯೋಚಿಸುವಂತೆ ಮಾಡಿದೆ. ವಿವಿಧ ಕ್ಷೇತ್ರಗಳಲ್ಲಿನ ಸಫಲತೆ-ವಿಫಲತೆಗಳನ್ನು ಜನಸಂಖ್ಯೆಯೆಂಬ ಮಾನದಂಡದಿಂದ ಅಳೆದಾಗ ನಾವು ಎಡವಿದ್ದು ಸ್ಪಷ್ಟವಾಗುತ್ತದೆ. ಜನಸಂಖ್ಯಾಸ್ಫೋಟ ಮಾರಕವೆಂದು ಚಿತ್ರಿಸುತ್ತ ಕುಟುಂಬಯೋಜನೆ ಕಡ್ಡಾಯ ಮಾಡಿದರೆ ಸಾಧನೆಯೆಂದು ತಿಳಿದದ್ದೇ ತಪ್ಪು. ಜನಸಂಖ್ಯಾ ಬೆಳವಣಿಗೆಯನ್ನು ಗೇಲಿಮಾಡದೆ ಜನರ ಶಕ್ತಿಯನ್ನು ದೇಶದ ಅಭಿವೃದ್ಧಿಯ ಪಥದಲ್ಲಿ, ಸಮರ್ಥವಾಗಿ ಬಳಸಿಕೊಳ್ಳಬೇಕಿತ್ತು. ನಮ್ಮಲ್ಲಿ ಆಹಾರದ ಕೊರತೆಯಿದ್ದು ಉದ್ಯೋಗದ ಖಾತರಿ ಇಲ್ಲದಿರುವುದರಿಂದ 'ಚಿಕ್ಕ ಕುಟುಂಬ'ದ ವ್ಯಾಖ್ಯೆ ಆಪ್ಯಾಯಮಾನವಾಗಿತ್ತು. ಜಗತ್ತಿನಾದ್ಯಂತ ಶ್ರೀಮಂತ ರಾಷ್ಟ್ರಗಳು ತಮ್ಮದು ಕಡಿಮೆ ಜನಸಂಖ್ಯೆಯೆಂಬ ಕಾರಣಕ್ಕೆ ಹೆಚ್ಚು ಹೆಚ್ಚು ಪ್ರಾಕೃತಿಕ ಸಂಪನ್ಮೂಲಗಳನ್ನು ಮಿತಿಮೀರಿ ಕಬಳಿಸುತ್ತಿವೆ. ಬಡರಾಷ್ಟ್ರಗಳಲ್ಲಿ ಬಂಡವಾಳ ಹೂಡಿ ಜನರನ್ನು ದುಡಿಸಿ ಸಂಪತ್ತನ್ನು ದೋಚುವ ರಾಷ್ಟ್ರಗಳು ಜನಸಂಖ್ಯಾ ಬಾಹುಳ್ಯವಿರುವ ದೇಶಗಳನ್ನು ಆಯ್ಕೆಮಾಡಿ ಶೋಷಣೆ ಮಾಡುತ್ತಿವೆ. ಜನಸಂಖ್ಯೆ ಬೆಳವಣಿಗೆ ಮತ್ತು ತತ್ಸಂಬಂಧಿತ ಸಮಸ್ಯೆಗಳ ಬೆಳವಣಿಗೆ ಏಕಕಾಲದಲ್ಲಿ ಸಮಾನಾಂತರವಾಗಿ ಸಾಗುತ್ತಿದ್ದರೆ, ಸಮಾಜ ಶಾಸ್ತ್ರಜ್ಞರು ಕೈ ಚೆಲ್ಲಿ ಕುಳಿತರೆ ಅಭಿವೃದ್ಧಿ ಸಾಧ್ಯವೇ? ಇಂಥ ಹಲವಾರು ಪ್ರಶ್ನೆಗಳನ್ನಿಲ್ಲಿ ಚರ್ಚಿಸಲಾಗಿದೆ. ವಿವಿಧ ಮೂಲಗಳಿಂದ ಮಾಹಿತಿ ಸಂಗ್ರಹಿಸಿ ಅಂಕಿಅಂಶಗಳ ಸಹಿತ ಈ ಪುಸ್ತಕದಲ್ಲಿ ನೀಡಲಾಗಿದೆ.*




## ಸಂಕಷ್ಟದಲ್ಲಿ ಮೇಟಿ ವಿದ್ಯೆ

*ಮಾಧವ ಐತಾಳ್*

**ಪುಟ : ೧೩೬** **ಬೆಲೆ : ರೂ. ೯೫**

**ಋತ ಪುಸ್ತಕ,** ನಂ. ೮೯೧, ೧ನೇ ಮಹಡಿ
೩ಎ ಮುಖ್ಯರಸ್ತೆ, ಡಿ ಬ್ಲಾಕ್, ೨ನೇ ಹಂತ
ರಾಜಾಜಿನಗರ, ಬೆಂಗಳೂರು - ೫೬೦ ೦೧೦




*ರೈತ ದೇಶದ ಬೆನ್ನೆಲುಬು, ಅನ್ನದಾತ ಎಂದೆಲ್ಲ ಹಾಡಿ ಹೊಗಳಿದ್ದಾರೆ. ಕೃಷಿ ಭೂಮಿಯಲ್ಲಿ ಆಹಾರ ಬೆಳೆಸಲು ಆತನಿಗೆ ಅನುಕೂಲ ಮಾಡಿಕೊಡುವ ಬದಲು ಜಾಗತಿಕ ಹಣವಂತರನ್ನು ಆಹ್ವಾನಿಸಿ ಹಣ ಬೆಳೆಸುವ ದಂಧೆಗೆ ಸರ್ಕಾರದ ಪ್ರೋತ್ಸಾಹ. ಸಾಲದ ಹೊರೆಯಿಂದ ಬಾಧೆಪಡುವ ರೈತನ ಆರ್ಥಿಕ ದೌರ್ಬಲ್ಯವನ್ನು ಮುಂದುಮಾಡಿ ಆತನ ಭೂಮಿ ಕಬಳಿಸಿ ವಿದೇಶಿಯರಿಗೆ ಗುತ್ತಿಗೆ ನೀಡುತ್ತಿದೆ. ನಮ್ಮ ದೇಶದಲ್ಲಿ ಕೃಷಿಗೆ ಪ್ರಥಮಾದ್ಯತೆ ಇಲ್ಲ. ಆಹಾರೋತ್ಪಾದನೆ ನೆಲಕಚ್ಚಿದೆ. ಸ್ವಾಭಿಮಾನಿ ರೈತರಿಗೆ ನೇಣು ಕುಣಿಕೆಯಲ್ಲದೆ ಬೇರೇನೂ ಕಾಣುತ್ತಿಲ್ಲ. ''ಈ ರೈತರಿಗೆ ನೀರು, ವಿದ್ಯುತ್, ಬೀಜ, ರಸಗೊಬ್ಬರ, ಕೀಟನಾಶಕ ಒದಗಿಸಲು ಮಾಡುವ ಖರ್ಚಿನ ಅರ್ಧದಷ್ಟು ವಿದೇಶಗಳಿಂದ ಧಾನ್ಯ ಖರೀದಿಸಲು ಸಾಕು'' ಎಂದೊಬ್ಬ ಮಂತ್ರಿ ಹೇಳಿದ್ದನಂತೆ! ಇದುವರೆಗೆ ಅವಲಂಬಿಸಿದ್ದ ಸಾಂಪ್ರದಾಯಿಕ ಕೃಷಿ ವಿಧಾನ ಕಣ್ಮರೆಯಾಗಿ ಹೊಸ ಹೊಸ ತಂತ್ರಜ್ಞಾನ ಆಧಾರಿತ ಕೃಷಿ ಎಲ್ಲೆಡೆ ಕಾಲಿಟ್ಟಿದೆ. ಅದು ಉತ್ಪಾದಿಸುವ ಆಹಾರ ದುಬಾರಿ. ನೆಲ-ಜಲ-ವಾಯು ಕಲುಷಿತಗೊಂಡು ಬದಲಾವಣೆಗೊಂಡ ಹವಾಮಾನ ಅತಿವೃಷ್ಟಿ, ಅನಾವೃಷ್ಟಿ ಎರಡೂ ರೈತನಿಗೆ ಮಾರಕ. ಕೃಷಿಕರು ಕಂಗಾಲಾಗಿದ್ದಾರೆ. ಇವಿಷ್ಟು ಈ ಪುಸ್ತಕದಲ್ಲಿನ ಓದಿಗೆ ಪೂರಕ. ಇನ್ನುಳಿದಂತೆ ಕೃಷಿ ಉತ್ಪನ್ನದ ರಫ್ತು - ಆಮದು, ಬ್ಯಾಂಕುಗಳು ಕೃಷಿಕನಿಗೆ ನೀಡುವ ಸಾಲ, ಶ್ರೀಮಂತ ಕೃಷಿಕರಿಗೆ ಅನುಕೂಲವಾಗುವ ಯೋಜನೆ ಇವೆಲ್ಲ ಚರ್ಚಿಸಲ್ಪಟ್ಟಿವೆ.*

**– ಇಂದಿರಾಕುಮಾರಿ**

*೩೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨*

---

## ಸಾದರ ಸ್ವೀಕಾರ

**ಮಕ್ಕಳ ಕತೆಗಳು** — ಭಾರತೀ ಕಾಸರಗೋಡು
**ಪುಟ : ೮೮** **ಬೆಲೆ : ರೂ. ೪೫**
**ಹೇಮಂತ ಸಾಹಿತ್ಯ,** ನಂ. ೯೭೨ 'ಸಿ', ೪ನೇ 'ಇ' ವಿಭಾಗ, ೧೦ನೇ 'ಎ' ಮುಖ್ಯರಸ್ತೆ, ರಾಜಾಜಿನಗರ, ಬೆಂಗಳೂರು - ೫೬೦ ೦೧೦

**ಮಣ್ಣಿಂದ ಕಾಯ** — ಪಿ. ಬಿ. ಪ್ರಸನ್ನ
**ಪುಟ : ೧೨೦** **ಬೆಲೆ : ರೂ. ೧೦೦**

**ಉರಿಯ ಬೆಳದಿಂಗಳು** (ಹಿರಿಯ ಜಾನಪದ ವಿದ್ವಾಂಸ ಎನ್. ಹುಚ್ಚಪ್ಪಮಾಸ್ತರ್‌ರವರ ಅಭಿನಂದನ ಗ್ರಂಥ)
ಸಂ. : ಡಾ|| ಸಫ್ರಾಜ್ ಚಂದ್ರಗುತ್ತಿ, ವಿಲಿಯಂ
**ಪುಟ : ೫೩೦** **ಬೆಲೆ : ರೂ. ೫೦೦**
ಮೇಲಿನ ಎರಡು ಕೃತಿಗಳ ಪ್ರಕಾಶಕರು
**ನೇಕಾರ ಪ್ರಕಾಶನ,** ಗುರುಮಂದಿರ ರಸ್ತೆ, ಸೊರಬ - ೫೭೭ ೪೨೯, ಶಿವಮೊಗ್ಗ ಜಿಲ್ಲೆ

**ಕಾಣದಾಯಿತೋ ಊರುಕೇರಿ** — ಬಿ. ಶ್ರೀನಿವಾಸ
**ಪುಟ : xx + ೯೨ = ೧೧೨** **ಬೆಲೆ : ರೂ. ೬೦**

**ಉರಿವ ಒಲೆಯ ಮುಂದೆ** — ಬಿ. ಶ್ರೀನಿವಾಸ
**ಪುಟ : ೧೦೪** **ಬೆಲೆ : ರೂ. ೬೦**

**ನೂರು ಬಣ್ಣದ ಕಣ್ಣು** — ವಿಜಯಕಾಂತ ಪಾಟೀಲ
**ಪುಟ : xviii + ೭೦ = ೮೮** **ಬೆಲೆ : ರೂ. ೫೦**
ಮೇಲಿನ ಮೂರು ಕೃತಿಗಳ ಪ್ರಕಾಶಕರು
**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ್ ಹಾಸ್ಟೆಲ್, ಗದಗ - ೫೮೨ ೧೦೧

**ಈಚಿನ ಸಮಗ್ರ ಕವಿತೆ** — ಸಿ. ಪಿ. ಕೆ.
**ಪುಟ : xii + ೨೭೨** **ಬೆಲೆ : ರೂ. ೨೦೦**
**ಸಂವಹನ,** ೧೨/೧ಎ, ಈರ್ವಿಂಗ್ ಬಜಾರ್ ಹಿಂಭಾಗ, ಶಿವರಾಂಪೇಟೆ, ಮೈಸೂರು - ೫೭೦ ೦೦೧

**ಶಿಲಾಮೂರ್ತಿ** (ಸಾಮಾಜಿಕ ಕಾದಂಬರಿ)
ಬಿ. ಪಿ. ಶಿವಾನಂದರಾವ್
**ಪುಟ : iv + ೧೬೦ = ೧೬೪** **ಬೆಲೆ : ರೂ. ೧೦೦**

**ಸಂಚಿತ** — ಸಿ. ಪಿ. ಕೆ.
**ಪುಟ : iv + ೨೬೪ = ೨೬೮** **ಬೆಲೆ : ರೂ. ೨೦೦**
ಮೇಲಿನ ಎರಡು ಕೃತಿಗಳ ಪ್ರಕಾಶಕರು
**ಸಿವಿಜಿ ಇಂಡಿಯಾ,** ಕಸ್ತೂರ್‌ಬಾ ಭವನ, ಗಾಂಧಿಭವನ ಆವರಣ, ಕುಮಾರಪಾರ್ಕ್ ಪೂರ್ವ, ಬೆಂಗಳೂರು - ೧

**ಸದರ್ನ್ ಎಕಾನಮಿಸ್ಟ್ ಸುಶೀಲಾ ಅರ್ಥಕತೆ** — ಡಿ. ಯಶೋದಾ
**ಪುಟ : ೬೪** **ಬೆಲೆ : ರೂ. ೫೦**
**ಮಾಧ್ಯಮ ಭಾರತಿ, ಭಾರತೀಯ ವಿದ್ಯಾ ಭವನ,** ವರ್ತಮಾನ ಮಾಧ್ಯಮ ಶಿಕ್ಷಣ ಕೇಂದ್ರ, ರೇಸ್ ಕೋರ್ಸ್ ರಸ್ತೆ, ಬೆಂಗಳೂರು - ೫೬೦ ೦೦೧

**ಮಾನವ್ಯ ಕವಿ** (ಬಿ. ಎ. ಸನದಿಯವರ ಕಾವ್ಯಾವಲೋಕನ)
ಡಾ|| ಗೌರೀಶ ಕಾಯ್ಕಿಣಿ
**ಪುಟ : ೧೦೮** **ಬೆಲೆ : ರೂ. ೬೫**

**ವೈಚಾರಿಕ ಕವನಗಳು** — ಎಸ್. ಮಂಜುನಾಥ
**ಪುಟ : ೮೮** **ಬೆಲೆ : ರೂ. ೫೦**
ಮೇಲಿನ ಎರಡು ಕೃತಿಗಳ ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧.

**ತೀರದ ಮರಳ ಕಣಗಳು** (ತರಹೇವಾರಿ ಬರೆಹಗಳು)
ವಿ. ಗ. ನಾಯಕ
**ಪುಟ : viii + ೨೧೪ + iv** **ಬೆಲೆ : ರೂ. ೧೧೫**

**ನಕ್ಷತ್ರ ಮತ್ತು ಹಗ್ಗ** (ಕತೆಗಳು) — ಶಾಂತಾರಾಮ ಸೋಮಯಾಜಿ
**ಪುಟ : ೧೩೨ + iv** **ಬೆಲೆ : ರೂ. ೭೦**
ಮೇಲಿನ ಎರಡು ಕೃತಿಗಳ ಪ್ರಕಾಶಕರು
**ಶ್ರೀನಿವಾಸ ಪುಸ್ತಕ ಪ್ರಕಾಶನ,** ನಂ. ೧೬೪/ಎ ಮೊದಲನೇ ಮಹಡಿ, ಎಂ. ಆರ್. ಎನ್. ಬಿಲ್ಡಿಂಗ್, ಕನಕಪುರ ಮುಖ್ಯರಸ್ತೆ, ಬಸವನಗುಡಿ, ಬೆಂಗಳೂರು - ೫೬೦ ೦೦೪

**ದಕ್ಷ ಆಡಳಿತಗಾರ** (ಬಿ. ಎಂ. ಹನಮನಾಳ ಅಭಿನಂದನಾ ಗ್ರಂಥ)
ಸಂ. : ಹನುಮಂತಪ್ಪ ಅಂಡಗಿ ಚಿಲವಾಡಗಿ
**ಪುಟ : xxiv + ೧೬೬ = ೧೯೦** **ಬೆಲೆ : ರೂ. ೧೫೦**
**ಜನಪದ ಪ್ರಕಾಶನ,** ಶ್ರೀಮತಿ ರೇಣುಕಾ ಹನುಮಂತಪ್ಪ ಅಂಡಗಿ ಚಿಲವಾಡಗಿ, 'ಚುಟುಕು', ವಿದ್ಯಾನಗರ, ಭಾಗ್ಯನಗರ, ಕೊಪ್ಪಳ

**ಇಕ್ಕೇರಿ ಅಘೋರೇಶ್ವರ** (ಕೆಳದಿ ರಾಜ್ಯದ ಅಪೂರ್ವ ದೇವಾಲಯ)
ಡಾ|| ಅ. ಸುಂದರ
**ಪುಟ : ೮೦ + ೮** **ಬೆಲೆ : ರೂ. ೧೦೦**
**ಶಾಂತಲಾ ಪ್ರಕಾಶನ,** ನಂ. ೮೭, ಶಾಂತಲಾ, ಕುವೆಂಪು ರಸ್ತೆ, ಶಿವಮೊಗ್ಗ - ೫೭೭ ೨೦೧, ಕರ್ನಾಟಕ

**ಸಂಚಾರ ಸಾಗರ ಮತ್ತು ಮಿಲೆನಿಯಮ್ ಸೂರ್ಯ** (ಪ್ರವಾಸ ಬರಹಗಳು) — ಶ್ರೀನಿವಾಸ ಜೋಕಟ್ಟೆ
**ಪುಟ : ix + ೧೮೭** **ಬೆಲೆ : ರೂ. ೧೨೫**
**ಸಾಹಿತ್ಯ ಸಾಧನ,** ಸುಂಕದಕಟ್ಟೆ, ಬೆಂಗಳೂರು - ೫೬೦ ೦೯೧







| | |
|---|---|
| ಪುಸ್ತಕದ ಹೆಸರು | : **ಹೂ ಹಸಿರಿನ ಮಾತು** |
| ಲೇಖಕರು | : **ಡಾ|| ಎಲ್. ಸಿ. ಸುಮಿತ್ರಾ** |
| ಪ್ರಕಾಶಕರು : | : ಅಂಕಿತ ಪುಸ್ತಕ, ಬೆಂಗಳೂರು |
| ಪುಟಗಳು | : ೮೦+೧೬ |
| ಬೆಲೆ | : ರೂ. ೧೨೦/- |

# ಹೂ ಹಸಿರಿನ ಮಾತು

**ಕ**ವಯಿತ್ರಿ, ಕಥೆಗಾರ್ತಿ ಹಾಗೂ ವಿಮರ್ಶಕಿಯಾಗಿ ಈಗಾಗಲೇ ಕನ್ನಡಿಗರಿಗೆ ಪರಿಚಿತರಾಗಿರುವ ಡಾ|| ಎಲ್. ಸಿ. ಸುಮಿತ್ರಾ ಇವರು ಈಚೆಗೆ ಬರೆದಿರುವ ಪುಸ್ತಕ 'ಹೂ ಹಸಿರಿನ ಮಾತು'. ಇದರಲ್ಲಿ ಅವರು ತಾವು ಬೆಳೆದ ಲಕ್ಷ್ಮೀಪುರ (ತೀರ್ಥಹಳ್ಳಿ ಸಮೀಪದ ಒಂದು ಹಳ್ಳಿ) ಹಾಗೂ ತಮಗೆ ಪರಿಚಿತವಾದ ಪಶ್ಚಿಮಘಟ್ಟ ಪ್ರದೇಶಗಳಲ್ಲಿ ಬೆಳೆಯುವ ಹೂಗಿಡ, ಮರಗಳನ್ನು ವಿಶಿಷ್ಟ ರೀತಿಯಲ್ಲಿ ಪರಿಚಯಿಸಿದ್ದಾರೆ. ''ಈ ಪರಿಸರಕ್ಕೆ ಸಹಜವಾದ, ಅಂದರೆ ಹೊರದೇಶದ್ದಲ್ಲದ ಗಿಡಮರಗಳ ಬಗ್ಗೆ ಮಾತ್ರ ಇಲ್ಲಿ ಬರೆದಿದ್ದೇನೆ'' ಎಂದು ಹೇಳುತ್ತಾರೆ ಈ ಲೇಖಕಿ. ತಾವು ಬಾಲ್ಯದಿಂದ ನೋಡಿದ ಹೂಗಿಡ, ಮರಗಳ ಸಹವಾಸ, ಜೊತೆಗೆ ಉದ್ಯಾನಕಲೆಯಲ್ಲಿ ಇವರಿಗಿರುವ ಆಸಕ್ತಿಯು ಈ ಕೃತಿಯ ಹುಟ್ಟಿಗೆ ಕಾರಣ ಅನ್ನಿಸುತ್ತದೆ.

'ಹೂ ಹಸಿರಿನ ಮಾತು' ಕೃತಿಯಲ್ಲಿ ಒಟ್ಟು ೨೩ ವಿವಿಧ ಹೂಗಿಡ, ಮರಗಳ ಪರಿಚಯವಿದೆ. 'ಸುರಗಿಯ ಸಿರಿ', 'ಅಶೋಕ ವನದಲ್ಲಿ', 'ರಂಜವೆಂಬ ಬಕುಲದ ಹೂ', 'ಮಾದಕ ಮಾಧವಿ ಲತೆ', 'ಕಾಡಿನ ಆಭರಣ ಸೀತಾಳಿ ಹೂ' ಹೀಗೆ ಶೀರ್ಷಿಕೆಯಲ್ಲೇ ಈ ಹೂಗಳ ಆಕರ್ಷಣೆಯ ಪರಿಚಯ ಸಿಗುತ್ತದೆ. ಲೇಖನದ ಜೊತೆಜೊತೆಗೆ ಹಾಗೂ ಮಧ್ಯದ ಪುಟಗಳಲ್ಲಿ ಇರುವ ಫೋಟೋಗಳು ಓದುಗರ ಕುತೂಹಲವನ್ನು ತಣಿಸುತ್ತವೆ.

ನಮ್ಮ ಪಶ್ಚಿಮ ಘಟ್ಟಗಳು ಜೀವವೈವಿಧ್ಯದ ತವರು. ಅಲ್ಲಿರುವ ಅಪರೂಪದ ಸಸ್ಯ, ಪ್ರಾಣಿಗಳ ಅರಿವು ನಗರದವರಿಗಂತೂ ಇರುವುದೇ ಇಲ್ಲ. ಈ ಕೃತಿಯ ಪುಟ್ಟ ಪುಟ್ಟ ಲೇಖನಗಳು ಇಂತಹ ಅಪರೂಪದ ವಿಶಿಷ್ಟ ಮರ, ಗಿಡಗಳ ಪರಿಚಯವನ್ನು ಸಸ್ಯ ಶಾಸ್ತ್ರೀಯವಾಗಿ ಮಾತ್ರವಲ್ಲದೆ ಜೀವನಾನುಭವ ಹಾಗೂ ಕಾವ್ಯದ ಸಾಲುಗಳು ಬೆರೆತ ಲವಲವಿಕೆಯ ಶೈಲಿಯಲ್ಲಿ ಪರಿಚಯ ಮಾಡಿಕೊಡುತ್ತವೆ.

'ಸುರಗಿಯ ಸಿರಿ' ಎಂಬ ಲೇಖನ ಹೀಗೆ ಆರಂಭಗೊಳ್ಳುತ್ತದೆ. ''ಮರದ ಸಮೀಪ ಹೋಗುವಷ್ಟರಲ್ಲಿ ಗಾಢ ಪರಿಮಳ, ಜೇನುಗಳ-ದುಂಬಿಗಳ ಝೇಂಕಾರ ನಮ್ಮನ್ನು ಸ್ವಾಗತಿಸಿತು. 'ಸುರಿವ ಸುರಯಿಯರಲ ಮಗುಳ್ಗೆ ಮೊಗಸಿದಳಿಕುಳಂಗಳಿಂ' ಎಂಬ ಕವಿ ಪಂಪನ ವರ್ಣನೆ ನೆನಪಾಯಿತು.''... ಲೇಖಕಿಯು ಸದಾ ಸಾಹಿತ್ಯದ ಸಾನ್ನಿಧ್ಯದಲ್ಲಿರುವವರಾದ್ದರಿಂದ ಕವಿನುಡಿಗಳನ್ನು ನೆನಪಿಸಿಕೊಳ್ಳುತ್ತ ಮರಗಿಡಗಳನ್ನು ಪರಿಚಯಿಸುತ್ತಾರೆ. ''ಬೆಳಿಗ್ಗೆ ಅರಳಿದ ಹೂಗಳು ಹೊತ್ತೇರಿದಂತೆ ದಳಗಳನ್ನು ಉದುರಿಸುವಾಗ ಮರದ ಬುಡದಲ್ಲಿ ಮುತ್ತಿನ ಮಳೆಯೇ ಸುರಿದಂತೆನಿಸುತ್ತದೆ.'' ಈ ರೀತಿಯ ಚಿತ್ರಕ ಶಕ್ತಿಯ ವಾಕ್ಯಗಳು ಈ ಕೃತಿಯಲ್ಲಿ ತುಂಬ ಇವೆ.

ಅಶೋಕದ ಬಗ್ಗೆ ಬರೆಯುವಾಗ ಲೇಖಕಿಯು ''ನಿಧಾನವಾಗಿ ಬೆಳೆಯುವ ಅಶೋಕವನ್ನು ಬೀಜಗಳಿಂದ ಗಿಡಗಳನ್ನು ತಯಾರಿಸಿ ಮನೆಯಂಗಳದಲ್ಲೇ ಬೆಳೆಸಬಹುದು'' ಎಂಬ ವಿವರವನ್ನು ನೀಡುತ್ತಾರೆ. ಹಾಗೆಯೇ ''ಉದ್ಯಾನಗಳಿಗೆ ಶೋಭೆಯನ್ನು ತರುವ ಬಕುಲದ ಮರ ಹುಲ್ಲು ಹಾಸಿನ ನಡುವೆ ಹಾಕಲು ಸೂಕ್ತವಾದ ಮರ'' ಎನ್ನುತ್ತಾರೆ. 'ಹೊಳೆ ದಾಸವಾಳ' ಮರವನ್ನು 'ಭಾರತದ ಹೆಮ್ಮೆ' ಎನ್ನುತ್ತಾರೆ... ''ಹಾಲಿವಾಣದ ಮರದ ಬೇರುಗಳಿಗೆ ಮಣ್ಣನ್ನು ಫಲವತ್ತಾಗಿಸುವ ಗುಣವಿರುವುದರಿಂದ ಈ ಮರ ರೈತರಿಗೆ ಉಪಕಾರಿ ಮರ''... ಇಂತಹ ವಿಶೇಷ ಮಾಹಿತಿಗಳನ್ನು ಸಾಕಷ್ಟು ಕಡೆ ನೀಡಿದ್ದಾರೆ. ಜೀರತ, ಪುನರ್ಪುಳಿ ಮುಂತಾದ ಮಲೆನಾಡಿನ ಕೆಲವು ಹುಳಿ-ಸಿಹಿ ಹಣ್ಣುಗಳನ್ನೂ ಪರಿಚಯಿಸಿದ್ದಾರೆ. ಮೊಪ್ಪ ಮರ ಗೊಂಡ ಆದಿವಾಸಿಗಳಿಗೆ ಎಷ್ಟು ಪವಿತ್ರ ಎಂದು ತಿಳಿಸಿದ್ದಾರೆ.

ಹೀಗೆ ಹೂವು, ಮರಗಳನ್ನು ಪರಿಚಯಿಸುವಾಗ ಕೇವಲ ಸೌಂದರ್ಯಾತ್ಮಕವಾಗಿ ಅಲ್ಲದೆ ಇಂದಿನ ಪರಿಸ್ಥಿತಿಯಲ್ಲಿ ಅವುಗಳ ಸ್ಥಿತಿ-ಗತಿಗಳು, ಜನರ ಆಲೋಚನಾಕ್ರಮ ಇವುಗಳನ್ನು ಸಹ ಲೇಖಕಿಯು ವಿಮರ್ಶಾತ್ಮಕವಾಗಿ ಪರಿಚಯಿಸುತ್ತಾರೆ. ಜನರ ಅತಿ ಆಸೆಯಿಂದಾಗಿ ಹೊಳೆ ದಾಸವಾಳದಂತಹ ಮರಗಳ ಸಂಖ್ಯೆ ಇಳಿಮುಖವಾಗಿರುವುದು, ಹುಳಿ ಹಣ್ಣುಗಳಿಗೆ ವಿದೇಶೀ ಮಾರುಕಟ್ಟೆಯಲ್ಲಿ ಬೇಡಿಕೆ ಬಂದಿದ್ದರಿಂದ ಅವು ಅಳಿಯುತ್ತಿರುವುದು, ಕಾಯಿಗಳನ್ನು ಕೀಳುವ ವ್ಯವಧಾನವಿಲ್ಲದೆ ಕೊಂಬೆಗಳನ್ನೇ ಕಡಿದುರುಳಿಸುತ್ತಿರುವುದು... ಸೀತಾಳಿ ಹೂವಿಗೆ ಈಗ ನೂರಾರು ಹೈಬ್ರಿಡ್ ಜಾತಿಗಳನ್ನು ಸೃಷ್ಟಿಸುತ್ತಿರುವುದು... ಇಂತಹ ವಿಚಾರ ಪ್ರಚೋದಕವಾದ ವಿಷಯಗಳನ್ನು ಈ ಲೇಖಕಿ ಇಲ್ಲಿ ದಾಖಲಿಸಿದ್ದಾರೆ.

ಹೀಗೆ ಡಾ|| ಎಲ್. ಸಿ. ಸುಮಿತ್ರಾ ಅವರ 'ಹೂ ಹಸಿರಿನ ಮಾತು' ಮಲೆನಾಡಿನ ವರ್ಣಮಯ ಪ್ರಪಂಚವೊಂದರ ಪರಿಚಯವನ್ನು ನಮಗೆ ಮಾಡಿಕೊಡುತ್ತದೆ. ಭೌಗೋಳಿಕ ತಾಪಮಾನ ಹೆಚ್ಚುತ್ತಿರುವ, ಪ್ರತಿಯೊಂದರಲ್ಲೂ ಲಾಭದೃಷ್ಟಿ ಬೆರೆತ ಜಾಗತೀಕರಣದ ಈ ಹೊತ್ತಿನಲ್ಲಿ ನಮ್ಮದೇ ಪರಿಸರದ 'ದೇಸಿ' ಎನ್ನಬಹುದಾದ ಈ ಸುಂದರ ಗಿಡಮರಗಳನ್ನು ಪರಿಚಯಿಸಿಕೊಳ್ಳುವುದಲ್ಲದೆ ಅವುಗಳನ್ನು ಬೆಳೆಸುವುದು ಮುಖ್ಯವಾದ ಕೆಲಸವಾಗಿದೆ. ಈ ಕೃತಿಯು ನಮ್ಮ ಪರಿಸರವನ್ನು ಅರಿಯಲು ಸಹಾಯಕವಾದ ಕೃತಿಯಾಗಿದ್ದು, ಓದುಗರಿಗೆ ಇಷ್ಟವಾಗುವಂತಹ ಗುಣ ಹೊಂದಿದೆ.

**ಡಾ|| ಎಲ್. ಜಿ. ಮೀರಾ**
ನಂ. ೧೯೪, ೭ನೇ ಅಡ್ಡರಸ್ತೆ, ೫ನೇ ಮುಖ್ಯರಸ್ತೆ, ವಿಜಯನಗರ ೩ನೇ ಹಂತ,
ಹಂಪಿನಗರ, ಬೆಂಗಳೂರು - ೫೬೦ ೧೦೪

# ಹಿನ್ನೀರು

ಡಾ|| ನಾ. ಡಿಸೋಜ

ನಾನು ಶರಾವತಿಯ ಹಿನ್ನೀರಿನ ಅಂಚಿಗೆ ಬಂದು ಕುಳಿತಿದ್ದೇನೆ. ನನ್ನ ಮುಂದೆ ವಿಶಾಲವಾಗಿ, ವಿಸ್ತಾರವಾಗಿ ದಿಗಂತದವರೆಗೂ ಹಬ್ಬಿ ನಿಂತ ಲಿಂಗನಮಕ್ಕಿ ಅಣೆಕಟ್ಟಿನ ನೀರಿದೆ. ನಾನು ಕುಳಿತ ಜಾಗ ಒಂದು ಗುಡ್ಡದ ಕೋಗಾಗಿದ್ದು, ಈ ಕೋಗು ಲಿಂಗನಮಕ್ಕಿ ಅಣೆಕಟ್ಟಿನ ಒಳಗೆ ತನ್ನ ಮೂತಿ ಚಾಚಿಕೊಂಡಿದೆ. ಮಳೆಗಾಲದಲ್ಲಿ ನೀರು ಈ ಕೋಗನ್ನು ಕೂಡ ತನ್ನ ಒಡಲಲ್ಲಿ ಸೇರಿಸಿಕೊಳ್ಳುತ್ತದೆ ಅನ್ನುವುದನ್ನ ಕೋಗಿನ ಕೆಂಪು ಮಣ್ಣು, ಅಲ್ಲಲ್ಲಿ ತೆರೆದುಕೊಂಡು ಬಿದ್ದ ಉಂಡೆಗಲ್ಲುಗಳು ಹೇಳುತ್ತವೆ. ಅದು ಬೇಸಿಗೆ ಕಾಲವಾಗಿದ್ದರಿಂದ ನಾನು ನಿಶ್ಚಿಂತೆಯಿಂದ ಅಲ್ಲಿ ಕುಳಿತು ಹಿನ್ನೀರನ್ನ ನೋಡುತ್ತಲಿದ್ದೆ. ನೀರಿನಲ್ಲಿ ಸಣ್ಣ ಅಲೆಗಳಿದ್ದವು. ಗಾಳಿ ಬೀಸಿದಾಗ ಈ ಅಲೆಗಳು ದಡದತ್ತ ಬರುವುದು ಸ್ಪಷ್ಟವಾಗಿ ಕಾಣುತ್ತಲಿತ್ತು. ಅನತಿ ದೂರದಲ್ಲಿ ಒಂದು ಒಣಗಿದ ಮರದ ತುಂಡು ನೀರಿನಲ್ಲಿ ತೇಲುತ್ತಲಿತ್ತು. ಮತ್ತೂ ಕೊಂಚ ದೂರದಲ್ಲಿ ಒಣಗಿ ನಿಂತ ಒಂದು ಮರ. ಇದರ ಟೊಂಗೆಯ ಮೇಲೆ ಒಂದು ಹಕ್ಕಿ ಬಹಳ ಹೊತ್ತಿನಿಂದ ಆತಂಕದಲ್ಲಿ ಕುಳಿತು ಅತ್ತ ಇತ್ತ ನೋಡುತ್ತಿರುವಂತಿತ್ತು. ಆ ಒಣ ಮರದಲ್ಲಿ ಜೀವಂತಿಕೆಯ ಯಾವ ಲಕ್ಷಣವೂ ಇರಲಿಲ್ಲ. ಒಂದೇ ಒಂದು ಹಸಿರು ಎಲೆ, ಒಂದು ಹಸಿರು ಕಡ್ಡಿ ಇರಲಿಲ್ಲ. ಬಹಳ ವರ್ಷಗಳು ಉರುಳಿದ್ದರೂ ಆ ಮರ ನೀರಿನಲ್ಲಿ ಬಲವಾಗಿ ನಿಂತಿದೆಯಲ್ಲ ಎಂದು ನನಗೆ ಅನಿಸಿತು. ಅದರ ಬೇರುಗಳು ಆಳಕ್ಕೆ ಇಳಿದಿರಬೇಕು. ಅಂದರೆ ಅವು ನೀರಿನಲ್ಲಿ ಬಲವಾಗಿ ನಿಂತಿವೆ. ರೆಂಬೆ ಕೊಂಬೆಗಳು ಒಣಗಿವೆ, ಬರಡಾಗಿವೆ, ಬೇರೊಂದನ್ನೇ ಊರಿಕೊಂಡು ಮರ ಬದುಕಿದೆ. ಭಲೇ ಮರವೇ ಅಂದುಕೊಂಡೆ. ಈ ಮರದ ಮೇಲೆ ಜೀವಂತಿಕೆಯ ಸಂಕೇತ ಅನ್ನುವ ಹಾಗೆ ಈ ಹಕ್ಕಿ ಕುಳಿತಿದೆ. ಸಣ್ಣ ದನಿಯಲ್ಲಿ ಕೂಗುತ್ತಿದೆ. ಆಗಾಗ್ಗೆ ಬಲಕ್ಕೆ ಒಮ್ಮೆ ಎಡಕ್ಕೆ ಒಮ್ಮೆ ನೋಡುತ್ತದೆ. ಮರದ ಪೊಟರೆಯಲ್ಲಿ ಇರಬಹುದಾದ ಯಾವುದೋ ಹುಳವನ್ನ ಒಮ್ಮೊಮ್ಮೆ ಕುಕ್ಕಿ ಕುಕ್ಕಿ ತಿನ್ನುತ್ತದೆ. ಮತ್ತೆ ಕೂಗುವ, ನೋಡುವ ಕೆಲಸ ಮುಂದುವರಿಸುತ್ತದೆ.

ಹಾಗೆಯೇ ಆ ಮರವನ್ನ ಕೆಳಗಿನಿಂದ ಮೇಲಿನವರೆಗೆ ದಿಟ್ಟಿಸಿದಾಗ ನನಗೆ ಒಂದು ಅಚ್ಚರಿ ಕಂಡಿತು. ಮರದ ತುದಿಯಲ್ಲಿ ಅನ್ನುವ ಹಾಗೆ ಒಂದು ಗೂಡಿದೆ. ಈ ಗೂಡು ಅಲ್ಲಿ ಕುಳಿತ ಹಕ್ಕಿಯದೇ ಇರಬೇಕು ಅನಿಸಿತು. ಹಕ್ಕಿ ಈ ಗೂಡನ್ನು ಕಾಯಲೆಂದೇ ಅಲ್ಲಿ ಕುಳಿತಿದೆ. ಬಹುಶಃ ಅದರಲ್ಲಿ ಅದು ಮೊಟ್ಟೆ ಇಟ್ಟಿರಬೇಕು ಇಲ್ಲವೆ ಮೊಟ್ಟೆ ಒಡೆದು ಮರಿ ಹೊರಬಂದಿರಬೇಕು. ಈ ಗೂಡು ಹಾಗೂ ಮೊಟ್ಟೆಗಳ ಇಲ್ಲವೆ ಮರಿಗಳ ರಕ್ಷಣೆಗೆ ಅದು ಅಲ್ಲಿ ಕುಳಿತು ಕಾವಲು ಕಾಯುತ್ತಿದೆ ಅನ್ನುವುದು ಕೂಡ ಖಚಿತವಾಯಿತು.

ಅಲ್ಲಿ ಹಕ್ಕಿ, ಇಲ್ಲಿ ನಾನು. ಬಹಳ ಹೊತ್ತಿನಿಂದ ನಾವಿಬ್ಬರೂ ಇಲ್ಲಿ ಕುಳಿತಿದ್ದೇವೆ. ಬೇಸರವಿಲ್ಲದೆ, ಆಯಾಸವಿಲ್ಲದೆ ಕುಳಿತಿದ್ದೇವೆ. ಹಕ್ಕಿಗೆ ಹಾರಿಹೋಗಲು ಬೇರೆ ಮರ ಇಲ್ಲದಿರಬಹುದು. ಆದರೆ ನನಗೆ ಹಾಗಲ್ಲ. ನನಗೆ ನನ್ನದೇ ಮನೆ ಇದೆ. ಸುತ್ತ ಹರಡಿಕೊಂಡಿರುವ ನೀರು ಸುತ್ತಲಿನ ಮರಗಳನ್ನ ನಾಶಮಾಡಿ ಹಕ್ಕಿಯ ಹಾರಾಟಕ್ಕೆ ತೊಂದರೆ ಮಾಡಿರಬಹುದು. ಆದರೆ ನನಗೆ ಹಾಗಲ್ಲ. ನನಗೊಂದು ಮನೆ ಇದೆ. ಆದರೆ ಅದು ಇಲ್ಲಿ ಅಲ್ಲ. ಶಿವಮೊಗ್ಗದ ಹತ್ತಿರ, ಅಲ್ಲಿಂದ ಮತ್ತೆ ನಲವತ್ತು ಮೈಲಿ ದೂರ, ಬಸ್ಸಿನಲ್ಲಿ ಒಂದು ಗಂಟೆಯ ದಾರಿ. ನಾನು ಅಷ್ಟು ದೂರ ಹೋಗಲು ಈ ಅಣೆಕಟ್ಟು ಕಾರಣ. ಇದರ ನಿರ್ಮಾಣದಿಂದಾಗಿ ನಮ್ಮ ಕುಟುಂಬ ಈ ಪ್ರದೇಶ ಬಿಟ್ಟು ಹೋಗುವಂತಾದದ್ದು ಒಂದು ದುರಂತವೇ.

ಅಂದರೆ ನಾನೂ ಹಕ್ಕಿಯ ಹಾಗೆಯೇ ಆದೆನಲ್ಲ. ನನಗೂ ಹತ್ತಿರದಲ್ಲಿ ಗೂಡಿಲ್ಲ, ಮನೆಯಿಲ್ಲ. ಬೆಳಿಗ್ಗೆ ಬಸ್ಸಿನಲ್ಲಿ ಬಂದವನು ಕಾರ್ಗಲ್ ಎಂಬಲ್ಲಿ ಇಳಿದು, ಲಿಂಗನಮಕ್ಕಿ ಅಣೆಕಟ್ಟಿನ ಹಿನ್ನೀರು ಇಲ್ಲಿಯೇ ಹತ್ತಿರದಲ್ಲಿ ಇದೆಯಲ್ಲ, ಅಲ್ಲಿಗೆ ಹೋಗುವುದು ಹೇಗೆ ಎಂದು ದಾರಿ ಕೇಳಿಕೊಂಡು ಬಂದು ಇಲ್ಲಿ ಕುಳಿತೆ.

ಒಂದು ಹದ್ದು ಹಕ್ಕಿಯ ಪುಕ್ಕ ಕಿತ್ತುಹಾಕಿತು, ಕುತ್ತಿಗೆಯ ಪುಕ್ಕ ಸೆಳೆಯಿತು. ಹಕ್ಕಿ ಗಾಳಿಯಲ್ಲಿ ತೊನೆದಾಡಿತು. ಹದ್ದಿನ ಬಾಯಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸಿತು. ಈ ಹದ್ದುಗಳ ಬಾಯಿಗೆ ಸಿಗಬಾರದೆಂದು ತನ್ನ ಶಕ್ತಿ ಹಾಕಿ ಮೇಲೆ ಕೆಳಗೆ ಹಾರಿತು. ಆದರೆ ಕ್ರಮೇಣ ಅದರ ಶಕ್ತಿ ಉಡುಗತೊಡಗಿತ್ತು. ತನ್ನ ಕಣ್ಣೆದುರಿನಲ್ಲಿ ತನ್ನ ಗೂಡು ನಾಶವಾದುದನ್ನ ಅದು ನೋಡಿತು, ಹಾಗೆಯೇ ಗೂಡು ಗಾಳಿ ಪಾಲಾಯಿತು. ಹದ್ದುಗಳು ಹಕ್ಕಿಯನ್ನ ತಮ್ಮ ತಮ್ಮ ಕೊಕ್ಕಿನಲ್ಲಿ ಹಿಡಿದುಕೊಂಡಿದ್ದವು. ಹಕ್ಕಿಯ ಒಂದು ರೆಕ್ಕೆ ಹರಿದಿತ್ತು. ಗೂಡು ಛಿದ್ರವಾಗಿ ನೀರಿಗೆ ಅಪ್ಪಳಿಸಿತ್ತು. ಹಕ್ಕಿಯ ಕುತ್ತಿಗೆಯಿಂದ ರಕ್ತ ಒಸರತೊಡಗಿತ್ತು. ಅದು ನೀರಿಗೆ ಬಿದ್ದು ನೀರು ಕೆಂಪೇರಿತು.
ಅದರ ಚೀತ್ಕಾರವಂತೂ
ಮುಗಿಲು ಮುಟ್ಟಿತ್ತು.



ನಾನು ಇಲ್ಲಿ ಬಂದು ಕೂರಲು ಒಂದು ಕಾರಣವಿತ್ತು.

ನಾನು ದೂರದ ಬೆಂಗಳೂರಿನಿಂದ ಊರಿಗೆ ಬಂದು ಮನೆಯನ್ನ ಹೊಕ್ಕ ತಕ್ಷಣ ಅಜ್ಜಿ ''ಬಂದೆಯಾ'' ಎಂದು ಕೇಳಿ ತನಗೆ ಮಾತನಾಡಲು ಈವರೆಗೆ ಯಾರೂ ಸಿಗಲಿಲ್ಲ ಅನ್ನುವ ಹಾಗೆ ತನ್ನ ಹಿಂದಿನ ಕತೆಯನ್ನ ಹೇಳಲು ಉಪಕ್ರಮಿಸುತ್ತಿದ್ದಳು. ಲಿಂಗನಮಕ್ಕಿ ಎಂಬಲ್ಲಿ ಇದ್ದ ತನ್ನ ಹಳ್ಳಿ ಜಮೀನಿನಲ್ಲಿ ಹಾಗಿತ್ತು ಹೀಗಿತ್ತು ಎಂದು ಹೇಳಲುಪಕ್ರಮಿಸಿದಾಗ ನನಗೆ ಅದು ಕೇಳಿ ತಲೆ ಚಿಟ್ಟುಹಿಡಿದಂತಾಗುತ್ತಿತ್ತು. ನಾನು ಬೆಂಗಳೂರಿನಿಂದ ಪ್ರತಿ ಸಾರಿ ಬಂದಾಗಲೂ ಅಜ್ಜಿಯದು ಇದೇ ಪ್ರವರ. ಲಿಂಗನಮಕ್ಕಿಯ ಬಳಿ ಇದ್ದ ತನ್ನ ಮನೆ, ಗದ್ದೆ ಇತ್ಯಾದಿ. ಇದು ನಾನು ಹುಟ್ಟುವುದಕ್ಕಿಂತ ಮೊದಲು ನಡೆದ ಘಟನೆಯಂತೆ. ಅಪ್ಪನ ಮದುವೆ ಕೂಡ ಆಗಿರಲಿಲ್ಲವಂತೆ.

ನಿನ್ನೆ ಬೆಂಗಳೂರಿನಿಂದ ಬಂದ ನಾನು ಇಂದು ಇಲ್ಲಿ ಬಂದು ಕೂರಲು ಕಾರಣ ಮತ್ತೆ ನನ್ನ ಅಜ್ಜಿ. ಈಕೆ ಬೆಳಿಗ್ಗೆ ನಾನು ಎದ್ದ ಕೂಡಲೇ ಪ್ರಾರಂಭಿಸಿದ್ದು ಲಿಂಗನಮಕ್ಕಿ ಮುಳುಗಡೆ ಪುರಾಣವನ್ನ. ಇನ್ನು ಇದು ಇಡೀ ದಿನ ಮುಂದುವರಿಯುತ್ತದೆ ಎಂಬುದು ನನಗೆ ಖಚಿತವಾಗಿ ನಾನು ಪ್ಯಾಂಟ್ ಏರಿಸಿಕೊಂಡು, ''ಅಜ್ಜಿ, ನನ್ನ ಸ್ನೇಹಿತರೊಬ್ಬರನ್ನ ಭೇಟಿ ಆಗಬೇಕಾಗಿದೆ, ಬರತೀನಿ'' ಎಂದು ಹೇಳಿ ಮನೆಯಿಂದ ಹೊರಬಿದ್ದಾಗ ಅಜ್ಜಿ ತೀವ್ರ ನಿರಾಶೆಯಿಂದ ನನ್ನ ಮುಖ ನೋಡಿದಳು. ನಾನು ಬಸ್‌ಸ್ಟ್ಯಾಂಡಿಗೆ ಬಂದು ಬಸ್ಸು ಹತ್ತಿದೆ. ಅಜ್ಜಿ ಪದೇ ಪದೇ ಹೇಳುತ್ತಿದ್ದ ಆ ಲಿಂಗನಮಕ್ಕಿ ಪುರಾಣದ ಬಗ್ಗೆ ನನಗೆ ಹೆಚ್ಚು ತಿಳಿದಿರಲಿಲ್ಲ. ಇಂದಾದರೂ ಅದನ್ನ ತಿಳಿಯೋಣ ಎಂದು ಜೋಗಕ್ಕೆ ಹೋಗುವ ಒಂದು ಬಸ್ಸನ್ನ ಏರಿ ಕುಳಿತೆ. ಬಸ್ಸು ಹೊರಟ ನಂತರವೂ ಅಜ್ಜಿ ಮನಸ್ಸಿನಿಂದ ದೂರವಾಗಲಿಲ್ಲ. ಅಜ್ಜಿ ಸಂಕಟದಿಂದ, ನೋವಿನಿಂದ ಹೇಳಿಕೊಳ್ಳುತ್ತಿದ್ದಳು. ಅಜ್ಜಿಗೆ ಈ ವಿಷಯ ಹೇಳಿಕೊಳ್ಳಲು ಹತ್ತಿರದಲ್ಲಿ ಯಾರಾದರೂ ಬೇಕಾಗುತ್ತಿತ್ತು ಎಂದು ಕಾಣಿಸುತ್ತದೆ. ನಾನು ಊರಿಗೆ ಬಂದದ್ದು ಅವಳಿಗೆ ಅನುಕೂಲವಾಗುತ್ತಿತ್ತು. ಆಕೆ 'ಮಾಣಿ' ಎಂದು ನನ್ನನ್ನ ಕರೆದು ನನ್ನ ಬಳಿ ಬಂದು ಹೇಳತೊಡಗುತ್ತಿದ್ದಳು :

''ನಿಶ್ಚಿಂತೆಯಿಂದ ಇದ್ವಿ ಮಾಣಿ... ನಾಲ್ಕು ಎಕರೆ ಗದ್ದೆ ಇತ್ತು... ನಿನ್ನಜ್ಜ ನನ್ನ ಕೈಬಿಟ್ಟು ಹೋಗಿ ಐದಾರು ವರ್ಷ ಆಗಿತ್ತು. ಇಡೀ ಸಂಸಾರದ ಹೊರೇನ ನಾನೇ ಹೊತಕೊಂಡು ಎಲ್ಲ ನಿಭಾಯಿಸಿಕೊಂಡು ಹೋಗತಿದ್ದೆ... ಗದ್ದೆ ಅಂಚಿಗೆ ಒಂದು ಹಳ್ಳ... ಮಳೆಗಾಲದಲ್ಲಿ ಭತ್ತ ಬೆಳೆಯೋದು... ಬೇಸಿಗೆಯಲ್ಲಿ ಹಳ್ಳದ ನೀರಿನಲ್ಲಿ ತರಕಾರಿ ಬೆಳೆಯೋದು... ಗೌಡನ ಬೆದರಿಕೆ ಇಲ್ಲ, ಚೌಡಿ ಕಾಟ ಇಲ್ಲ... ಹಾಗೆ ಸಾಗಿತ್ತು ಬಾಳ್ವೆ.... ಆವಾಗ ಬಂತು ನೋಡು ಈ ಮುಳುಗಡೆ ಮಾರಿ... ಲಿಂಗನಮಕ್ಕಿ ಹತ್ತಿರ ಒಡ್ಡು ಕಟ್ತಾರೆ ಅಂದ್ರು... ಈ ಒಡ್ಡಾಗೆ ಲಿಂಗನಮಕ್ಕಿ, ಕಾಳಮಂಜಿ, ಹುಕ್ಲು, ಬಿದರೂರು ಇಂದ್ರೋಡಿ ಮನೆ, ಪಂಜರಳ್ಳಿ, ದೊಂಬೆ, ಹಿತ್ತಲ ಮನೆ, ಮೆಣಸಗಾರು, ಎಲ್ಲ ಮುಳುಗಿಹೋಗತಾವೆ ಅಂದರು... ರೇವಣಿ ಇನ್ನಪೆಟ್ರು ಬಂದು ನೆಲ, ಹೊಲ, ಗದ್ದೆ, ತೋಟ, ಮನೆ, ಕೊಟ್ಟಿಗೆ ಎಲ್ಲ ಅಳೆದು ಹೋದ್ರು... ಇಂತಿಷ್ಟು ಪರಿಹಾರ ಅಂತ ಲೆಕ್ಕ ಹಾಕಿದ್ರು... ಲೆಕಾರ್ಡ ಮಾಡಿದರು... ಮನೆ ಬಾಗಿಲಿಗೆ ಒಂದು ದಿನ ರೇವಣಿ ಆಫೀಸಿನ ಜವಾನ ಬಂದ, ಮತ್ತೊಂದು ದಿನ ಅಕೌಂಟ್ಸ ಆಫೀಸಿನವ ಬಂದ, ಮೂರನೇ ದಿನ ಮುಳುಗಡೆ ಆಫೀಸಿನವ ಬಂದ, ನಾಲ್ಕನೇ ದಿನ ಪೊಲೀಸಿನವ ಬಂದು ಯಾವಾಗ ಮನೆ ಖಾಲಿ ಮಾಡತೀರಾ ಅಂತ ಕೇಳಿದ... ಕೇಳೋದು ಮಾತ್ರ ಅಲ್ಲ ಮಾಣಿ, ಒಬ್ಬನಿಗೆ ತರಕಾರಿ, ಮತ್ತೊಬ್ಬನಿಗೆ ಹಲಸಿನ ಹಣ್ಣು, ಮಗದೊಬ್ಬನಿಗೆ ಅಡಕೆ, ನಾಲ್ಕನೆಯವನಿಗೆ ಭತ್ತ, ಹೀಗೆ ಕೊಟ್ಟುಕೊಟ್ಟು ಸಾಕಾಯ್ತು... ಮೈಮೇಲಿನ ಸೀರೇನ ಕೇಳಲಿಲ್ಲ ನೋಡು...''

ಅಜ್ಜಿ ತುಸು ಮಾತು ನಿಲ್ಲಿಸಿ ಮತ್ತೂ ಹೇಳುತ್ತಿದ್ದಳು :

''ಮನೇಲಿ ಚಿಕ್ಕ ಮಕ್ಕಳು, ನಿಮ್ಮಪ್ಪ, ಹಾಗೇ ಮೂವರು ಹುಡುಗಿಯರು, ಅವರನ್ನೆಲ್ಲ ಕಟ್ಟಿಕೊಂಡು ನಾನು ಅಲ್ಲಿಂದ ಹೊರಟೆ... ಅಲ್ಲಿ ಮನೆ ಬಿಡೋದು ಒಂದು ಕಷ್ಟ ಆದರೆ ಇಲ್ಲಿ ಮನೆ ಮಾಡೋದು ಮತ್ತೊಂದು ಕಷ್ಟ ಆತು... ಆದರೂ ಬೇರೆ ದಾರಿ ಇರಲಿಲ್ಲ... ಸರಕಾರ ನಮ್ಮ ಬೆನ್ನು ಹತ್ತಿತ್ತು... ನಮ್ಮನ್ನ ಅಲ್ಲಿಂದ ತಳ ಬಿಡಿಸಿ ಕಳುಹಿಸುವ ತನಕ ಸರಕಾರಕ್ಕೆ ಬಿಡುವು ಇರಲಿಲ್ಲ. ನಾನು, ನನ್ನ ಮಕ್ಕಳು ತುಂಬಾ ಕಷ್ಟ ಅನುಭವಿಸಿದೆವು... ಅಲ್ಲಿಯ ನಮ್ಮ ಬದುಕು ಛಿದ್ರಛಿದ್ರವಾಯಿತು. ಇಲ್ಲಿ ಹೊಸ ಬದುಕನ್ನ ಕಟ್ಟಲಿಕ್ಕೂ ನಾವು ಪರದಾಡಬೇಕಾಯಿತು... ಒಂಟಿ ಹೆಂಗಸಾಗಿ ನಾನು ತುಂಬಾ ಕಷ್ಟಪಟ್ಟೆ...

ಅಜ್ಜಿ ಹೇಳುತ್ತಿದ್ದ ಮಾತುಗಳು ಕಿವಿಯಲ್ಲಿ ಪ್ರತಿಧ್ವನಿಸುತ್ತಿರಲು ನೀರಿನ ನಡುವೆ ಅನ್ನುವ ಹಾಗೆ ನಿಂತಿದ್ದ ಮರದ ಮೇಲೆ ಕುಳಿತ ಹಕ್ಕಿ ವಿಚಿತ್ರವಾಗಿ ಕೂಗಿಕೊಳ್ಳತೊಡಗಿತು.

ನಾನು ನೋಡುತ್ತಿದ್ದ ಹಾಗೆ ಎರಡು ಹದ್ದುಗಳು ಈ ಮರವನ್ನ ಗುರಿಯಾಗಿ ಇರಿಸಿಕೊಂಡು ಮರದತ್ತ ಬರತೊಡಗಿದವು. ಎರಡೂ ದಷ್ಟಪುಷ್ಟವಾಗಿ ಬೆಳೆದ ಕಪ್ಪು ಹದ್ದುಗಳು. ತೀಕ್ಷ್ಣ ಕಣ್ಣುಗಳು, ಹರಿತವಾದ ಉಗುರನ್ನ ಹೊಂದಿದ್ದ ಕಾಲುಗಳು, ಇತರೆ ಪ್ರಾಣಿಗಳ ದೇಹದಿಂದ ಮಾಂಸವನ್ನ ಕಿತ್ತು ಕಿತ್ತು ತಿಂದ ಅನುಭವವಿದ್ದ ಹಳದಿ ಕೊಕ್ಕುಗಳು. ವೃತ್ತಾಕಾರದಲ್ಲಿ ಸುತ್ತುತ್ತ ಅವು ಆ ಹಕ್ಕಿಗೆ ಹತ್ತಿರವಾಗತೊಡಗಿದವು.

ಎರಡೂ ಹದ್ದುಗಳು ಮರದ ತುದಿಯಲ್ಲಿನ ಗೂಡಿನತ್ತ ಹಾರಿದಾಗ ಹಕ್ಕಿ ಚೀರುತ್ತ ಗೂಡನ್ನ ರಕ್ಷಿಸಿಕೊಳ್ಳಲು ಅತ್ತ ಹಾರಿತು. ಎರಡೂ ಹದ್ದುಗಳು ಮಾತನಾಡಿಕೊಂಡಂತೆ ಒಂದು ಹಕ್ಕಿಯತ್ತ ನುಗ್ಗಿತು – ಮತ್ತೊಂದು ಆ ಗೂಡಿನತ್ತ.

ಈ ಹದ್ದುಗಳು ತನ್ನ ಗೂಡನ್ನ ಗುರಿಯಾಗಿ ಇರಿಸಿಕೊಂಡು ಬರುತ್ತಿವೆ ಅನ್ನುವುದು ಆ ಹಕ್ಕಿಗೆ ಅರಿವಾಗಿ ಅದು ಕುಳಿತಲ್ಲಿಂದ ಹಾರಿ ತಪ್ಪಿಸಿಕೊಳ್ಳಲು ನೋಡಿತು. ಹಾಗೆಯೇ ಗೂಡಿನ ಬಳಿ ಹೋಗಿ ಗೂಡಿನ ರಕ್ಷಣೆಗೆ ಎಂಬಂತೆ ಅಲ್ಲಿ ಹಾರಾಡತೊಡಗಿತು.

ಒಂದು ಹದ್ದು ನೇರವಾಗಿ ಹಕ್ಕಿಯ ಮೇಲೆ ದಾಳಿ ಮಾಡಿತು. ಆ ಹದ್ದು ಹಕ್ಕಿಯ ರೆಕ್ಕೆಗೆ ಕೊಕ್ಕು ಹಾಕಿತು. ಹಕ್ಕಿಯ ಕುತ್ತಿಗೆಗೆ ಬಾಯಿ ಹಾಕಿತು. ಹಕ್ಕಿಯ ಚೀತ್ಕಾರ ಅಲ್ಲೆಲ್ಲ ಕೇಳಿಬಂದಿತು. ಸುತ್ತಲಿನ ವಾತಾವರಣ ಆ ಚೀತ್ಕಾರವನ್ನ ಪ್ರತಿಫಲಿಸಿತು. ಇದರ ಜೊತೆಗೇನೆ ಇನ್ನೊಂದು ಹದ್ದು ಗೂಡಿನತ್ತ ನುಗ್ಗಿ ಅಲ್ಲಿ ತನ್ನ ಕಾರ್ಯಾಚರಣೆಯನ್ನ ಪ್ರಾರಂಭಿಸಿತು. ಬಡಪಾಯಿ ಹಕ್ಕಿ ಈಗ ಮತ್ತೂ ಚಂಚಲವಾಯಿತು. ಅದಕ್ಕೆ ತನ್ನನ್ನ ತಾನು ಉಳಿಸಿಕೊಳ್ಳಬೇಕೇ ಇಲ್ಲ ತನ್ನ ಗೂಡನ್ನ ಉಳಿಸಿಕೊಳ್ಳಬೇಕೆ ಅನ್ನುವುದು ಅರಿಯದಾಯಿತು. ನಾನು ಕುಳಿತಲ್ಲಿಂದ ಎದ್ದು ನಿಂತು ಕೂಗತೊಡಗಿದೆ. ಆದರೆ ಹದ್ದುಗಳ ಆಕ್ರಮಣ ಅತಿಯಾಯಿತು. ಒಂದು ಹದ್ದು ಹಕ್ಕಿಯ ಪುಕ್ಕ ಕಿತ್ತುಹಾಕಿತು, ಕುತ್ತಿಗೆಯ ಪುಕ್ಕ ಸೆಳೆಯಿತು. ಹಕ್ಕಿ ಗಾಳಿಯಲ್ಲಿ ತೊನೆದಾಡಿತು. ಹದ್ದಿನ ಬಾಯಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸಿತು. ಈ ಹದ್ದುಗಳ ಬಾಯಿಗೆ ಸಿಗಬಾರದೆಂದು ತನ್ನ ಶಕ್ತಿ ಹಾಕಿ ಮೇಲೆ ಕೆಳಗೆ ಹಾರಿತು. ಆದರೆ ಕ್ರಮೇಣ ಅದರ ಶಕ್ತಿ ಉಡುಗತೊಡಗಿತ್ತು. ತನ್ನ ಕಣ್ಣೆದುರಿನಲ್ಲಿ ತನ್ನ ಗೂಡು ನಾಶವಾದುದನ್ನ ಅದು ನೋಡಿತು, ಹಾಗೆಯೇ ಗೂಡು ಗಾಳಿ ಪಾಲಾಯಿತು. ಹದ್ದುಗಳು ಹಕ್ಕಿಯನ್ನ ತಮ್ಮ ತಮ್ಮ ಕೊಕ್ಕಿನಲ್ಲಿ ಹಿಡಿದುಕೊಂಡಿದ್ದವು. ಹಕ್ಕಿಯ ಒಂದು ರೆಕ್ಕೆ ಹರಿದಿತ್ತು. ಗೂಡು ಛಿದ್ರವಾಗಿ ನೀರಿಗೆ ಅಪ್ಪಳಿಸಿತ್ತು. ಹಕ್ಕಿಯ ಕುತ್ತಿಗೆಯಿಂದ ರಕ್ತ ಒಸರತೊಡಗಿತ್ತು. ಅದು ನೀರಿಗೆ ಬಿದ್ದು ನೀರು ಕೆಂಪೇರಿತು. ಅದರ ಚೀತ್ಕಾರವಂತೂ ಮುಗಿಲು ಮುಟ್ಟಿತ್ತು.

ಈ ದೃಶ್ಯವನ್ನ ಅಸಹಾಯಕನಾಗಿ ನೋಡುತ್ತಿದ್ದೆ ನಾನು. ಕೆಳಗಿನ ನೀರೂ ಇದನ್ನ ನೋಡುತ್ತಿದ್ದಿರಬಹುದು. ದೂರದ ಕಾಡೂ ಇದನ್ನ ನೋಡುತ್ತಿತ್ತೋ ಏನೋ. ಆದರೆ ಆ ಹಕ್ಕಿಯನ್ನ ಅದರ ಗೂಡನ್ನ ಉಳಿಸುವವರು ಅಲ್ಲಿ ಯಾರೂ ಇರಲಿಲ್ಲ. ಹಕ್ಕಿಗಾಗಿ ಮಿಡುಕಾಡುವವರು ಯಾರೂ ಇರಲಿಲ್ಲ. ಹೀಗಾಗಿ ಹದ್ದುಗಳ ಕೈ ಮೇಲಾಯಿತು. ನಾನು ನೋಡುತ್ತಿರಲು ಹಕ್ಕಿಯ ದೇಹ ಛಿದ್ರ ಛಿದ್ರವಾಗಿ ಹಕ್ಕಿಯ ಗೂಡು ಕೂಡ ನಾಶವಾಗಿ ಎರಡೂ ಹದ್ದುಗಳು ಹಕ್ಕಿಯ ದೇಹವನ್ನ ಹಂಚಿಕೊಂಡಂತೆ ಅಲ್ಲಿಂದ ಹಾರಿದವು. ಹಕ್ಕಿಯ ಕೆಲ ಪುಕ್ಕಗಳು ನೀರಿಗೆ ಬಿದ್ದು ತೇಲತೊಡಗಿದವು, ಅದರ ಗೂಡಿನ ಜೊತೆಯಲ್ಲಿ.

ನಾನು ನಿಂತಲ್ಲಿಯೇ ಕುಸಿದು ಕುಳಿತೆ. ಆ ಹಕ್ಕಿಯ ಕೊನೆಯ ಚೀತ್ಕಾರ ಮಾತ್ರ ನನ್ನ ಕಿವಿಯಲ್ಲಿ ಉಳಿಯಿತು. ಲಿಂಗನಮಕ್ಕಿ ಅಣೆಕಟ್ಟಿನ ಆ ಹಿನ್ನೀರು, ಈ ನೀರಿನ ಅಂಚಿಗೆ ನಿಂತ ಕಾಡು, ನೀರಿನಲ್ಲಿ ಪ್ರತಿಬಿಂಬವಾಗಿ ನಿಂತ ಮರಗಳು, ಮೇಲಿನ ನೀಲಿ ಆಕಾಶ, ಅಲ್ಲಿ ಸುಳಿದಾಡುತ್ತಿದ್ದ ಗಾಳಿ ಎಲ್ಲವೂ ಎಂದಿನಂತೆ ಶಾಂತವಾಗಿ, ಇಲ್ಲಿ ನಡೆದದ್ದು ತಮಗೆ ಸಂಬಂಧಪಟ್ಟದ್ದೇ ಅಲ್ಲ ಅನ್ನುವ ಹಾಗೆ ನಿಂತಿದ್ದವು.

ಏಕೋ ನನಗೆ ಥಟ್ಟನೆ ಅಜ್ಜಿಯ ನೆನಪಾಗಿ ನಾನು ಅಲ್ಲಿಂದ ಊರಿಗೆ ಹೋಗುವುದೆಂದು ನಿರ್ಧರಿಸಿ ಹೊರಟೆ. ನನಗೆ ಕೂಡಲೇ ಊರಿಗೆ ಹೋಗಿ ಅಜ್ಜಿಯನ್ನ ನೋಡಬೇಕಿತ್ತು. ನಾನು ವೇಗವಾಗಿ ಹೆಜ್ಜೆ ಹಾಕತೊಡಗಿದೆ.

ಡಾ|| ನಾ. ಡಿಸೋಜ
ನೆಹರು ನಗರ, ಸಾಗರ - ೫೭೭ ೪೦೧

## ಹೈಕುಗಳು

ಮೋಡ ಮಿಂಚಿತು
ಭೂಮಿಯ ಬೀಜಕ್ಕೀಗ
ಹೆರಿಗೆ ನೋವು

ಸಿದ್ಧರಾಮ ಹಿರೇಮಠ
ಕೂಡ್ಲಿಗಿ, ಬಳ್ಳಾರಿ

# ವಿಸ್ಮೃತಿ, ಜಾತಿಗಳ ಹುಡುಕಾಟ ಹಾಗೂ ಮೀಸಲಾತಿ: ಒಂದು ಚರ್ಚೆ

ಮೊಹಮದ್ ರಫೀ ಪಾಷ



ಇಂದಿನ ಸಂದರ್ಭದಲ್ಲಿ ನಾಲ್ಕು ಪ್ರಮುಖವಾದ ಚರ್ಚೆಗಳು ನಡೆಯುತ್ತಿವೆ: ಅಲ್ಪಸಂಖ್ಯಾತರಲ್ಲಿ ಅದರಲ್ಲೂ ಮುಸ್ಲಿಮರಲ್ಲಿ ಜಾತಿಯ ನೆನಪುಗಳಿಲ್ಲದ ಅಥವಾ ವಿಸ್ಮೃತಿ ಇರುವ ಸಂದರ್ಭದಲ್ಲಿ ಜಾತಿಗಳನ್ನು ಯಾಕೆ ಪುನಶ್ಚೇತನಗೊಳಿಸಬೇಕು? ಅಥವಾ ನಿರ್ಮಿಸಬೇಕು? ಎರಡನೆಯದಾಗಿ, ಅವರಲ್ಲಿರುವ ಜಾತಿಗಳನ್ನು ಗುರುತಿಸಬೇಕೆ? ಮುಸ್ಲಿಮರಿಗೆ ಹಿಂದುಳಿದ ವರ್ಗದೊಳಗೆ ಮೀಸಲಾತಿ ನೀಡಬೇಕೆ? ಅಥವಾ ಅವರಿಗೆ ಪ್ರತ್ಯೇಕವಾಗಿ ಧಾರ್ಮಿಕ ನೆಲೆಗಟ್ಟಿನಲ್ಲಿ ಮೀಸಲಾತಿ ನೀಡಬೇಕೆ?

ಈ ಚರ್ಚೆಗಳು ಆರಂಭಗೊಂಡದ್ದು ಸಾಚಾರ್ ವರದಿ ನಂತರವೆಂದೇ ಹೇಳಬಹುದು. ಪ್ರಾರಂಭದಲ್ಲಿ ಈ ಚರ್ಚೆ ಅಲ್ಪ ಸಂಖ್ಯಾತರ 'ಅಭಿವೃದ್ಧಿ ಕೊರತೆ,' ಅಭಿವೃದ್ಧಿಯ ರಾಜಕಾರಣ, ವ್ಯವಸ್ಥೆಯ ತಾರತಮ್ಯತೆ ಇತ್ಯಾದಿಗಳ ಸುತ್ತ ಕೇಂದ್ರೀಕೃತವಾಗಿತ್ತು. ಇದೇ ಸಂದರ್ಭದಲ್ಲಿ ಸಾಚಾರ್ ವರದಿ ಎತ್ತಿತೋರಿಸಿದ ಮೂರು ಜಾತಿಗಳ ಕುರಿತು ಸಮುದಾಯದೊಳಗೆ ಹಾಗೂ ಹೊರಗೆ ಗಂಭೀರವಾದ ಚರ್ಚೆಗಳಾಗಲೇ ಇಲ್ಲ. ಯಾವಾಗ ಕೇಂದ್ರ ಸರಕಾರ ಅಲ್ಪಸಂಖ್ಯಾತರಿಗೆ ಹಿಂದುಳಿದ ವರ್ಗದ ಕೋಟಾದೊಳಗೆ ಶೇಕಡ ೪.೫ ಕೋಟಾವನ್ನು ನಿರ್ಧರಿಸಿತೋ ಆಗ ಜಾತಿಗಳ ಅಸ್ಮಿತೆಯ ಪ್ರಶ್ನೆ ಹಾಗೂ ಚರ್ಚೆ ಉದ್ಭವಿಸಿದವು. ಅಷ್ಟು ಮಾತ್ರವಲ್ಲದೆ ಜಾತಿಗಳ ನೆನಪುಗಳಿಲ್ಲದ ಸಂದರ್ಭದಲ್ಲಿ ಜಾತಿಗಳನ್ನು ಹೇಗೆ ನಿರ್ಮಿಸಬಹುದು ಎಂಬ ಕುತೂಹಲಕಾರಿ ಪ್ರಶ್ನೆ ಕೂಡ ಉದ್ಭವಿಸಿತು. ಎರಡನೆಯದಾಗಿ, ಜಾತಿಗಳನ್ನು ರಾಜಕೀಯ ಅಸ್ಮಿತೆಗಾಗಿ ನಿರ್ಮಿಸಬೇಕೆ? ಅಥವಾ ಸಾಮಾಜಿಕ ಕಾರಣಗಳಿಗಾಗಿ ನಿರ್ಮಿಸಬೇಕೆ ಎಂಬ ಗೊಂದಲ ಕೂಡ ಹುಟ್ಟಿಕೊಂಡಿತ್ತು. ಅಷ್ಟು ಮಾತ್ರವಲ್ಲದೆ, ಚರ್ಚೆಗಳು ಐಡೆಂಟಿಟಿಯ ವಿಷಯಕ್ಕೆ ಮಾತ್ರ ಸೀಮಿತಗೊಳ್ಳಲಿಲ್ಲ. ಬದಲು, ಅವು 'ಗುರುತಿಸುವಿಕೆ ರಾಜಕಾರಣ'ವನ್ನು ಒಳಗೊಳ್ಳುತ್ತಾ ಹೋದವು ಹಾಗೂ ಅದರ ಭಾಗವಾಗುತ್ತಾ ಹೋದವು. ಇಲ್ಲಿ ರಾಜಕೀಯ ವ್ಯವಸ್ಥೆ ಜಾತಿಗಳನ್ನು ಗುರುತಿಸಬೇಕಾಗಿರುವುದು ಅತೀ ಮುಖ್ಯವೆಂಬ ವಾದವನ್ನು ಮುಂದಿಡಲಾಯಿತು. ಈ ಗುರುತಿಸುವಿಕೆಗೆ ಬೇರೆ ಬೇರೆ ರೂಪಕಗಳಿದ್ದರೂ, ಮೀಸಲಾತಿ ಒಂದು ಪ್ರಮುಖ ಸಾಧನವೆಂಬ ತೀರ್ಮಾನಕ್ಕೂ ಬರಲಾಯಿತು. ಆದ ಕಾರಣವೇ ಮೀಸಲಾತಿ ಚರ್ಚೆ ಐಡೆಂಟಿಟಿ ರಾಜಕಾರಣದಿಂದ ಆರಂಭಗೊಂಡು 'ಗುರುತಿಸುವಿಕೆ' ರಾಜಕಾರಣದ ತನಕ ವಿಸ್ತೃತವಾಯಿತೆಂದರೂ ತಪ್ಪೇನಿಲ್ಲ.

ಅಲ್ಪಸಂಖ್ಯಾತರಲ್ಲಿ ಜಾತಿಗಳಿಲ್ಲ ಎಂಬ ವಾದ ಹೊಸತೇನಲ್ಲ, ಇದಕ್ಕೆ ಮೂರು ಕಾರಣಗಳನ್ನು ನೀಡಲಾಗುತ್ತದೆ: ಧರ್ಮ 'ಕಬೀಲಾ', 'ಖೋಮ್'ಗಳನ್ನು

ಜಾತಿ ಸಂಖ್ಯೆಗಳ ರಾಜಕಾರಣ ಇವತ್ತಿಗೂ ಮುಗಿಯದ ಅಧ್ಯಾಯ. ಇದಕ್ಕೆ ಜಾತಿಗಳ ಸಂಖ್ಯೆಯಲ್ಲಿ ನಿರ್ದಿಷ್ಟತೆ ಇಲ್ಲದಿರುವುದು ಒಂದು ಕಾರಣವಾದರೆ, ಜಾತಿಗಳು ಸರಕಾರಿ ಪಟ್ಟಿಯಲ್ಲಿ ಬರಲು ಪ್ರಯತ್ನಿಸುತ್ತಿರುವುದು ಮತ್ತೊಂದು ಕಾರಣ. ವಾಸ್ತವವಾಗಿ ದಲಿತ-ಮುಸ್ಲಿಂ ಹಾಗೂ ಮುಸ್ಲಿಂ ಹಿಂದುಳಿದ ವರ್ಗದ ಸಂಖ್ಯೆಯಲ್ಲಿ ಒಂದು ನಿರ್ದಿಷ್ಟತೆ ಇಲ್ಲ, ಅದು ರಾಜ್ಯದಿಂದ ರಾಜ್ಯಕ್ಕೆ ಬದಲಾಗುತ್ತಾ ಹೋಗುತ್ತದೆ. ಪಂಜಾಬ್‌ನಲ್ಲಿ ೯ ಜಾತಿಗಳನ್ನು ಹಿಂದುಳಿದ ವರ್ಗಗಳೆಂದು ಗುರುತಿಸಿದರೆ, ಮಹಾರಾಷ್ಟ್ರದಲ್ಲಿ ೨೦, ಮಧ್ಯಪ್ರದೇಶದಲ್ಲಿ ೩೭, ಹರಿಯಾಣದಲ್ಲಿ ೭, ಗುಜರಾತ್‌ನಲ್ಲಿ ೩೪, ದೆಹಲಿಯಲ್ಲಿ ೨೦, ಬಿಹಾರದಲ್ಲಿ ೩೧, ಉತ್ತರ ಪ್ರದೇಶದಲ್ಲಿ ೪೦, ಪಶ್ಚಿಮ ಬಂಗಾಲದಲ್ಲಿ ೫೪... ಹೀಗೆ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ಸಾಚಾರ್ ವರದಿ ಪ್ರಕಾರ ಶೇ. ೩೧.೭ರಷ್ಟು ಜನ ಹಿಂದುಳಿದ ವರ್ಗಗಳಿಗೆ ಸೇರಿದ್ದರು.






**ವ**ಯವು ಏರಿದ ಎತ್ತರಕೆ
ಕನಸು ಕಟ್ಟಿದವು ತೋರಣ
ಚೆಲ್ಲವರಿದ ಭಾವಗಳು
ಬಂಧನ ಹರಿದವು ಕ್ಷಣಕ್ಷಣ

ಜುನುಗುಡುವ ತುಟಿ ಬೆರಳು
ಬಿಸಿನೆತ್ತರ ಬಯಕೆ... ಬಾಯಾರಿ
ತುದಿ ಬೆರಳ ಮೇಲೆ ಜಗವು
ಕಣ್ಣೊಳಗೆ ಕಾಮನ ಬಿಲ್ಲು
ತೇಲಿದವು ಗಾಳಿಯ ಮೈಯೇರಿ

ಬರೆದ ಹಾಡುಗಳು
ಹಕ್ಕಿಗೋಣು ಮುರಿದಂತೆ
ಒಡೆದ ಬಳೆಗಳ ನೆತ್ತರಿನಲಿ
ಮನದ ಮರಮರಿಕೆ
ಹೊತ್ತಿ ಉರಿದವು

ಸುಂಟರ ಗಾಳಿಯಲಿ
ಸಿಕ್ಕಿದಂತೆ ಉಸಿರು
ಕಣ್ಣತುಂಬ ಕಸಕಡ್ಡಿ
ಮುಳುಗೊ ಸೂರ್ಯನ ಮಬ್ಬುಗತ್ತಲೆ
ಅಡಗಿಸಿಟ್ಟಿತು ಗುರುತು ಚಹರೆ
ಕೈಕಾಲು ಆಡದಂತೆ

ಪರಿಚಯದ ಧ್ವನಿ ಉಡುಗಿ
ಗೂಡು ಸೇರುವ ಹಕ್ಕಿಹಿಂಡು
ನಿಂತುಬಿಟ್ಟಿತು ರೆಕ್ಕೆ ಬಡಿಯದೆ
ತಿಂದು ತೇಗಿದ ಗಿಡುಗ ಹಕ್ಕಿಯ ಕೂಗು

ಸಾವ ಪ್ರೀತಿಸಿ ಜೀವ ಗೆದ್ದಿತು
ಕರೆದು ಅಪ್ಪಿತು ಭೂಮಿ
ಹಸಿರು ಬಳ್ಳಿಯ ಚಿಗುರು ತುದಿಯಲಿ
ಕಹಿಯ ಬೇರಿನ ಒಗರು
ನಿಂತುಬಿಟ್ಟಿತು ಎದೆಯಲಿ

**ಅನಸೂಯ ಕಾಂಬಳೆ**
ಸರಕಾರಿ ಪ್ರಥಮ ದರ್ಜೆ ಕಾಲೇಜು, ಶ್ರೀನಗರ, ಜೋಡರಸ್ತೆ, ಬೆಳಗಾಂ

ಒಪ್ಪಿಕೊಳ್ಳುತ್ತದೆಯೇ ಹೊರತು ಜಾತಿಗಳನ್ನಲ್ಲ. ಎರಡನೆಯದಾಗಿ, ಧರ್ಮದ ಅಂತಿಮ ಗುರಿ 'ಮುಸ್ಲಿಂ ಉಮ್ಮಾ'ಗಳನ್ನು ನಿರ್ಮಿಸುವುದೇ ಹೊರತು ಜಾತಿಗಳನ್ನಲ್ಲ. ಮೂರನೆಯದಾಗಿ, ಹೊಸ ಅಸ್ಮಿತೆ ಸಂದರ್ಭದಲ್ಲಿ ಮತಾಂತರ ಪೂರ್ವದ ಪರಂಪರೆ, ಇತಿಹಾಸದ ನೆನಪುಗಳನ್ನು ಕಳೆದುಕೊಳ್ಳಲೇಬೇಕಾದ ಅನಿವಾರ್ಯತೆ ಇದೆ. ಈ ಎಲ್ಲ ಕಾರಣಗಳಿಗಾಗಿ ಅಲ್ಪಸಂಖ್ಯಾತರಲ್ಲಿ, ಅದರಲ್ಲೂ ಮುಸ್ಲಿಮರಲ್ಲಿ ಜಾತಿಗಳ ಪರಂಪರೆ ಇಲ್ಲ. ಹಾಗೂ ಜಾತಿಯ ನೆನಪುಗಳಿಲ್ಲ ಎಂಬ ತೀರ್ಮಾನಕ್ಕೆ ಕೂಡಲೆ ಬರಲಾಗುತ್ತದೆ.

ಇದರರ್ಥ ಮುಸ್ಲಿಮರಲ್ಲಿ ಜಾತಿಯ ಹುಡುಕಾಟ ಹಾಗೂ ಚರ್ಚೆ ಇರಲಿಲ್ಲವೆಂದಲ್ಲ. ಈ ಚರ್ಚೆಯ ಸಂದರ್ಭದಲ್ಲಿ ಎರಡು ಅಂಶಗಳು ನಮಗೆ ಮತ್ತೆ ಮತ್ತೆ ಮುಖಾಮುಖಿಯಾಗುತ್ತವೆ : ಒಂದೆಡೆ ಗ್ರಂಥ, ಸಂಪ್ರದಾಯ ಹಾಗೂ ಶಾಸ್ತ್ರಬದ್ಧ ರಿಲಿಜನ್. ಮತ್ತೊಂದೆಡೆ ಸ್ಥಾನೀಯ ಪರಂಪರೆ, ನಂಬಿಕೆ, ಸಾಮಾಜಿಕ ಸಂಬಂಧ ಹಾಗೂ ಪರಂಪರೆಗಳನ್ನೊಳಗೊಂಡ ಸಮುದಾಯ. ಇಸ್ಲಾಂನಲ್ಲಿ ಜಾತಿಯ ಕುರಿತು ಚರ್ಚೆಗಳು ಸೂಕ್ಷ್ಮವಾಗಿ ಬಹಳ ಹಿಂದೆಯೇ ಆರಂಭಗೊಂಡರೂ, ಅದಕ್ಕೆ ಆದ್ಯತೆ ದೊರೆತದ್ದು ೧೯ನೇ ಶತಮಾನದಲ್ಲಿ, ಅದರ ಮೂಲ ಇರುವುದು 'ಕುಫ' ಎಂಬ ವಿಷಯದಲ್ಲಿ. ವಾಸ್ತವವಾಗಿ ಇದೊಂದು ವೈರುಧ್ಯಮಯವಾದ ಸನ್ನಿವೇಶ. ಒಂದೆಡೆ ಜಾತಿಯ ನೆನಪುಗಳನ್ನು ಮರೆಯುತ್ತಾ ಮುಸ್ಲಿಂ 'ಉಮ್ಮಾ'ವನ್ನು ನಿರ್ಮಿಸುವ ಯತ್ನ. ಮತ್ತೊಂದೆಡೆ, ಜಾತಿಯ ನೆಲೆಗಟ್ಟುಗಳ ಹುಡುಕಾಟದ ಕಾಲ. ವಾಸ್ತವವಾಗಿ ಸಮುದಾಯದೊಳಗೆ ಜಾತಿಗಳ ಕುರಿತು ಮೊತ್ತಮೊದಲ ಬಾರಿಗೆ ಬೆಳಕು ಚೆಲ್ಲಿದ್ದು ೧೪ನೇ ಶತಮಾನದಲ್ಲಿ ಮಹಮ್ಮದ್ ಬಿನ್ ತುಘಲಕ್‌ನ ದರ್ಬಾರಿನಲ್ಲಿದ್ದ ಇಸ್ಲಾಮಿಕ್ ಪಂಡಿತ ಜಿಯಾವುದ್ದೀನ್ ಬರನಿ. ಅವನ 'ಫತ್ವ-ಈ ಜಹಂದಾರಿ' ಜಾತಿಗಳ ನಡುವಿನ ತಾರತಮ್ಯಗಳನ್ನು ಪುಷ್ಟೀಕರಿಸುತ್ತದೆ. ಅವನೊಬ್ಬ ಇಸ್ಲಾಮಿಕ್ 'ಮನು'. ಯಾಕೆಂದರೆ ಅವನು ಮುಸ್ಲಿಮರಲ್ಲಿದ್ದ ಮೇಲ್ಜಾತಿಗಳಾದ ಅಶ್ರಫ್ ಪರವಾಗಿ ನಿಂತವನು ಹಾಗೂ ಅವರ ಯಜಮಾನಿಕೆಗೆ ಒತ್ತು ನೀಡಿದವನು. ಅವನ ಪ್ರಕಾರ ಕೆಳಜಾತಿಗಳಾದ ಅಜ್ಲಫ್‌ಗಳು 'ನಾಯಿಗಳು, ಹಂದಿಗಳು ಹಾಗೂ ಕರಡಿಗಳು.' ಅವರನ್ನು ಜ್ಞಾನದ ಪರಿಧಿಯಿಂದ ಹೊರಗಿಡಬೇಕೆಂದು ವಾದಿಸುತ್ತಾನೆ. ಖ್ಯಾತ ಇತಿಹಾಸಕಾರ ತಾರಾಚಂದ್ ತಮ್ಮ 'ಹಿಸ್ಟರಿ ಆಫ್ ಫ್ರೀಡಂ ಮೂವ್‌ಮೆಂಟ್ ಇನ್ ಇಂಡಿಯಾ'ದಲ್ಲಿ ಈ ರೀತಿಯಾಗಿ ವಾದಿಸುತ್ತಾರೆ : ''೧೯೩೧ಕ್ಕೆ ಮುಂಚಿನ ಎಲ್ಲ ಜನಗಣತಿ ವರದಿಗಳೂ ಮುಸಲ್ಮಾನರ ಪೈಕಿ ಇರುತ್ತಿದ್ದ ಜಾತಿಗಳ ಪಟ್ಟಿಗಳನ್ನು ಕೊಟ್ಟಿವೆ. ೧೮ನೆಯ ಶತಮಾನದಲ್ಲಿ ಮುಸಲ್ಮಾನರು ಈ ದೇಶದಲ್ಲಿ ಹಿಂದು ಸಮಾಜದ ಕಟ್ಟಳೆಗಳನ್ನು ಅನುಸರಿಸುತ್ತಿದ್ದರು. ಅದು ಇಸ್ಲಾಂ ಪದ್ಧತಿಯಲ್ಲ, ಆದರೆ ಆಗ್ಗೆ ಅದನ್ನು ಕುರಿತಂತೆ ಎಚ್ಚರವಿನ್ನೂ ಇರಲಿಲ್ಲ.''

ಜಾತಿಯ ಕುರಿತು ಉಲ್ಲೇಖ ಸಿಗುವುದು ವಿವಿಧ ಜನಗಣತಿಗಳಲ್ಲಿ ಮಾತ್ರವಲ್ಲದೆ, ಸರಕಾರದ ಕೆಲವು ವರದಿಗಳಲ್ಲಿ. ೧೯೧೯ರಲ್ಲಿ ಅಂದಿನ ಮೈಸೂರು ಸಂಸ್ಥಾನ ತಂದ 'ಕಾಸ್ಟ್ಸ್ ಆಂಡ್ ಟ್ರೈಬ್ಸ್ ಇನ್ ಮೈಸೂರು' ಸೂಕ್ಷ್ಮವಾಗಿ ಪಿಂಡಾರಿ, ಪಿಂಜಾರಿ ಇತ್ಯಾದಿ ಜಾತಿಗಳ ಕುರಿತು ಪ್ರಸ್ತಾಪ ಮಾಡುತ್ತದೆ. ಸ್ವಾತಂತ್ರ್ಯೋತ್ತರ ಕಾಲಾವಧಿಯಲ್ಲಿ ಬಂದ 'ಪೀಪಲ್ಸ್ ಆಫ್ ಇಂಡಿಯಾ ಪ್ರೊಜೆಕ್ಟ್' ಕೂಡ ಜಾತಿಯ ಅಸ್ತಿತ್ವವನ್ನು ಎತ್ತಿ ತೋರಿಸುತ್ತದೆ.

ಈ ಸಂದರ್ಭದಲ್ಲಿ ಒಂದು ಪ್ರಶ್ನೆ ಅನಿವಾರ್ಯ : ಮುಸ್ಲಿಮರಲ್ಲಿ ಕಟ್ಟುನಿಟ್ಟಾಗಿರುವ ಜಾತಿವ್ಯವಸ್ಥೆ ಹಾಗೂ ಜಾತಿ ಪ್ರಜ್ಞೆ ಇದೆಯೇ ? ಅಥವಾ ಶಿಥಿಲಗೊಂಡಿರುವ ಚೌಕಟ್ಟುಗಳಿವೆಯೆ ? ಜಾತಿ ಕುರಿತಂತೆ ವಿಸ್ಮೃತಿ ಅಥವಾ ನೆನಪುಗಳಿಲ್ಲದ ಸಂದರ್ಭದಲ್ಲಿ ಜಾತಿ ಪ್ರಮುಖವಾಗುವುದೇ ಇಲ್ಲ, ಅಲ್ಲಿ ಜಾತಿ ತೆಳುಪದರವಾಗಿ ಹರಡಿರುತ್ತದೆ. ಉಳಿದ ಸಂದರ್ಭಗಳಲ್ಲಿ ಜಾತಿ ವ್ಯವಸ್ಥೆಯ ಗಟ್ಟಿತನವನ್ನು ಹಾಗೂ ಪ್ರಜ್ಞೆಯನ್ನು ಅಲ್ಲಗಳೆಯಲು ಸಾಧ್ಯವಿಲ್ಲ. ಹಿಂದುಗಳಲ್ಲಿ ಜಾತಿಗಳಿರುವಂತೆ ಮುಸ್ಲಿಮರಲ್ಲಿಯೂ ಜಾತಿವ್ಯವಸ್ಥೆ ಇರುವುದು ವಾಸ್ತವ. ಮತಾಂತರ ಪೂರ್ವದ ಜಾತಿವ್ಯವಸ್ಥೆ ಮತಾಂತರದ ನಂತರವೂ ಮುಂದುವರಿಯುತ್ತಾ ಹೋಗುತ್ತಿರುವುದನ್ನು ಭಾರತದ ಉದ್ದಗಲಕ್ಕೂ ನೋಡಬಹುದು. ಇದಕ್ಕೆ ಕಾರಣ ಬಹುಸಂಖ್ಯಾತ ಭಾರತದ ಮುಸ್ಲಿಮರು ಮೂಲತಃ ಹಿಂದುಗಳು ಎಂಬುದನ್ನು ಮರೆಯಬಾರದು. ಹಿಂದುಗಳಲ್ಲಿ ನಾಲ್ಕು ಜಾತಿಗಳು ಪ್ರಮುಖವಾಗಿದ್ದರೆ, ಅಲ್ಪಸಂಖ್ಯಾತರಲ್ಲಿ ಮೂರು ಪ್ರಮುಖವಾದ ಜಾತಿಗಳಿವೆ. ಇದನ್ನು 'ಝೂತ್' ಎಂದು ಕರೆಯುತ್ತಾರೆ. ಈ ಚೌಕಟ್ಟಿನೊಳಗೆ ಉಳಿದ ಜಾತಿಗಳಿರುವುದು ಕೂಡ ಅಷ್ಟೇ ವಾಸ್ತವ. ಮೊದಲನೆಯದಾಗಿ, ಮೇಲ್ಜಾತಿಗೆ ಸೇರಿದ ಅಶ್ರಫ್‌ಗಳಿದ್ದಾರೆ. ಇದರಲ್ಲಿ ಶೇಖ್, ಸೈಯ್ಯದ್, ಮೊಘಲ್ ಹಾಗೂ ಪಠಾಣ್ ಎಂಬ



ತನ್ನ ಜಾತಿ ಪಂಚಾಯತ್‌ಗಳ ಮೂಲಕ ಸಮುದಾಯವನ್ನು ನಿಯಂತ್ರಣದಲ್ಲಿಡುತ್ತದೆ. ಜಾತಿ ಪಂಚಾಯತ್ ಅಶ್ರಫೇತರರಲ್ಲಿ, ಅದರಲ್ಲೂ ಹಿಂದುಳಿದ ವರ್ಗಗಳಲ್ಲಿ ದಟ್ಟವಾಗಿದೆ. ಇದು 'ಬಿರಾದರಿ' ಎಂಬ ಸಾಮಾಜಿಕ ವ್ಯವಸ್ಥೆಯ ಒಂದು ಭಾಗ. ಈ ಜಾತಿ ಪಂಚಾಯತ್‌ಗಳು ಅಂತರ್‌ಜಾತೀಯ ಸಂಬಂಧಗಳನ್ನು, ಗೋತ್ರದ ಸಮಸ್ಯೆಗಳನ್ನು, ವಿವಿಧ ಭಿನ್ನಾಭಿಪ್ರಾಯಗಳನ್ನು ಪರಿಹರಿಸುತ್ತವೆ. ದುರಂತವೆಂದರೆ ಈ ಜಾತಿ ಪಂಚಾಯತ್‌ಗಳ ತೀರ್ಮಾನವೇ ಅಂತಿಮ. ಯಾರೂ ಕೂಡ ಅದರ ತೀರ್ಮಾನವನ್ನು ಧಿಕ್ಕರಿಸಲು ಸಾಧ್ಯವಿಲ್ಲ. ಇದು ಅದರ ಶಕ್ತಿಯನ್ನು ಕೂಡ ಎತ್ತಿ ತೋರಿಸುತ್ತದೆ.

ಈ ಶ್ರೇಣೀಕೃತ ವ್ಯವಸ್ಥೆಯ ಒಂದು ಪ್ರಮುಖ ಅಂಶವೆಂದರೆ ಮಡಿ-ಮೈಲಿಗೆ. ಉತ್ತರ ಪ್ರದೇಶದಲ್ಲಿ ಮಿರಾಸಿಗಳು (ಹಾಡುಗಾರರು) ತಮ್ಮನ್ನು ತಾವು ನಾಯಿಸ್ (ಕ್ಷೌರಿಕ) ಜಾತಿಗಳಿಗಿಂತಲೂ ಮೇಲ್ಜಾತಿಗಳೆಂದು ವಾದಿಸುತ್ತಾರೆ. ಯಾಕೆಂದರೆ ಮಿರಾಸಿ ಮಹಿಳೆಯರು ಅಶ್ರಫ್ ಮಹಿಳೆಯರೊಂದಿಗೆ ಮಡಿ-ಮೈಲಿಗೆಯ ತಕರಾರುಗಳಿಲ್ಲದೆ ಹಾಡುಗಳನ್ನು ಹಾಡಬಹುದು ಎಂಬ ಒಂದೇ ಒಂದು ಕಾರಣ ಇಲ್ಲಿ ಪ್ರಮುಖವಾಗುತ್ತದೆ. ಅದೇ ರೀತಿ ಧೋಬಿ, ಹಲಾಲ್ಖೋರ್, ಕಾಟಿ ಎಂಬುದು ಕೂಡ ಒಂದು ಅಶುದ್ಧ ಕಸುಬು ಎಂಬ ಪರಿಕಲ್ಪನೆ ಇದೆ. ವಿಚಿತ್ರವೆಂದರೆ, ಇವುಗಳು ಕೆಲವೊಮ್ಮೆ ವರ್ಗಗಳ ರೂಪಕಗಳಾಗಿ ಪರಿವರ್ತಿತವಾಗುತ್ತವೆ. ಒಂದಂತೂ ಸ್ಪಷ್ಟ: ದಲಿತ ಮುಸ್ಲಿಮರಲ್ಲಿ ಈಗಲೂ ಕೆಲವು ಜಾತಿಗಳು ಮತಾಂತರ ಪೂರ್ವ ಕಸುಬುಗಳಾದ ಮಲ ಹೊರುವ ಪದ್ಧತಿ, ಸತ್ತ ಜಾನುವಾರುಗಳನ್ನು ಸುಲಿಯುವ ಕಸುಬು, ಸ್ಮಶಾನದಲ್ಲಿ ಹೆಣಗಳನ್ನು ಹೂಳುವ ಕಸುಬುಗಳನ್ನು ಉಳಿಸಿಕೊಂಡಿವೆ. ದಲಿತ ಮುಸ್ಲಿಮರಿಗಾಗಿಯೇ ಸೀಮಿತಗೊಂಡ ಮಸೀದಿಗಳಿವೆ, ಸ್ಮಶಾನಗಳಿವೆ. ಈ ಜಾತಿಗಳು ಅಶ್ರಫರನ್ನು ಮುಟ್ಟಬಾರದೆಂಬ ಸಾಮಾಜಿಕ ನಿರ್ಬಂಧಗಳು ಈಗಲೂ ಚಾಲ್ತಿಯಲ್ಲಿವೆ. ಇಲ್ಲಿರುವ ವಿಶಿಷ್ಟತೆ ಎಂದರೆ ಮೈಲಿಗೆಯಿಂದ ಶುದ್ಧೀಕರಣಗೊಳ್ಳಲು ಸುದೀರ್ಘ ಶಾಸ್ತ್ರೋಕ್ತ ಸಂಪ್ರದಾಯವನ್ನು ಅನುಸರಿಸಬೇಕಾಗಿಲ್ಲ. ಒಂದು ಸ್ನಾನ ಸಾಕು. ಮತ್ತೊಂದು ವಿಷಯವೆಂದರೆ ಈ ಮಡಿ-ಮೈಲಿಗೆಗಳಲ್ಲಿ ವ್ಯಕ್ತಿ ಮಾತ್ರ ಹೊಣೆಗಾರ ನಾಗುತ್ತಾನೆಯೇ ಹೊರತು ಇಡೀ ಸಮುದಾಯವಲ್ಲ, ಆದ ಕಾರಣ ದಲಿತ-ಮುಸ್ಲಿಂ ಹಾಗೂ ಮೇಲ್ಜಾತಿಯ ಮುಸ್ಲಿಮರ ನಡುವೆ ಭೀಕರವಾದ ಘರ್ಷಣೆ ಅಥವಾ ತಿಕ್ಕಾಟಗಳ ನಿದರ್ಶನಗಳು ದೊರೆಯುವುದಿಲ್ಲ, ಚಿಕ್ಕಪುಟ್ಟ ತಿಕ್ಕಾಟಗಳು ಮಾತ್ರ ಕಂಡುಬರುತ್ತವೆ.

ಹಿಂದುಗಳಲ್ಲಿರುವಂತೆ ಮುಸ್ಲಿಂ ಜಾತಿಗಳಲ್ಲಿಯೂ ಜಾತಿಯ ಸ್ಥಾನಮಾನದ ಕುರಿತು ತಾಕಲಾಟಗಳಿವೆ. ಇದು ಸಂಸ್ಕೃತೀಕರಣದ ತಾಕಲಾಟವೂ ಹೌದು. ಕೆಳಜಾತಿಗಳು ಮೇಲ್ಜಾತಿಯ ಸ್ಥಾನಮಾನಕ್ಕಾಗಿ ಮಾಡುವ ಕಸರತ್ತು ಇಲ್ಲಿ ಸ್ಪಷ್ಟ. ಇದಕ್ಕೆ ಉತ್ತರ ಪ್ರದೇಶದ ಕಿದ್ವಾಯಿ, ಹರಿಯಾಣದ ಮೆವಾಟಿ ಅಥವಾ ಮಿಯೋಗಳನ್ನು ಉದಾಹರಣೆಯಾಗಿ ನೀಡಬಹುದು. ಕಿದ್ವಾಯಿಗಳು ತಮ್ಮನ್ನು ತಾವು ಸಯ್ಯದ್ ಜಾತಿಗೆ ಸೇರಿದ ಶ್ರೇಷ್ಠರೆಂದು ವಾದಿಸಿದರೂ, ಬಹಳಷ್ಟು ಸಂದರ್ಭದಲ್ಲಿ ಅವರನ್ನು ಶೇಖ್ ಜಾತಿಯ ಉಪಜಾತಿಯ ರೂಪವಾಗಿ ಚಿತ್ರಿಸಲಾಗುತ್ತದೆ.

ಮತ್ತೊಂದು ಸಮಸ್ಯೆ ಇದೆ : ಅದು ಜಾತಿಯ ಸ್ಥಾನಮಾನದ ಸಮಸ್ಯೆ. ಒಂದು ಪ್ರಾಂತ್ಯದಲ್ಲಿ ಒಂದು ಜಾತಿ ಹಿಂದುಳಿದ ಜಾತಿಯಾಗಿರುತ್ತದೆ, ಮತ್ತೊಂದು ಪ್ರಾಂತ್ಯದಲ್ಲಿ ಅದರ ಸಾಮಾಜಿಕ ಸ್ಥಾನಮಾನ ಬೇರೆಯಾಗಿರುತ್ತದೆ. ಉತ್ತರ ಪ್ರದೇಶ ಹಾಗೂ ಬಿಹಾರಿನ ತೇಲಿಗಳು (ಹಿಂದುಗಳ ಗಾಣಿಗರು) ಬೇರೆ ಪ್ರಾಂತ್ಯದಲ್ಲಿ ಶೇಖ್ ಮನ್ಸೂರಿಗಳಾಗುತ್ತಾರೆ. ವಾಸ್ತವವಾಗಿ ಸಾಮಾಜಿಕವಾಗಿ ತೇಲಿಗಳು ತಮ್ಮನ್ನು ತಾವು ಮೇಲ್ಜಾತಿಯ ಶೇಖ್‌ಗಳೆಂದು ಗುರುತಿಸಿಕೊಳ್ಳುತ್ತಾರೆ. ಇವರಿಗಿರುವ ಇನ್ನೊಂದು ಸಮಸ್ಯೆಯೆಂದರೆ ಉಪಜಾತಿಗಳ ಸಮಸ್ಯೆ. ಉತ್ತರ ಪ್ರದೇಶದಲ್ಲಿ ತೇಲಿಗಳಲ್ಲಿ ನಾಲ್ಕು ಉಪಜಾತಿಗಳಿವೆ: ತುರ್ಕಿಯಾ, ಲಕಸ್ನ, ದೊಅಸ್ನಮ ಹಾಗೂ ದೆಸೆ. ದೆಹಲಿಯಲ್ಲಿ ಎರಡು ಉಪಜಾತಿಗಳಿವೆ : ತೇಲಿ ಹಾಗೂ ತೇಲಿ ದುನಿಯಾ. ಹರಿಯಾಣದಲ್ಲಿ ಅನೆ ಎಂಬ ಉಪಜಾತಿ ಇದೆ.

ಈ ಎಲ್ಲ ಜಾತಿಗಳವರನ್ನು ಬರೇ ಉರ್ದು ಭಾಷಿಕರೆಂದರೆ ಸುಳ್ಳಾಗುತ್ತದೆ. ಬಿಹಾರದ ತೇಲಿಗಳು ಮೂಲತಃ ಟರ್ಕಿಗಳೆಂದು ಹೇಳಿದರೂ ಅವರ ವ್ಯಾವಹಾರಿಕ ಭಾಷೆ ಭೋಜ್‌ಪುರಿ.

ನಾಲ್ಕು ಜಾತಿಗಳನ್ನು ಸೇರಿಸಬಹುದು. ಇವರಲ್ಲಿಯೂ ಶ್ರೇಣೀಕೃತ ವ್ಯವಸ್ಥೆ ಇದೆ. ಇವರಲ್ಲಿ 'ಸೈಯ್ಯದ್' ಜಾತಿಯವರು ತಮ್ಮನ್ನು ತಾವು ಅತಿ ಶ್ರೇಷ್ಠ ಜಾತಿಗೆ ಸೇರಿದವರು ಎಂದು ಕರೆದುಕೊಳ್ಳುತ್ತಾರೆ. ಈ ಶ್ರೇಣೀಕೃತ ವ್ಯವಸ್ಥೆಯಲ್ಲಿ 'ಸೈಯ್ಯದ್' ಜಾತಿ ನಂತರ ಶೇಖ್, ಮೊಘಲ್ ಹಾಗೂ ಪಠಾಣ್‌ಗಳು ಬರುತ್ತಾರೆ, ಸೈಯ್ಯದ್‌ಗಳು ತಮ್ಮ ಮೂಲವನ್ನು ಪ್ರವಾದಿಯ ಕುಟುಂಬದೊಂದಿಗೆ ಗುರುತಿಸಿಕೊಂಡರೆ, ಶೇಖ್‌ಗಳು ತಮ್ಮ ಮೂಲವನ್ನು ಅರಬ್ ಸಂಸ್ಕೃತಿಯಲ್ಲೂ, ಮೊಘಲರು ಮಧ್ಯ ಏಷ್ಯಾದಲ್ಲೂ, ಪಠಾಣರು ಅಫಘಾನಿಸ್ತಾನದಲ್ಲೂ ಹುಡುಕುತ್ತಾರೆ. ಈ ಜಾತಿಗಳು ಅರಸೊತ್ತಿಗೆಯೊಂದಿಗೆ ನಿಕಟ ಸಂಬಂಧ ಹೊಂದಿದ್ದವರು ಹಾಗೂ ಆಳುವ ವರ್ಗದ ಭಾಗವಾಗಿದ್ದವರು. ಭೂ ಸಂಬಂಧಿ ವಿಷಯಗಳ ಸಂದರ್ಭದಲ್ಲಿ ಅಶ್ರಫ್‌ಗಳನ್ನು ಜಾಜ್‌ಮಾನ್‌ಗಳೆಂದು, ಅವರ ಕೆಳಗೆ ಗೇಣಿದಾರರಾಗಿ, ಬಿಟ್ಟಿ ಚಾಕರಿಗಳನ್ನು ಮಾಡುತ್ತಿದ್ದ ವ್ಯಕ್ತಿಗಳನ್ನು ಕಾಮಿನ್‌ಗಳೆಂದು ಕರೆಯುವ ಪರಿಪಾಠ ಇತ್ತು ಎಂದರೂ ತಪ್ಪಾಗಲಾರದು.

ಅಶ್ರಫೇತರರಲ್ಲಿ ಹಿಂದು ಧರ್ಮದಿಂದ ಮತಾಂತರಗೊಂಡ ಹಿಂದುಳಿದ ವರ್ಗಗಳನ್ನು ಹಾಗೂ ದಲಿತರನ್ನು ಗುರುತಿಸಬಹುದು. ಇಲ್ಲಿಯೂ ಶ್ರೇಣೀಕೃತ ವ್ಯವಸ್ಥೆ ಇರುವುದನ್ನು ಬಹಳಷ್ಟು ಸಲ ಗುರುತಿಸಲಾಗುತ್ತದೆ. ವಿಚಿತ್ರವೆಂದರೆ, ಉತ್ತರ ಭಾರತದಲ್ಲಿರುವ ಗೋತ್ರ ಪದ್ಧತಿ ಇಂದಿಗೂ ಅಲ್ಪಸಂಖ್ಯಾತ ಹಿಂದುಳಿದ ವರ್ಗಗಳಲ್ಲಿ ಚಾಲ್ತಿಯಲ್ಲಿದೆ. ಇದು ಜಾಟ್ ಮುಸ್ಲಿಮರಲ್ಲಿ ಪ್ರಮುಖವಾಗಿ ಕಂಡುಬಂದರೂ, ಅದನ್ನು ಉತ್ತರ ಭಾರತ ಹಾಗೂ ಪಶ್ಚಿಮ ಪಾಕಿಸ್ತಾನದಲ್ಲಿ ಈಗಲೂ ನೋಡಬಹುದು. ೧೯೧೧ರ ಜನಗಣತಿ ೧೫೦ಕ್ಕೂ ಹೆಚ್ಚು ಗೋತ್ರಗಳಿರುವುದನ್ನು ದಾಖಲಿಸಿತ್ತು. ಅವುಗಳಲ್ಲಿ ಪ್ರಮುಖವೆಂದರೆ ಔಲಕ್, ಬಜ್ವ, ಬಾಲ್, ಚಾಹಲ್, ಚಾದರ್, ಗಿಲ್, ಧರಿವಾಲ್, ಧಿಲ್ಲಾನ್, ಹಂಜ್ರ. ಹುಂದಾಲ್, ಖಲೋನ್, ಸೋಹಾಲ್, ಬೈನ್ಸ್, ಸಮ್ರ, ವಿರ್ಕ್ ಇತ್ಯಾದಿ. ಇವತ್ತಿಗೂ ಈ ಗೋತ್ರಗಳಲ್ಲಿ ಸ್ವಗೋತ್ರ ಮದುವೆ ನಿಷಿದ್ಧ.

ಗೋತ್ರ ಪದ್ಧತಿಯೊಂದಿಗೆ ಹುಟ್ಟಿಕೊಂಡದ್ದು ಜಾತಿ ಪಂಚಾಯತ್‌ಗಳು. ಸರಕಾರಿ ಪಂಚಾಯತ್‌ಗಳಿಗಿಂತಲೂ ಅತ್ಯಂತ ಶಕ್ತಿಶಾಲಿಯಾಗಿರುವ ಹಾಗೂ ಪರ್ಯಾಯ ಸಂಸ್ಥೆಗಳೆಂದರೆ ಜಾತಿ ಪಂಚಾಯತ್‌ಗಳು. ಪ್ರತಿಯೊಂದು ಜಾತಿಯೂ

## ಯಥಾಸ್ಥಿತಿ

ಅದೇ
ಗೋಡೆ
ಮೊಳೆ
ಸುತ್ತಿಗೆಯ
ಕ್ರಿಯೆ
ತೂಗಾಡುವ
ಬಟ್ಟೆಗಳು
ಮಾತ್ರ
ಬೇರೆ ಬೇರೆ

**ಮ.ಶ್ರೀ ಮುರಳಿ ಕೃಷ್ಣ**
೩೮, ೩ನೇ ಕ್ರಾಸ್, ರಾಜಗಾರ್ಡನಿಯಾ ಲೇಔಟ್, ತುರಹಳ್ಳಿ, ಸುಬ್ರಹ್ಮಣ್ಯಪುರ ಅಂಚೆ, ಬೆಂಗಳೂರು - ೬೧

ಹರಿಯಾಣದಲ್ಲಿ ಅವರ ವ್ಯಾವಹಾರಿಕ ಭಾಷೆ ಹರಿಯಾಣ್ವಿ.

ಜಾತಿ ಸಂಖ್ಯೆಗಳ ರಾಜಕಾರಣ ಇವತ್ತಿಗೂ ಮುಗಿಯದ ಅಧ್ಯಾಯ. ಇದಕ್ಕೆ ಜಾತಿಗಳ ಸಂಖ್ಯೆಯಲ್ಲಿ ನಿರ್ದಿಷ್ಟತೆ ಇಲ್ಲದಿರುವುದು ಒಂದು ಕಾರಣವಾದರೆ, ಜಾತಿಗಳು ಸರಕಾರಿ ಪಟ್ಟಿಯಲ್ಲಿ ಬರಲು ಪ್ರಯತ್ನಿಸುತ್ತಿರುವುದು ಮತ್ತೊಂದು ಕಾರಣ. ವಾಸ್ತವವಾಗಿ ದಲಿತ-ಮುಸ್ಲಿಂ ಹಾಗೂ ಮುಸ್ಲಿಂ ಹಿಂದುಳಿದ ವರ್ಗದ ಸಂಖ್ಯೆಯಲ್ಲಿ ಒಂದು ನಿರ್ದಿಷ್ಟತೆ ಇಲ್ಲ, ಅದು ರಾಜ್ಯದಿಂದ ರಾಜ್ಯಕ್ಕೆ ಬದಲಾಗುತ್ತಾ ಹೋಗುತ್ತದೆ. ಪಂಜಾಬ್‌ನಲ್ಲಿ ೯ ಜಾತಿಗಳನ್ನು ಹಿಂದುಳಿದ ವರ್ಗಗಳೆಂದು ಗುರುತಿಸಿದರೆ, ಮಹಾರಾಷ್ಟ್ರದಲ್ಲಿ ೨೦, ಮಧ್ಯಪ್ರದೇಶದಲ್ಲಿ ೩೭, ಹರಿಯಾಣದಲ್ಲಿ ೭, ಗುಜರಾತ್‌ನಲ್ಲಿ ೩೪, ದೆಹಲಿಯಲ್ಲಿ ೨೦, ಬಿಹಾರದಲ್ಲಿ ೩೧, ಉತ್ತರ ಪ್ರದೇಶದಲ್ಲಿ ೪೦, ಪಶ್ಚಿಮ ಬಂಗಾಲದಲ್ಲಿ ೫೪... ಹೀಗೆ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ಸಾಚಾರ್ ವರದಿ ಪ್ರಕಾರ ಶೇ. ೩೧.೭ರಷ್ಟು ಜನ ಹಿಂದುಳಿದ ವರ್ಗಗಳಿಗೆ ಸೇರಿದ್ದರು. ವಾಸ್ತವವಾಗಿ ಹಿಂದುಳಿದ ವರ್ಗಗಳ ಪಟ್ಟಿ ಕೇಂದ್ರ ಸರಕಾರದ ಪಟ್ಟಿಯೂ ಹೌದು. ಇದರರ್ಥ ಹಿಂದುಳಿದ ವರ್ಗಗಳ ಪಟ್ಟೀಕರಣದ ರಾಜಕಾರಣ ಮುಗಿದಿದೆ ಎಂದಲ್ಲ, ಬಹಳಷ್ಟು ಹಿಂದುಳಿದ ವರ್ಗಗಳು ರಾಜ್ಯದ ಪಟ್ಟಿಯಲ್ಲಿದ್ದರೂ, ಕೇಂದ್ರದ ಪಟ್ಟಿಯೊಳಗೆ ಸೇರಿಲ್ಲ. ವಾಸ್ತವವಾಗಿ ಇಲ್ಲೊಂದು ಸಮಸ್ಯೆ ಇದೆ. ಆ ಸಮಸ್ಯೆ ಮಂಡಲ್ ಆಯೋಗದ ಕಾಲದಿಂದಲೆ ಆರಂಭಗೊಂಡಿತ್ತು. ಆಯೋಗ ಹಿಂದುಳಿದ ವರ್ಗ ಹಾಗೂ ದಲಿತ-ಮುಸ್ಲಿಮರನ್ನು ಬೇರ್ಪಡಿಸದೆ ಎಲ್ಲರನ್ನೂ ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಸೇರಿಸಿದ್ದು ಸಮಸ್ಯೆಗೆ ಕಾರಣವಾಯಿತು, ಆದಕಾರಣ ದಲಿತ- ಮುಸ್ಲಿಮರ ನಿಖರವಾದ ಪಟ್ಟಿ ದೊರೆಯುವುದೇ ಇಲ್ಲ, ಇದರ ಫಲಶ್ರುತಿ ಎಂದರೆ ದಲಿತ ಮುಸ್ಲಿಂ ಪಟ್ಟಿಯಲ್ಲಿ ಜಾತಿಗಳನ್ನು ಸೇರಿಸಲು ಜಾತಿಗಳ ಕಸರತ್ತು, ಇದು ಐಡೆಂಟಿಟಿ ರಾಜಕಾರಣದ ಒಂದು ಭಾಗ. ಹರಿಯಾಣದ ಮಿಯೋಗಳು ತಮ್ಮನ್ನು ಪರಿಶಿಷ್ಟ ಪಂಗಡದೊಳಗೆ ಸೇರಿಸಲು ಯತ್ನಿಸುತ್ತಿರುವುದನ್ನು ಇಲ್ಲಿ ದಾಖಲಿಸಬೇಕು. ವಿಚಿತ್ರವೆಂದರೆ ಲಕ್ಷದ್ವೀಪದಲ್ಲಿರುವ ಎಲ್ಲಾ ಮುಸ್ಲಿಮರು ಪರಿಶಿಷ್ಟ ಪಂಗಡ ಪಟ್ಟಿಯೊಳಗೆ ಬರುತ್ತಾರೆ. ಇದು ಗುರುತಿಸುವಿಕೆ ರಾಜಕಾರಣದ ಹೊಸ ಮುಖವನ್ನು ಎತ್ತಿ ತೋರಿಸುತ್ತದೆ.

ಇದೇ ಸಂದರ್ಭದಲ್ಲಿ ಮತ್ತೊಂದು ಚರ್ಚೆ ಇದೆ: ದಕ್ಷಿಣ ಭಾರತದಲ್ಲಿ ಈ ರೀತಿಯ ಜಾತಿಯ ಚೌಕಟ್ಟುಗಳು ನಿರ್ಮಾಣಗೊಂಡಿವೆಯೇ? ಜಾತಿಗಳ ನೆನಪುಗಳು ಕರ್ನಾಟಕದಲ್ಲಿ , ಕೇರಳದಲ್ಲಿ ಎಷ್ಟು ಗಟ್ಟಿಯಾಗಿವೆ? ವಾಸ್ತವವಾಗಿ, ಜಾತಿಯ ವಿಸ್ಮೃತಿ ಕರ್ನಾಟಕ ಅಥವಾ ದಕ್ಷಿಣ ಭಾರತದಲ್ಲಿ ದಟ್ಟವಾಗಿದೆಯೇ ಹೊರತು ಉತ್ತರ ಭಾರತದಲ್ಲಿ ಅಲ್ಲ. ಕರ್ನಾಟಕದಲ್ಲಿ ಜಾತಿಯ ಗುರುತಿಸುವಿಕೆ ಬಹಳ ಹಿಂದೆಯೇ ಆಗಿತ್ತು. ಮುಸ್ಲಿಮರನ್ನು ಒಂದೆಡೆ ಸಮಷ್ಟಿ ಸಮುದಾಯವಾಗಿ ಹಾಗೂ ಇನ್ನೊಂದೆಡೆ ಹಿಂದುಳಿದ ವರ್ಗವಾಗಿ ಗುರುತಿಸುವ ಪ್ರಕ್ರಿಯೆ ಆರಂಭಗೊಂಡದ್ದು ೧೯೧೦ರ ದಶಕದ ಮಿಲ್ಲರ್ ಆಯೋಗದಿಂದಲೇ ಎಂದು ಹೇಳಬಹುದು. ತದನಂತರ ಹಾವನೂರ್ ಆಯೋಗ ಜಾತಿಗಳನ್ನು ಹಿಂದುಳಿದ ವರ್ಗದಲ್ಲಿ ಗುರುತಿಸಿದ್ದನ್ನು ಮರೆಯಬಾರದು. ಆದರೆ ಅದು 'ದಲಿತ ಮುಸ್ಲಿಂ' ಎಂಬ ಅಸ್ಮಿತೆಗಳನ್ನು ಗುರುತಿಸಲೇ ಇಲ್ಲ. ಇವತ್ತು ಕೇಂದ್ರ ಸರಕಾರದ ಪಟ್ಟಿಯಲ್ಲಿ ಕರ್ನಾಟಕದ ಹತ್ತು ಹಲವು ಮುಸ್ಲಿಂ ಜಾತಿಗಳಿವೆ: ಬಾಗ್ಬಾನ್, ಬ್ಯಾರಿ, ಚೌಶ್, ಕೊಂಕಣಿ ಮುಸ್ಲಿಂ, ಮಾಪಿಳ್ಳ, ನವಾಯತ್, ಹಾಗೂ ಸಿದ್ದಿ. ವಾಸ್ತವದಲ್ಲಿ ಮುಸ್ಲಿಂ ಸಿದ್ದಿಗಳು ಪರಿಶಿಷ್ಟ ಪಂಗಡದ ಭಾಗವಾಗಿದ್ದಾರೆ.

ಜಾತಿಯ ವಿಷಯ ಈಗ ಸಂಘಟಿತವಾದ ಹೋರಾಟದ ರೂಪವನ್ನು ಪಡೆಯುತ್ತಿದೆ. ಬಿಹಾರ್‌ನಲ್ಲಿ ಈಗಾಗಲೆ ಎರಡು ಸಂಘಟನೆಗಳು ದಲಿತ-ಮುಸ್ಲಿಮರಿಗಾಗಿ ಕೆಲಸ ಮಾಡುತ್ತಿವೆ: ಅದರಲ್ಲಿ ಆಲ್ ಇಂಡಿಯಾ ಯುನೈಟೆಡ್ ಮುಸ್ಲಿಂ ಮೋರ್ಚ ಹಾಗೂ ಆಲ್ ಇಂಡಿಯಾ ಪಾಸ್ಮಂಡ ಮುಸ್ಲಿಂ ಮಹಜ್, ಮಹಾರಾಷ್ಟ್ರದಲ್ಲೂ ಅಖಿಲ ಮಹಾರಾಷ್ಟ್ರ ಖಾಟಿಕ್ ಸಮಾಜ್ ಈ ನಿಟ್ಟಿನಲ್ಲಿ ಹೋರಾಟ ನಡೆಸುತ್ತಿವೆ. ಮೊದಲಿನ ಎರಡು ಸಂಘಟನೆಗಳು ಮೀಸಲಾತಿಯ ಅವಶ್ಯಕತೆಯನ್ನು ಎತ್ತಿ ಹಿಡಿದರೆ, ಕಾಟಿಕ್ ಸಮಾಜವು ದಲಿತ-ಮುಸ್ಲಿಮರನ್ನು ಪರಿಶಿಷ್ಟ ಜಾತಿ ಪಟ್ಟಿಯಲ್ಲಿ ಸೇರಿಸಲು ಯತ್ನಿಸುತ್ತಿದೆ. ವಾಸ್ತವವಾಗಿ, ೧೯೫೦ರ ರಾಷ್ಟ್ರಪತಿಯ ಆಜ್ಞೆ ಈ ಜಾತಿಗಳನ್ನು ಪರಿಶಿಷ್ಟ ಜಾತಿಯ ಪಟ್ಟಿಯಿಂದ ಧರ್ಮದ ಕಾರಣಕ್ಕಾಗಿ ಹೊರಗಿಟ್ಟಿತ್ತು. ಈ ವರ್ಗಗಳು ೧೯೩೫ರ ಸುಮಾರಿಗೆ ಸರಕಾರದ ಅತ್ಯಂತ ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಸೇರಿದ್ದವು. ೧೯೫೦ರ ಆರ್ಡರ್ ಅವರನ್ನು ಈ ರೀತಿಯ ಪಟ್ಟಿಯಿಂದ ಹೊರಗಿಟ್ಟಿತ್ತು. ಇವತ್ತು ಮುಸ್ಲಿಮರಲ್ಲಿ ಕಡಿಮೆಯೆಂದರೆ ೩೫ ದಲಿತ ಜಾತಿಗಳಿರುವುದನ್ನು ಕುಮಾರ್ ಸುರೇಶ್ ಸಿಂಘ್ ಸಮಿತಿ ಈಗಾಗಲೆ ಉಲ್ಲೇಖಿಸಿದೆ. ಅಲ್ಲದೆ, ಅವರು ಮತಾಂತರ ಪೂರ್ವದ ಕಸುಬುಗಳನ್ನು ಮಾಡುತ್ತಿರುವುದನ್ನು ಅದು ಸ್ಪಷ್ಟವಾಗಿ ಉಲ್ಲೇಖಿಸಿದೆ. ಸಾಚಾರ್ ವರದಿಯಲ್ಲಿ ದಲಿತ ಜಾತಿಗಳ ಪಟ್ಟಿಯಿಲ್ಲ, ಮುಸ್ಲಿಂ-ಹಿಂದುಳಿದ ವರ್ಗಗಳ ಆರ್ಥಿಕ ಸ್ಥಾನಮಾನದ ಉಲ್ಲೇಖವಿದೆ.




ಈಗ ಬರುವ ಪ್ರಶ್ನೆ, ಮುಸ್ಲಿಮರಿಗೆ ಧಾರ್ಮಿಕವಾಗಿ ಹಾಗೂ ಪ್ರತ್ಯೇಕವಾಗಿ ಮೀಸಲಾತಿಯನ್ನು ನೀಡಬೇಕೆ? ಅಥವಾ ಸಾಮಾಜಿಕ-ಆರ್ಥಿಕ ವರ್ಗವಾಗಿ ಗುರುತಿಸಿ ಮೀಸಲಾತಿಯನ್ನು ನೀಡಬೇಕೆ? ಅಥವಾ ಸಮುದಾಯ ವನ್ನು ಎರಡು ಪ್ರವರ್ಗಗಳಾಗಿ ವಿಭಜಿಸಿ ಕರ್ನಾಟಕ ಮಾದರಿಯಂತೆ ವಿವಿಧ ರಾಜ್ಯಗಳಲ್ಲಿ ಹಾಗೂ ಕೇಂದ್ರದಲ್ಲಿ ಗುರುತಿಸಬೇಕೆ? ಭಾರತದಲ್ಲಿ ಧರ್ಮಾಧಾರಿತವಾದ ಮೀಸಲಾತಿ ಇಲ್ಲ, ಆದರೂ ೧೯೫೬ರಲ್ಲಿ ಸಿಖ್ ದಲಿತರಿಗೆ ಮೀಸಲಾತಿ ನೀಡಲಾಯಿತು, ಅದೇ ರೀತಿ ನವ-ಬೌದ್ಧರಿಗೆ ೧೯೯೦ರಲ್ಲಿ ಮೀಸಲಾತಿ ನೀಡಲಾಯಿತು. ಇವೆರಡೂ ಸಂದರ್ಭಗಳಲ್ಲಿ ನವ-ಬೌದ್ಧರನ್ನು ಹಾಗೂ ಸಿಖ್ ಧರ್ಮದವರನ್ನು ಹಿಂದು ಧರ್ಮದ ಭಾಗದವರನ್ನಾಗಿ ನೋಡಲಾಯಿತು. ಇವತ್ತು ಈ ರಾಜಕಾರಣವನ್ನು ದಲಿತ-ಮುಸ್ಲಿಮರು ಪ್ರಶ್ನಿಸುತ್ತಿದ್ದಾರೆ. ಅದೇ ಸಂದರ್ಭದಲ್ಲಿ ಮೀಸಲಾತಿಗೆ ಕರ್ನಾಟಕ ಯಾಕೆ ಮಾದರಿ ಆಗಬಾರದೆಂಬ ವಾದವೂ ಬೆಳೆಯುತ್ತಿದೆ. ಅಂತೆಯೇ ಶೇಕಡಾವಾರು ಮೀಸಲಾತಿ ಕುರಿತು ಜಿಜ್ಞಾಸೆ ಇದೆ. ಒಂದೆಡೆ ಮುಸ್ಲಿಮರ ಮೀಸಲಾತಿ ಶೇಕಡ ೪.೫ರಿಂದ ಶೇಕಡ ೧೦ಕ್ಕೆ ಹೆಚ್ಚಿಸಬೇಕೆಂಬ ಬೇಡಿಕೆ ಇದೆ. ಇನ್ನು ಕೆಲವೆಡೆ ಮೀಸಲಾತಿಯ ಬೇಡಿಕೆ ಪ್ರಮಾಣ ಜನಸಂಖ್ಯಾಧಾರಿತವಾಗಿರ ಬೇಕೆಂಬ ಬೇಡಿಕೆಗಳೂ ಇವೆ. ಅಲ್ಲದೆ, ಕೇಂದ್ರ ಹಾಗೂ ರಾಜ್ಯಗಳಲ್ಲಿ ಬೇರೆ ಬೇರೆ ಪ್ರಮಾಣದ ಮೀಸಲಾತಿ ಇರಬೇಕೆಂಬ ವಾದವೂ ಬೆಳೆಯುತ್ತಿದೆ.

ಇವೆಲ್ಲಕ್ಕಿಂತಲೂ ಮುಖ್ಯವಾಗಿರುವುದು ಜಾತಿಗಳ ನೆನಪುಗಳಿಲ್ಲದವರಲ್ಲಿ ಜಾತಿಗಳ ನೆನಪುಗಳನ್ನು ಹೇಗೆ ಪುನಶ್ಚೇತನ ಗೊಳಿಸುವುದು? ಜಾತಿಗಳ ನೆನಪುಗಳನ್ನು ಯಾವ ತಲೆಮಾರಿನಿಂದ ಹಾಗೂ ಯಾವ ಆಧಾರದ ಮೇಲೆ ಆರಂಭಿಸಬೇಕು? ಜಾತಿಗಳನ್ನು ತತ್‌ಕ್ಷಣದ ತಲೆಮಾರಿನ ಕಸುಬುಗಳಿಂದ ಸೃಷ್ಟಿಸಬೇಕೆ? ಅಥವಾ ಇತಿಹಾಸವನ್ನು ಕೆದಕಿ ಸೃಷ್ಟಿಸಬೇಕೇ? ಆದರೆ ಜಾತಿಗಳನ್ನು ಸಾಮಾಜಿಕ ಕಾರಣಗಳಿಗಿಂತಲೂ ಹೆಚ್ಚಾಗಿ ರಾಜಕೀಯ ಕಾರಣಗಳಿಗಾಗಿ ನಿರ್ಮಿಸಬೇಕೆಂಬ ವಾದ ಬಹಳ ಗಟ್ಟಿಯಾಗುತ್ತಿದೆ. ಸಮುದಾಯಗಳು ಮತ್ತೆ ಮತ್ತೆ ಅಂಚಿಗೆ ತಳ್ಳಲ್ಪಡುವ ಸಾಧ್ಯತೆಗಳು ತೀರಾ ಹೆಚ್ಚು. ಆದ ಕಾರಣ ಜಾತಿಗಳ ವಿಸ್ಮೃತಿಗಳ ನಡುವೆ ಜಾತಿಗಳ ಹುಡುಕಾಟ ಹಾಗೂ ನಿರ್ಮಿತಿ ಅನಿವಾರ್ಯವಾಗುತ್ತಿದೆ.

**ಮೊಹಮದ್ ರಫೀ ಪಾಷ**

ನಂ. ೩, ೬೧/೧, ಅಕ್ಷಯ ಅಪಾರ್ಟ್‌ಮೆಂಟ್ಸ್
೧೩ನೇ ಅಡ್ಡರಸ್ತೆ, ೧೧ನೇ ಮುಖ್ಯರಸ್ತೆ, ಮಲ್ಲೇಶ್ವರಂ
ಬೆಂಗಳೂರು - ೫೬೦ ೦೦೩.

# ತುಳುನಾಡಿನಲ್ಲಿ ಮಾಸ್ತಿಕಲ್ಲುಗಳು- ಸ್ಥಾಪನೆ ಮತ್ತು ರೂಪಾಂತರ

**ಉತ್ತರ ಕರ್ನಾಟಕದಲ್ಲಿ ದೊರೆತ ಕೆಲವು ಸತಿಕಲ್ಲುಗಳಲ್ಲಿ 'ಇಂತಹವನ ಪತ್ನಿ ಇಲ್ಲಿ ಸತಿ ಹೋದಳು' ಎಂಬ ಬರೆಹಗಳಿವೆ. ಸಹಗಮನವಲ್ಲದೆ ಬೇರೆ ಕಾರಣಗಳಿಗಾಗಿ ಅಂದರೆ ಕುಟುಂಬಕ್ಕಾಗಿ, ದೇಶಕ್ಕಾಗಿ ಪ್ರಾಣತ್ಯಾಗ ಮಾಡಿದ ಸ್ತ್ರೀಯರ ನೆನಪಿಗಾಗಿಯೂ ಸತಿಕಲ್ಲುಗಳನ್ನು ಸ್ಥಾಪಿಸಿದ ನಿದರ್ಶನಗಳಿವೆ. ವೈದಿಕ ಧರ್ಮದ ಪುನರುತ್ಥಾನದ ಕಾಲದಲ್ಲಿ ಈ ಸತಿ ಮರಣಗಳು ಹೆಚ್ಚಾಗಿರುವುದು ವಿಶೇಷ. ಅದರಲ್ಲೂ ೧೩ನೆಯ ಶತಮಾನದಿಂದ ೧೭ನೆಯ ಶತಮಾನದವರೆಗೆ ಸತಿ ಹೋದವರ ಸಂಖ್ಯೆಯು ಅತಿ ಹೆಚ್ಚು.**

**ಬಿ. ಎಂ. ರೋಹಿಣಿ**

ಮಹಾಸತಿಯ ಸಂಕ್ಷಿಪ್ತರೂಪವೇ ಮಾಸ್ತಿ. ಅದು ಗಂಡನ ಜೊತೆ ಸಹಗಮನ ಮಾಡಿದವಳಿಗೆ ನೀಡಿದ ಗೌರವದ ಬಿರುದು. ಆಕೆ ಎಂತಹ ದುಷ್ಟ ಗಂಡನಿಗೂ ಸ್ವರ್ಗದಲ್ಲಿ ಉತ್ತಮ ಪದವಿಯನ್ನು ನೀಡಬಲ್ಲಳು ಎಂಬ ನಂಬಿಕೆ ಇತ್ತು. ಈ ಸಂಪ್ರದಾಯ ವೈದಿಕ ಯುಗದಲ್ಲಿರಲಿಲ್ಲವೆಂದು ಇತಿಹಾಸಕಾರರು ಸಮರ್ಥಿಸುತ್ತಾರೆ. ಕ್ರಿ.ಪೂ. ೩೨೦ರವರೆಗೆ ರಚಿತವಾದ ಧರ್ಮಗ್ರಂಥಗಳು ಸತಿ ಸಹಗಮನಕ್ಕೆ ಸಮ್ಮತಿಯನ್ನು ನೀಡಿಲ್ಲ ಎಂದು ತಿಳಿಯಲಾಗಿದೆ. ಕ್ರಿ.ಶ. ೭೦೦ರ ನಂತರ ರಚಿಸಲ್ಪಟ್ಟ ಧರ್ಮಶಾಸ್ತ್ರ ಮತ್ತು ಸ್ಮೃತಿಗಳು ಸತಿಯನ್ನು ಕಟ್ಟುನಿಟ್ಟಾಗಿ ಆಚರಿಸಬೇಕೆಂದು ವಿಧಿಸುತ್ತವೆ. ಆದುದರಿಂದ ಮಧ್ಯಯುಗದಲ್ಲಿ ಸತಿ ಪದ್ಧತಿಯು ಸ್ತ್ರೀ ಧರ್ಮವಾಗಿ ವ್ಯಾಪಿಸಿತು. ಮೂಲತಃ ಯೋಧ ಜನಾಂಗದ ಸ್ತ್ರೀಯರು ಮಾತ್ರ ಆಚರಿಸುತ್ತಿದ್ದ ಈ ಸಂಪ್ರದಾಯ ಮುಂದೆ ಎಲ್ಲಾ ವರ್ಣ, ವರ್ಗದವರಲ್ಲೂ ಹಬ್ಬಿತು. ಉತ್ತರ ಭಾರತವು ವಿದೇಶೀಯರ ದಾಳಿಗೆ ಆಗಾಗ ತುತ್ತಾಗುತ್ತಿದ್ದುದರಿಂದ ಯುದ್ಧಾವೇಶವೂ ಇಲ್ಲಿ ಸದಾ ಅನಿವಾರ್ಯವೆಂಬಂತಹ ವಾತಾವರಣವಿತ್ತು. ಗೆದ್ದ ಸೈನಿಕರು ತಮ್ಮ ಪೌರುಷವನ್ನು ಸಾಬೀತು ಪಡಿಸುವುದೇ ಸೋತ ಸೈನಿಕರ ಪತ್ನಿಯರನ್ನು ಬಲಾತ್ಕಾರ ಮಾಡುವುದರ ಮೂಲಕ. ಈ ಹಿಂಸೆಯಿಂದ ಸ್ತ್ರೀಯರನ್ನು ರಕ್ಷಿಸಲು ಪುರುಷ ಪ್ರಧಾನ ಸಮಾಜ ಕಂಡುಕೊಂಡ ಸುಲಭವಾದ ಮಾರ್ಗವೇ ಸಹಗಮನ ಮತ್ತು ಜೋಹಾರ ಪದ್ಧತಿ. ವರ್ಣಸಂಕರವನ್ನು ತಪ್ಪಿಸಲು, ಕುಲ ಪಾವಿತ್ರ್ಯವನ್ನು ಕಾಪಾಡಲು ಸ್ತ್ರೀಯರು ಗಂಡನ ಚಿತೆಯಲ್ಲಿ ಭಸ್ಮವಾಗುವುದೇ ಪತಿವ್ರತಾ ಧರ್ಮವೆಂದು ಧರ್ಮಶಾಸ್ತ್ರ ಮತ್ತು ಪುರಾಣಗಳು ಸಾರಿದುವು. ಬಾಲ್ಯ ವಿವಾಹವು ಜಾರಿಯಲ್ಲಿದ್ದ ಆ ಕಾಲದಲ್ಲಿ ಚಿಕ್ಕ ಬಾಲಕಿಯರನ್ನು ಕೂಡ ಬಲಾತ್ಕಾರವಾಗಿ ಬೆಂಕಿಗೆ ತಳ್ಳುವಷ್ಟು ಕ್ರೂರವಾಗಿತ್ತು ಸಮಾಜ. ವಿಧವಾ ವಿವಾಹವೂ ಸಹ ಪಾಪಕಾರ್ಯವೆಂಬ ನಂಬಿಕೆಯಿತ್ತು. ವಿಧವೆಯು ಸಹಗಮನ ಮಾಡದಿದ್ದರೆ ಅವಳು ಜೀವನಪರ್ಯಂತ ಹೀನಾಯವಾದ ಬಾಳ್ವೆ ಮಾಡಬೇಕಿತ್ತು. ವಿಧವೆಯಾಗಿ ನಿತ್ಯವೂ ಸಾಯುವುದಕ್ಕಿಂತ ಒಮ್ಮೆಲೇ ಚಿತೆಯಲ್ಲಿ



ಕೊಲ್ಲೂರು ಸಮೀಪದ ಮಾಸ್ತಿಕಟ್ಟೆಯ ಮಾಸ್ತಿಕಲ್ಲು

ಭಸ್ಮವಾಗುವುದೇ ಶ್ರೇಯಸ್ಕರವೆಂದು ನಂಬಿ ಸತಿ ಹೋಗುವವರ ಸಂಖ್ಯೆಯೂ ಹೆಚ್ಚುತ್ತಾ ಹೋಯಿತು. ಹಾಗೆ ಸತಿ ಹೋದ ಸ್ತ್ರೀಯರ ನೆನಪಿನಲ್ಲಿ ಆಯಾ ಮನೆತನದವರು ಗುಡಿ ಕಟ್ಟಿ, ಕಲ್ಲು ನೆಟ್ಟು ಆರಾಧಿಸುವ ಸಂಪ್ರದಾಯವೂ ಪ್ರಾರಂಭವಾಯಿತು. ಪತಿವ್ರತಾ ಧರ್ಮವನ್ನು ಸಾರುವ ಪುರಾಣ ಕತೆಗಳು ಸೃಷ್ಟಿಯಾಗಿ ಬಾಲ್ಯದಿಂದಲೇ ಸ್ತ್ರೀಯರ ಚಿಂತನೆಗಳು ಪುರುಷ ಚಿಂತನೆಗಳಾಗಿ ಪರಿವರ್ತನೆಗೊಂಡವು. ಹೀಗೆ ಕ್ಷತ್ರಿಯ ರಾಜರು ಪ್ರಾರಂಭಿಸಿದ ಈ ಕ್ರೂರ ಪದ್ಧತಿ ಶತಮಾನಗಳ ಕಾಲ ಭಾರತೀಯ ನಾರಿಯರನ್ನು ಅಗ್ನಿಕುಂಡಕ್ಕೆ ತಳ್ಳಿತು.

ಡಿಯೊಡೊರಸ್ ಎಂಬ ಚರಿತ್ರಕಾರನು ಸಹಗಮನ ಪದ್ಧತಿ ಪ್ರಾರಂಭವಾದುದಕ್ಕೆ ಬೇರೆಯೇ ಕಾರಣಗಳನ್ನು ಹೇಳುತ್ತಾನೆ. ''ರಾಜನ ಅಂತಃಪುರದಲ್ಲಿದ್ದ ಎಳೆಯ ರಾಣಿಯರು ತಮ್ಮ ಪ್ರಿಯತಮನೊಂದಿಗೆ ಬೆರೆಯಲು ರಾಜನು ಸಾಯುವುದನ್ನೇ ಆಶಿಸುತ್ತಿದ್ದರು. ಇದನ್ನು ತಿಳಿದು ಮತ್ಸರಗೊಂಡ ರಾಜನು ತಾನು ಸತ್ತ ಮೇಲೆ ರಾಣಿಯರೆಲ್ಲಾ ಸಹಗಮನ ಮಾಡಬೇಕೆಂದು ಶಾಸನ ಮಾಡಿದನು, ಎನ್ನುತ್ತಾನೆ ಡಿಯೋಡೋರಸ್. ತನಗೆ ಸೇರಿದ ವಸ್ತುವಾದ ಪತ್ನಿಯು ಪರರ ವಶವಾಗುವುದನ್ನು ತಡೆಯುವ ಪ್ರಯತ್ನವಾಗಿ ಸಹಗಮನ ಪದ್ಧತಿ ಜಾರಿಯಾಯಿತು ಎಂಬುದು ಅವನ ವಾದ. ಇಂತಹ ಘಟನೆಗಳು ಸಂಭವನೀಯವೆಂದು ಊಹಿಸ ಬಹುದಾದರೂ ಸಹಗಮನ ಪದ್ಧತಿ ಅದರಿಂದಲೇ ಪ್ರಾರಂಭವಾಯಿತೆಂದು ಖಚಿತವಾಗಿ ತಿಳಿಯಲು ಸಾಧ್ಯವಿಲ್ಲ. ರಾಣೀವಾಸದವರಲ್ಲದೆ ಸಾಮಾನ್ಯ ಕುಟುಂಬಗಳ ಸ್ತ್ರೀಯರೂ ಸಹಗಮನಕ್ಕೆ ಸಾವಿರಾರು ಸಂಖ್ಯೆಯಲ್ಲಿ ಸಿದ್ಧರಾಗಿ ಭಸ್ಮಗೊಂಡದ್ದಕ್ಕೆ ಬೇರೆಯೇ ಕಾರಣಗಳಿವೆ. ಧರ್ಮ, ಸಂಸ್ಕೃತಿಯ ರಕ್ಷಣೆಯ ಹೊಣೆ, ಕುಲ ಪಾವಿತ್ರ್ಯದ ಹೊಣೆ, ಮನೆತನದ ಗೌರವದ ಹೊಣೆ ಇವೆಲ್ಲವನ್ನು ಸ್ತ್ರೀಯರೇ ನಿಭಾಯಿಸಬೇಕೆಂದು ವಿಧಿಸಲಾಗಿತ್ತು. ಈ ಭೂಮಿಯ ಮೇಲೆ ಅನುಭವಿಸುವ ಸುಖಕ್ಕಿಂತ ಸತ್ತ ಮೇಲಿನ ಸುಖಗಳನ್ನು ವೈಭವೀಕರಿಸಿ ಪುರಾಣ ಕತೆಗಳ ಮೂಲಕ ಪ್ರಚಾರ ಮಾಡಲಾಯಿತು. ಪತಿಯ ಮೇಲಿನ

# ಒಂದು ಕವಿತೆಯ ಹಾಡು



ದೇಹದ ದಣಿವು ಆರಿಲ್ಲ ನಿದ್ದೆ ಇನ್ನೂ ಸಾಕಾಗಿಲ್ಲ
ಆದರೂ ಸೂರ್ಯ ಮೇಲೇರಿದ್ದಾನೆ ಏನೂ
ತಿಳಿಯದವನಂತೆ
ತೆರೆಯದ ಕಣ್ಣು ತೆರೆಯುತ್ತ ನಿಧಾನವಾಗಿ ಜೀವಂತವಾಗುತ್ತ
ಅಂಗಳಕ್ಕೆ ಬಂದರೆ
ಅಲ್ಲಿ ಮಾವಿನಮರಕ್ಕೆ ಮೈಯೆಲ್ಲಾ ಚೈತ್ರದ ಚಿಗುರು
ಆ ಚಿಗುರಿನ ಒಳಗಿನಿಂದಲೇ ನಸುನಗುತ್ತ ಕೇಳಿತೊಂದು
ಪುಟ್ಟ ಕವಿತೆ
ಬರಲೇ ಈಗ ಬಳಿಗೆ ನಿನ್ನ ಒಳಗೆ ಎಂದು.
ಬೇಡ ಈಗ ಬೇಡ
ಮುಂಜಾನೆಯ ಗಡಿಬಿಡಿ ಹತ್ತಾರು ಯೋಚನೆಗಳು
ತಲೆ ತುಂಬ ನಿನ್ನೆಯ ಅರ್ಧ ಮುಗಿದ ಕೆಲಸದ ತಂಗಳು

ಮಧ್ಯಾಹ್ನ ಆಸ್ಪತ್ರೆಯಲ್ಲಿ ಕಾಯುತ್ತಿದ್ದಾನೆ
ಮಗಳನ್ನು ಹೆರಿಗೆಗೆ ಸೇರಿಸಿದ ಅಪ್ಪ
ಅಸಹಾಯಕತೆಯ ಮುದ್ದೆಯಾಗಿ
ಕಣ್ಣೆರಡು ಭಯ ಆತಂಕದ ಆಳ ಬಾವಿಗಳು
ಮುಖದ ತುಂಬ ಬಡತನದ ಕಾರ್ಮೋಡ
ನಡುವೆಯೇ ಮಿಂಚಿ ಕೇಳಿತು
ಆ ಪುಟ್ಟ ಕವಿತೆ
ನಾ ಬರಲೆ ಸನಿಹ ಎಂದು.
ಬೇಡ ಈಗ ಬೇಡ
ನೋಡಲ್ಲಿ ಹೊರಗೆ ಇನ್ನೂ ಇಪ್ಪತ್ತು ಗರ್ಭಿಣಿಯರು
ಕಾಯುತ್ತಿದ್ದಾರೆ ಗೊಣಗುತ್ತ ತಮ್ಮ ತಪಾಸಣೆಗಾಗಿ

ಸಂಜೆ ಆರಕ್ಕೆ ಹದಿನಾರು ತಾಸು
ಬೇನೆ ತಿಂದು
ಎಲ್ಲ ದೇವರನ್ನು ಬೈದು ಚೀರಾಡಿ
ಕೊನೆಗೂ ಹಡೆದು ಪಾರಾದಳು ಸಂಗವ್ವ
ಮಗುವನ್ನು ಹುರಿ ಕತ್ತರಿಸುವ ಮೊದಲೇ
ಅವಳೆದೆಯ ಮೇಲೆ ಹಾಕಿದಾಗ
ದಣಿದಣಿದು ಸೋತು ಬತ್ತಿದ ಕೆರೆಯಾಗಿದ್ದ
ಅವಳ ಮುಖದಲ್ಲೂ ಕ್ಷಣದಲ್ಲೇ ಅರಳಿತು
ಸ್ವರ್ಗದ ನಗು
ಕೂಡಲೆ ಆ ನಗುವಿನ ಹಿಂದಿನಿಂದ ಇಣುಕಿ
ಕೇಳಿತು ಆ ಪುಟ್ಟ ಕವಿತೆ
ಬರಲೆ ನಾ ಈಗ ಸ್ವಲ್ಪ ಒಳಗೆ ಎಂದು.
ಬೇಡ ಈಗ ಬೇಡ
ಊಟ ಆಗಿಲ್ಲ ಇನ್ನೂ ಕೆಲಸ ಮುಗಿದಿಲ್ಲ

ರಾತ್ರಿ ಎಲ್ಲ ಸಾಕು ಇನ್ನೇನೂ ಬೇಡ ಅನಿಸಿ
ದಣಿದ ಮೈ ದಣಿದ ಮನಸ್ಸು
ಹಾಸಿಗೆಯ ಮೇಲೆ ಚೆಲ್ಲಿ ಸುಮ್ಮನೆ ಬಿದ್ದುಕೊಂಡಾಗ
ಮೌನದಲ್ಲೇ ಸಂತೈಸಿ ಬಿಗಿದಪ್ಪಿ
ಮಡದಿ ಮುತ್ತಿಟ್ಟಾಗ
ಆ ಮುತ್ತಿನ ಸಿಹಿಯೊಳಗಿಂದಲೆ
ಹೊರಗಿಣುಕಿ ಕೇಳಿತು
ಆ ಪುಟ್ಟ ಕವಿತೆ ಮತ್ತೆ
ಈಗಲಾದರೂ ಬರಲೆ ನಾ ನಿನ್ನ ಹತ್ತಿರಕೆ ಎಂದು
ಬೇಡ ದಯಮಾಡಿ ಈಗ ಬೇಡ
ಉಶ್ ! ಈಗ ಏನೂ ಶಕ್ಯವಿಲ್ಲ

ನಿದ್ದೆ ಬಂದು ರೆಪ್ಪೆಗಳ ಮುಸುಕು ಎಳೆಯುತ್ತಿದೆ
ಮುಚ್ಚಿದ ಕಣ್ಣುಗಳೆದುರು ವಿಶಾಲ ಮಬ್ಬುಗತ್ತಲ ಬಯಲು
ಆ ಬಯಲಿನ ಆಚೆ ತುದಿಯಲ್ಲಿ ಅದೋ
ಅಷ್ಟೊಂದು ದೂರದಲ್ಲಿ ಮೌನವಾಗಿ
ಅಳುತ್ತ ಕುಳಿತಿದೆ ಆ ಪುಟ್ಟ ಕವಿತೆ

ಆ ಪುಟ್ಟ ಕವಿತೆಯ ಕಣ್ಣೀರೆ
ದಿನಗಳಾಗಿ ವಾರಗಳಾಗಿ
ತಿಂಗಳು ವರ್ಷಗಳಾಗಿ
ಉರುಳಿ ಹೋಗುತ್ತಿದೆ ಬದುಕು
ಕಳೆದು ಹೋಗುತ್ತಿದೆ ಬದುಕು

**ಡಾ|| ಸಂಜೀವ ಕುಲಕರ್ಣಿ**
'ನಗೆ ಮಲ್ಲಿಗೆ', ನಂ. ೨೦/೧, ಮಹಿಷಿ ರಸ್ತೆ, ಮಾಳಮಡ್ಡಿ, ಧಾರವಾಡ ಜಿಲ್ಲೆ - ೫೮೦ ೦೦೭

ಜೂನ್ ಸಂಚಿಕೆಯಲ್ಲಿ ಈ ಕವಿತೆಯನ್ನು ಅಪೂರ್ಣವಾಗಿ ಅಚ್ಚು ಮಾಡಿದ್ದುದಕ್ಕೆ ವಿಷಾದಿಸುತ್ತೇವೆ. ಮಾಹಿತಿ ತಂತ್ರಜ್ಞಾನದ ಯುಗದ ಲೋಪಗಳಲ್ಲಿ ಇದೂ ಒಂದು ! ಕವಿ ಶ್ರೀ. ಕುಲಕರ್ಣಿ ಅವರ ಕ್ಷಮೆ ಬೇಡುತ್ತೇವೆ. ಕವಿತೆಯ ಪೂರ್ಣಪಾಠ ಇಲ್ಲಿದೆ. – ಸಂ

ಪ್ರೀತಿಯಿಂದ ಸ್ವ ಇಚ್ಛೆಯಿಂದ ಸಹಗಮನ ಮಾಡಿದ ಸ್ತ್ರೀಯರೂ ಸಾವಿರಾರು ಮಂದಿ ಇದ್ದರೆಂದು ತಿಳಿಯುತ್ತದೆ. ಈಗ ಅದನ್ನು ಕ್ರೂರ ರೀತಿಯ ಮೂಢನಂಬಿಕೆಯೆಂದು ನಿಂದಿಸಲಾಗುತ್ತದೆ. ಆದರೆ ಅಂದು ಆ ಸ್ತ್ರೀಯರಿಗೆ ಸಜೀವ ದಹನಗೊಳ್ಳುವುದಕ್ಕೆ ಮೇಲೆ ತಿಳಿಸಿದ ಕಾರಣಗಳೇ ಪ್ರೇರಣೆಯಾಗಿವೆ. ಆಕೆ ಸಹಗಮನ ಮಾಡಿದ ಮೇಲೆ ಅವಳನ್ನು ದೈವವಾಗಿ ಆರಾಧಿಸುವುದು, ಗುಡಿ ಕಟ್ಟುವುದು ಇತ್ಯಾದಿಗಳನ್ನು ಅವಳ ಬಂಧುಗಳು ಮಾಡುತ್ತಿದ್ದರು. ಈಗ ಸ್ಮಾರಕಗಳಾಗಿ ಮಾಸ್ತಿಕಲ್ಲುಗಳಿವೆ. ಯೋಧನ ಪತ್ನಿ ಸಹಗಮನ ಮಾಡಿದರೆ ಯೋಧನ ಶಿಲ್ಪದ ಜೊತೆಗೆ ಪತ್ನಿಯ ಶಿಲ್ಪವೂ ಇದೆ. ಉಳಿದ ಸಮುದಾಯಗಳದ್ದಾದರೆ ಸತಿಯ ಬಲಗೈಯ ಚಿತ್ರ, ಕನ್ನಡಿ ಹಿಡಿದ ಸ್ತ್ರೀ ವಿಗ್ರಹ ಇತ್ಯಾದಿಗಳು ಮಾಸ್ತಿ ಕಲ್ಲುಗಳೆಂದು ಗುರುತಿಸಲ್ಪಡುತ್ತವೆ. ಈ ಮಾಸ್ತಿಕಲ್ಲುಗಳೇ ಆರಾಧನೆಗೊಳಪಟ್ಟ ವಿಗ್ರಹಗಳಾಗಿ ಗುಡಿಗಳಲ್ಲಿ, ದೇವಸ್ಥಾನಗಳಲ್ಲಿ, ಲಕ್ಷ್ಮಿ, ದುರ್ಗೆ, ಕಾಮಾಕ್ಷಿಯರಾಗಿ ಕಾಣಿಸಿಕೊಳ್ಳುತ್ತಾರೆ. ವಿಶೇಷವೆಂದರೆ ವಿಗ್ರಹಗಳಲ್ಲಿ ವೀರನ ಚಿತ್ರವಿದ್ದರೂ ಕಾರಣಿಕ ಮಹಿಮೆ ಇರುವುದು ಮಹಾಸತಿಗೆ ಮಾತ್ರ. ಇಲ್ಲಿ ವೀರನು ಯುದ್ಧರಂಗದಲ್ಲಿ ಕಾದಾಡಿ ಮಡಿದವನೂ ಆಗಿರಬಹುದು. ಇನ್ನಾವುದೋ ಕಾರಣದಿಂದ ಸಹಜ ಮರಣವನ್ನಪ್ಪಿರಲೂಬಹುದು. ಸತಿ ಮಾತ್ರ ಸಹಗಮನದ ದುರಂತ ಮರಣವನ್ನಪ್ಪಿದ ಕಾರಣ ಅವಳ ಮರಣದ ವೈಭವೀಕರಣ ನಡೆದಿರಬಹುದು. ಆದುದರಿಂದ ಅದಕ್ಕೆ ಸತಿಕಲ್ಲು ಎಂದು ಕರೆಯುತ್ತಾರೆ.

ಉತ್ತರ ಕರ್ನಾಟಕದಲ್ಲಿ ದೊರೆತ ಕೆಲವು ಸತಿಕಲ್ಲುಗಳಲ್ಲಿ 'ಇಂತಹವನ ಪತ್ನಿ ಇಲ್ಲಿ ಸತಿ ಹೋದಳು' ಎಂಬ ಬರೆಹಗಳಿವೆ. ಸಹಗಮನವಲ್ಲದೆ ಬೇರೆ ಕಾರಣಗಳಿಗಾಗಿ ಅಂದರೆ ಕುಟುಂಬಕ್ಕಾಗಿ, ದೇಶಕ್ಕಾಗಿ ಪ್ರಾಣತ್ಯಾಗ ಮಾಡಿದ ಸ್ತ್ರೀಯರ ನೆನಪಿಗಾಗಿಯೂ ಸತಿಕಲ್ಲುಗಳನ್ನು ಸ್ಥಾಪಿಸಿದ ನಿದರ್ಶನಗಳಿವೆ. ವೈದಿಕ ಧರ್ಮದ ಪುನರುತ್ಥಾನದ ಕಾಲದಲ್ಲಿ ಈ ಸತಿ ಮರಣಗಳು ಹೆಚ್ಚಾಗಿರುವುದು ವಿಶೇಷ. ಅದರಲ್ಲೂ ೧೩ನೆಯ ಶತಮಾನದಿಂದ ೧೭ನೆಯ ಶತಮಾನದವರೆಗೆ ಸತಿ ಹೋದವರ ಸಂಖ್ಯೆಯು ಅತಿ ಹೆಚ್ಚು. ಎಲ್ಲೋ ಸತ್ತ ಪತಿಯ ಪ್ರೀತಿಗಾಗಿ ಇನ್ನೆಲ್ಲೋ ಇದ್ದ ಸತಿಯು ಪ್ರಾಣತ್ಯಾಗ ಮಾಡುವ 'ಅನುಗಮನ'ವೆಂಬ ಪದ್ಧತಿಯೂ ಜಾರಿಯಲ್ಲಿತ್ತು. ಹೆಣವನ್ನು ದಹನ ಮಾಡುವ ಸಂಪ್ರದಾಯವಿಲ್ಲದ ಸಮಾಜದಲ್ಲಿ ಪತಿಯ ಹೆಣದ ಜೊತೆಗೆ ಸತಿಯನ್ನು ಜೀವಂತವಾಗಿ ಗುಂಡಿಯಲ್ಲಿ ಹೂತು ಸಮಾಧಿ ಮಾಡುವ ಸಂಪ್ರದಾಯವೂ ರೂಢಿಯಲ್ಲಿತ್ತು. ಕುಟುಂಬಕ್ಕಾಗಿ, ರಾಜನಿಗಾಗಿ, ದೇಶಕ್ಕಾಗಿ, ಧರ್ಮಕ್ಕಾಗಿ ಆತ್ಮಬಲಿದಾನ ಮಾಡುವ ವೀರರ ಒಂದು ದೊಡ್ಡ ಸಮುದಾಯವೇ ಆಗ ಕರ್ನಾಟಕದಲ್ಲಿತ್ತು. ಈ ಆವೇಶವು ಸ್ತ್ರೀಯರನ್ನು ಪ್ರಚೋದಿಸಿರಬಹುದು. ಚಿಕ್ಕಮಲ್ಲಕ್ಕ ಎಂಬವಳು ವಂಶವೃದ್ಧಿಗಾಗಿ ಆಚಂದ್ರಾರ್ಕ ಸುಖವಾಗಿರಲೆಂದು ಅಗ್ನಿಪ್ರವೇಶ ಮಾಡಿದಳೆಂದು ಹೇಳುವ ಶಾಸನ ಮಧುಗಿರಿಯಲ್ಲಿದೆ. ಅದು ಇಂತಹ ಬಲಿದಾನಗಳಿಗೆ ಪ್ರೇರಣೆಕೊಡುವ ಕಾಲವಾಗಿತ್ತು.



**ಬಾರಕೂರು ಬಟ್ಟೆ ವಿನಾಯಕ ದೇವಸ್ಥಾನದ ಎದುರು**

ಪ್ರಭುತ್ವವಾಗಲೀ, ಧರ್ಮವಾಗಲಿ ಯಾವುದೇ ಬಲಿದಾನವನ್ನು ತಡೆಯುವ ಬದಲು ಪ್ರೋತ್ಸಾಹಿಸುತ್ತಿದ್ದುದೇ ಕಾರಣವಾಗಿ ಸಮಾಜ ಅದನ್ನು ಭಕ್ತಿ ಗೌರವಗಳಿಂದ ಸ್ವೀಕರಿಸುತ್ತಿತ್ತು. ಸಾಮ್ರಾಜ್ಯ ವಿಸ್ತರಣೆಗಾಗಿ ರಾಜಮನೆತನದೊಳಗಿನ ಯುದ್ಧಗಳು, ಪಾಳೆಯಗಾರರೊಳಗಿನ ಅಂತಃಕಲಹಗಳು ಆಗಾಗ ನಡೆಯುತ್ತಲೇ ಇದ್ದುದರಿಂದ ಈ ವೀರಾವೇಶವನ್ನು ಸ್ವಂತದ ಸ್ವಾರ್ಥಕ್ಕಾಗಿ ಪ್ರಭುತ್ವ ಬಳಸಿಕೊಳ್ಳುತ್ತಿತ್ತು. ಧರ್ಮವು ಸ್ವರ್ಗಸುಖದ ವರ್ಣರಂಜಿತ ಕನಸುಗಳನ್ನು ಬಿತ್ತಿ ಪೋಷಿಸುತ್ತಿತ್ತು.

ಅಕ್ಬರ ಚಕ್ರವರ್ತಿ ಸಹಗಮನವನ್ನು ನಿಷೇಧಿಸುವ ಕಾನೂನು ಜಾರಿಗೊಳಿಸಿದ ಮೊದಲ ಅರಸನೆಂಬ ಖ್ಯಾತಿ ಪಡೆದನಾದರೂ ಆಗಲೂ ಧಾರ್ಮಿಕ ನಾಯಕರು ಅವನನ್ನು ವಿರೋಧಿಸಿದ್ದುಂಟು. ಆ ನಂತರದ ಕಾಲದಲ್ಲಿ ಸ್ಥಳೀಯ ಅಧಿಕಾರಿಗಳಿಗೆ ಲಂಚ ಕೊಟ್ಟು ಸಹಗಮನ ಮಾಡುತ್ತಿದ್ದರೆಂದು ಇತಿಹಾಸದ ದಾಖಲೆಗಳು ತಿಳಿಸುತ್ತವೆ. ಲಾರ್ಡ್ ವಿಲಿಯಂ ಬೆಂಟಿಂಕನ ಕಾಲದವರೆಗೂ ಸತಿ ನಿಷೇಧವು ಕಟ್ಟುನಿಟ್ಟಿನ ಶಾಸನವಾಗಿ ಜಾರಿಗೊಂಡಿರಲಿಲ್ಲ. ರಾಜಾ ರಾಮ್‌ಮೋಹನ ರಾಯ್ ಅವರ ಪ್ರಯತ್ನದಿಂದ ೧೮೨೯ರಲ್ಲಿ ಬೆಂಟಿಂಕನು ಸತಿ ಸಹಗಮನವನ್ನು ನಿಷೇಧಿಸಿ ಶಿಕ್ಷೆ ವಿಧಿಸುವ ಕಾನೂನು ಮಾಡಿದನು. ಆಮೇಲೆ ಸಹಗಮನ ಕಡಿಮೆಯಾಯಿತಾದರೂ ಸಂಪೂರ್ಣ ನಾಶವಾಗಲಿಲ್ಲ. ಎಲ್ಲಿಯವರೆಗೆ ಬಾಲ್ಯವಿವಾಹ ನಿಷೇಧ ಮತ್ತು ವಿಧವಾ ವಿವಾಹಕ್ಕೆ ಪ್ರೋತ್ಸಾಹ ಸಿಗಲಿಲ್ಲವೋ ಅಲ್ಲಿಯವರೆಗೂ ಈ ಪದ್ಧತಿ ದೇಶದ ಒಂದಲ್ಲ ಒಂದು ಕಡೆಯಲ್ಲಿ ಕಾನೂನಿಗೆ ಮಂಕುಬೂದಿ ಎರಚಿಯೋ, ಕಾನೂನಿನ ಸಮ್ಮತಿಯಿಂದಲೋ ನಡೆಯುತ್ತಲೇ ಇತ್ತು. ಕ್ರಿ. ಶ. ೧೯೩೮ರಲ್ಲಿ ತಲಕಾಡಿನ ಬ್ರಾಹ್ಮಣ ಸ್ತ್ರೀಗೆ ಮೈಸೂರಿನ ಸರಕಾರದ ಪೂರ್ಣಯ್ಯನವರಿಂದ ಒಪ್ಪಿಗೆ ಸಿಕ್ಕಿ, ಆಕೆ ಅಗ್ನಿಪ್ರವೇಶ ಮಾಡಿದ ಘಟನೆ ದಾಖಲಾಗಿದೆ. ಸ್ವಾತಂತ್ರ್ಯ ಸಿಕ್ಕಿದ ಮೇಲೂ ಸರಕಾರ ಸತಿ ನಿಷೇಧವನ್ನು ಕಟ್ಟುನಿಟ್ಟಾಗಿ ಪಾಲಿಸಲಿಲ್ಲ. ೧೯೮೭ರಲ್ಲಿ ರಾಜಸ್ತಾನದ ದಿಯೋರಾಲ್ ಗ್ರಾಮದಲ್ಲಿ ರೂಪಾ ಕನ್ವರ್ ಎಂಬ ೧೮ ವರ್ಷದ ಯುವತಿಯೊಬ್ಬಳು ಸಹಗಮನ ಮಾಡಿ ದೇಶಾದ್ಯಂತ ಸುದ್ದಿಯಾದಳು. ಕಾನ್ವೆಂಟಿನಲ್ಲಿ ಕಲಿತು ಸಮಾಜ ಸೇವೆಯಲ್ಲಿ ತನ್ನನ್ನು ಗುರುತಿಸಿಕೊಂಡಿದ್ದ ರೂಪಾ ಕನ್ವರ್ ಮಾಲ್‌ಸಿಂಗ್‌ನನ್ನು ಮದುವೆಯಾಗಿ ಕೇವಲ ಎಂಟು ತಿಂಗಳ ಕಾಲ ದಾಂಪತ್ಯ ಸುಖ ಅನುಭವಿಸಿ ಸಹಗಮನಕ್ಕೆ ಸಿದ್ಧಳಾದಳೆಂದರೆ ನಂಬುವುದು ಕಷ್ಟ. ಅದು ಹಲವಾರು ಸಂದೇಹಗಳಿಗೆ ಎಡೆಮಾಡಿಕೊಡುತ್ತದೆ. ಆಕೆ ತನ್ನ ಗಂಡನ ಹೆಣವನ್ನು ತನಗೆ ತೋರಿಸಬೇಕೆಂದು ಒತ್ತಾಯಿಸಿದಳು. ರಜಪೂತರಲ್ಲಿ ಮೃತ ಪತಿಯ ಮುಖವನ್ನು ಸತಿಗೆ ತೋರಿಸುವ ಸಂಪ್ರದಾಯವಿಲ್ಲ. ಪತಿಯ ದೇಹದೊಂದಿಗೆ ಎರಡು ಗಂಟೆ ಕಾಲ ಕಳೆದ ಮೇಲೆ ಆಕೆ ಮದುಮಗಳಂತೆ ತನ್ನನ್ನು ಸಿಂಗರಿಸಿಕೊಂಡು ಗ್ರಾಮದಲ್ಲಿ ಸ್ವಲ್ಪ ದೂರ ನಡೆದಳು. ಆಕೆಗೆ ಮತ್ತು ಬರಿಸುವ ಔಷಧಿಯನ್ನು ಆಹಾರದಲ್ಲಿ ತಿನ್ನಿಸಲಾಗಿತ್ತೆಂದೂ, ದಿಯೊರಾಲ್‌ನಲ್ಲಿ ಹಿಂದೆಯೂ ಸತಿ ಸಹಗಮನ ಮಾಡಿದ ಇತಿಹಾಸವಿದ್ದುದರಿಂದ ಅವಳ ಮೇಲೆ ಅವಳ ಗಂಡನ ಮನೆಯವರ ಒತ್ತಡವಿತ್ತೆಂದೂ ತನಿಖೆಯಿಂದ ತಿಳಿದುಬಂತು. ಆದರೆ ಯಾವುದೇ ಸಾಕ್ಷಿಗಳಿಲ್ಲದ ಕಾರಣ ಅಪರಾಧಿಗಳಿಗೆ ಶಿಕ್ಷೆಯಾಗಲಿಲ್ಲ. ಸಹಗಮನದ ಬಳಿಕ ನಡೆಯುವ ಚುನರೀ ಮಹೋತ್ಸವವನ್ನು ತಡೆಯಲು ಪೊಲೀಸರಿಗೆ ಸಾಧ್ಯವಾಗಲಿಲ್ಲ. ಸತಿಯನ್ನು ಹೊಗಳಿ ಹಾಡುವ ಕ್ಯಾಸೆಟ್‌ಗಳು ಬಿಸಿ ಬಿಸಿ ದೋಸೆಯಂತೆ ಮಾರಾಟವಾದವು. ಸತಿ ಸ್ಥಳದಲ್ಲಿ ಜಾತ್ರೆಯು ನಡೆದು ಜನರು ಸಾಗರದಂತೆ ಸೇರಿದರು. ಅವಳ ಕಾಲ್ಪನಿಕ ಚಿತ್ರ ಪ್ರತಿಗಳು ತಲಾ ಏಳು ರೂಪಾಯಿಯಂತೆ ಮಾರಾಟವಾದುವು. ಸತಿ ಸ್ಥಲವು ಒಂದು ವ್ಯಾಪಾರಿ ದಂಧೆಯಾಗಿ ಲಾಭಕೋರರಿಗೆ ಅವಕಾಶ ನೀಡಿತು. ಇದನ್ನೆಲ್ಲಾ ಗಮನಿಸಿದಾಗ ಓರ್ವ ಹೆಣ್ಣಿನ ಬಲಿದಾನದ ಹಿಂದೆ ಧಾರ್ಮಿಕ, ಕೌಟುಂಬಿಕ, ಆರ್ಥಿಕ ಕಾರಣಗಳು ಒಟ್ಟುಗೂಡಿ ತಮ್ಮ ಸ್ವಾರ್ಥವನ್ನು ಪೂರ್ಣಗೊಳಿಸಿಕೊಂಡು ತೃಪ್ತರಾದುದನ್ನು ಕಾಣುತ್ತೇವೆ. ಈ ಘಟನೆಯ ಬಳಿಕ ದೇಶಾದ್ಯಂತ ಮಹಿಳಾ ಸಂಘಟನೆಗಳು ಹೋರಾಟ ನಡೆಸಿದವು. ಹೆಣ್ಣಿನ ಬಲಿದಾನವನ್ನು ವೈಭವೀಕರಿಸುವ ಈ ಸಹಗಮನವನ್ನು ಬೇರುಸಹಿತ ಕಿತ್ತುಹಾಕಬೇಕೆಂಬ ಉದ್ದೇಶದಿಂದ ಜನ ಜಾಗೃತಿ ಮೂಡಿಸುವ ಕಾರ್ಯಕ್ರಮಗಳು ಹೆಚ್ಚಿದುವು.

ಪಿತೃ ಪ್ರಧಾನ ವ್ಯವಸ್ಥೆಯು ಬಲವಾಗಿ ಬೇರೂರಿರುವ ಸಮುದಾಯಗಳಲ್ಲಿ ಮಹಾಸತಿಯಾಗುವುದು ಪಾತಿವ್ರತ್ಯದ ಪರಮೋಚ್ಚ ಅಭಿವ್ಯಕ್ತಿಯಾಗಿತ್ತು. ಆದರೆ ಮಾತೃ ಪ್ರಧಾನ ವ್ಯವಸ್ಥೆಯಿರುವ ತುಳುನಾಡಿನಲ್ಲಿ ಈ ವ್ಯವಸ್ಥೆ ಇತ್ತೇ? ಇದ್ದರೆ ಹೇಗಿತ್ತು? ಎಂಬುದು ಕುತೂಹಲದ ಪ್ರಶ್ನೆ. ಇಲ್ಲಿರುವ ಮಾಸ್ತಿಕಲ್ಲುಗಳು, ಮಾಸ್ತಿ ದೇವಸ್ಥಾನಗಳು, ಮಾಸ್ತಿಕಟ್ಟೆ, ಮಾಸ್ತಿನಗರ, ಮಾಸ್ತಿಗುಡ್ಡೆ ಮುಂತಾದ ಸ್ಥಳಗಳು ಯಾವ ಕತೆಗಳನ್ನು ಹೇಳುತ್ತವೆ ಎಂದು ಅನ್ವೇಷಿಸಿದರೆ ಚರಿತ್ರೆಯ ಯಾವ ಅಂಶಗಳೂ ಇಲ್ಲದೆ ಕೇವಲ ಐತಿಹ್ಯಗಳು, ಕಟ್ಟುಕತೆಗಳ ಕಂತೆ ಕಂತೆಗಳೇ ಸಿಗುತ್ತವೆ. ಇಲ್ಲಿ ಉತ್ತರ ಕರ್ನಾಟಕದಂತೆ ಮಹಾಯುದ್ಧಗಳು ನಡೆಯದಿರಬಹುದು. ಆದರೆ ಪಾಳೆಯಗಾರರೊಂದಿಗಿನ ವೈಮನಸ್ಯಗಳು ಆಗಾಗ ಯುದ್ಧ ನಿರತರಾಗಿರುವಂತೆ ಸೈನಿಕರನ್ನು ಪ್ರೇರೇಪಿಸುತ್ತಿದ್ದವು. ದೀರ್ಘ ಕಾಲ ಆಳುಪರಿಂದ ಆಳಿಸಿಕೊಂಡ ತುಳುನಾಡು ಹೊಯ್ಸಳರ, ವಿಜಯನಗರದವರ, ಕೆಳದಿಯ ಅರಸರ, ಹೈದರಾಲಿ, ಟಿಪ್ಪು ಸುಲ್ತಾನರ ಬಳಿಕ ಇಂಗ್ಲಿಷರ ನೇರ ಆಡಳಿತಕ್ಕೆ ಒಳಪಟ್ಟ ಪ್ರದೇಶವಾಗಿದೆ. ಒಂದೊಂದು ಅರಸು ಮನೆತನಗಳ ಆಡಳಿತದ ಏರಿಳಿತಗಳೂ ಇಲ್ಲಿ ಸಣ್ಣ ಸಣ್ಣ ಯುದ್ಧೋನ್ಮಾದಗಳನ್ನು ಸೃಷ್ಟಿ ಮಾಡಿವೆ. ಇದನ್ನು ನಿಯಂತ್ರಿಸಲು ಹೊಯ್ಸಳ ವಿಜಯನಗರದರಸರು ಕಳಿಸಿದ ಸೈನಿಕರ ಪಡೆಯು ತಮ್ಮೊಂದಿಗೆ ತಮ್ಮ ವೀರ ಸಂಸ್ಕೃತಿಯನ್ನು ಎಳೆದು ತಂದು ಇಲ್ಲಿ ಸ್ಥಾಪಿಸಿದೆ. ಹಾಗಾಗಿ ಇಲ್ಲಿ ವೀರಗಲ್ಲುಗಳೂ ಇವೆ. ಅನೇಕ ಮಾಸ್ತಿಕಲ್ಲುಗಳೂ ಇವೆ. ಈವರೆಗೆ ಗುರುತಿಸಿದ ಮಾಸ್ತಿಕಲ್ಲುಗಳಲ್ಲಿ ಒಂದರಲ್ಲೂ ಶಾಸನಗಳಿಲ್ಲ. ಉತ್ತರ ಕರ್ನಾಟಕದಲ್ಲಿ ದೊರೆತ ಮಾಸ್ತಿ ಕಲ್ಲುಗಳಲ್ಲಿದ್ದಂತೆ ಯಾಕೆ ಇಲ್ಲಿ ಬರೆಹಗಳಿಲ್ಲ ಎಂಬುದು ವಿಚಾರಣೀಯವಾಗಿದೆ. ಉತ್ತರ ಕರ್ನಾಟಕದಲ್ಲಿ ಮಾಸ್ತಿಯ ಕುರಿತಾದ ಕಥೆಗಳು, ಜನಪದ ಹಾಡುಗಳು ಸಾಕಷ್ಟಿವೆ. ಇಲ್ಲಿ ಸಹಗಮನ ಮಾಡಿದ ಜನಪದ ಕಥೆಗಳು ಇಲ್ಲ. ಪರತಿ ಮಂಗಣೆಯೆಂಬ ತುಳು ಪಾಡ್ದನದಲ್ಲಿ ಆ ಹೆಣ್ಣುಮಗಳು ಗಂಡನ ಚಿತೆಗೆ ಹಾರಿ ಪ್ರಾಣತ್ಯಾಗ ಮಾಡಿದ ಕಥೆಯು ಬಲ್ಲಾಳನ ಮೇಲಿನ ಸೇಡಿನ ಕಾರಣಕ್ಕಾಗಿಯೇ ಸಂಭವಿಸಿದೆ ಎಂದು ಆ ಕಥೆಯಿಂದ ತಿಳಿಯುತ್ತದೆ. ಗಂಡನ ಚಿತೆಗೆ ಹಾರಿ ಪ್ರಾಣತ್ಯಾಗ ಮಾಡುವುದು ಇಲ್ಲಿನ ಸ್ತ್ರೀ ಧರ್ಮವಾಗಿ ಸಂಪ್ರದಾಯವಾಗಿರಲಿಲ್ಲ. ಆದರೂ ಇಲ್ಲಿ ಸಾಕಷ್ಟು ಮಾಸ್ತಿಕಲ್ಲುಗಳಿವೆ. ಇವುಗಳ ಕೆತ್ತನೆಯ ಶಿಲ್ಪದ ಮಾದರಿಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ವಿಜಯನಗರದ ಅರಸರ ಕಾಲ ಮತ್ತು ಅದರ ನಂತರದವುಗಳೇ ಆಗಿವೆ. ಆ ಸಮಯದಲ್ಲಿ

ಇಲ್ಲಿಗೆ ಬಂದ ಯೋಧರ ಪತ್ನಿಯರು ಕೆಲವರು ಸಹಗಮನ ಮಾಡಿದ್ದರಿಂದ ಮಾಸ್ತಿಕಲ್ಲುಗಳನ್ನು ನೆಟ್ಟಿರುವ ಸಾಧ್ಯತೆ ಇದೆ.

ತುಳುನಾಡಿನ ಯೋಧ ಜನಾಂಗದಲ್ಲಿ ಮಹಿಳೆಯರಿಗೆ ವೈಧವ್ಯ ಶಾಶ್ವತವಲ್ಲ, ಮಹಿಳೆಗೆ ಮರುಮದುವೆಯ ಅವಕಾಶವೂ ಇತ್ತು. ಆದರೂ ಸಹಗಮನಕ್ಕೆ ಉತ್ತೇಜನ ನೀಡಲು ಸಮಾಜ ಪ್ರಯತ್ನಿಸಿರಬೇಕು. ಕುಟುಂಬದ ರಕ್ಷಣೆಗಾಗಿ ಹೋರಾಡಿ ದುರ್ಮರಣ ಹೊಂದಿದ ಮಹಿಳೆಯರೋ, ಇನ್ಯಾವುದೋ ಕಾರಣದಿಂದ ಅಕಾಲಿಕ ಮರಣವನ್ನಪ್ಪಿದ ಮಹಿಳೆಯರೋ ಸತ್ತ ನಂತರ ಮಾಸ್ತಿಯೆಂಬ ಪಟ್ಟಕ್ಕೇರಿಸಿದ ಘಟನೆಗಳೂ ಇರಬಹುದು. ಬಾಣಂತಿ ಮಾಸ್ತಿ, ನಾಗಮಾಸ್ತಿ, ಕೆಂಡಮಾಸ್ತಿ, ಜೈನಮಾಸ್ತಿ ಮುಂತಾದ ಹೆಸರಿನ ಮಾಸ್ತಿಕಲ್ಲುಗಳೂ ಇಲ್ಲಿ ಕಾಣಸಿಗುತ್ತವೆ. ಮಾಸ್ತಿಯ ಬಲಗೈಯ ಶಿಲ್ಪ, ಕನ್ನಡಿ ಹಿಡಿದ ಅನೇಕ ಮಾಸ್ತಿ ವಿಗ್ರಹಗಳು ತುಳುನಾಡಿನಲ್ಲಿ ಕಾಣಸಿಗುತ್ತವೆ. ಎಲ್ಲೋ ಬಿದ್ದಿದ್ದ ಕಲ್ಲುಗಳು ಎಲ್ಲೆಲ್ಲೋ ಸ್ಥಳಾಂತರಗೊಂಡ ಉದಾಹರಣೆಗಳಿವೆ. ಹಾಡಿಯಲ್ಲಿ ಅನಾಥವಾಗಿ ಬಿದ್ದಿದ್ದ ಮಾಸ್ತಿಕಲ್ಲನ್ನು ಎತ್ತಿ ತಂದು ಗುಡಿ ಕಟ್ಟಿ ಉಳ್ಳಾಲ್ತಿಯನ್ನಾಗಿ ಪರಿವರ್ತಿಸಿದ ಪುರೋಹಿತರು, ''ಎಲ್ಲೊ ಬಿದ್ದವಳಿಗೆ ನಾನು ರಕ್ಷಣೆ ಕೊಟ್ಟೆ. ಈಗ ಅವಳು ನನ್ನನ್ನು ರಕ್ಷಿಸುತ್ತಾಳೆ'' ಎಂದು ಯಾವುದೇ ಸಂಕೋಚ ವಿಲ್ಲದೆ ಹೇಳಿದ್ದರು. ಮಾಸ್ತಿಕಲ್ಲುಗಳು ಆರಾಧನಾ ಕೇಂದ್ರಗಳಾಗಿ ಜನರ ನಂಬಿಕೆಗಳನ್ನು ನಗದೀಕರಿಸುವ ಕೇಂದ್ರಗಳಾಗಿರುವುದೇ ಹೆಚ್ಚು. ಈ ಕಲ್ಲುಗಳು ಯಾವ ಸಮುದಾಯದ ಸ್ತ್ರೀಯರಿಗೆ ಸಂಬಂಧಿಸಿದ್ದು ಎಂಬುದನ್ನು ತಿಳಿಯುವುದು ಕೂಡ ಕಷ್ಟದ ಕೆಲಸ. ಕುಂದಾಪುರದ ನಾಡಗುಡ್ಡೆಯಂಗಡಿಯ ಮಾಸ್ತಿಯನ್ನು ಅಲ್ಲಿನ ಕೊತ್ವಾಲ ಸಮುದಾಯದವರು ತಮ್ಮ ಮನೆತನದ ಮಾಸ್ತಿಯೆಂದು ಹೇಳುತ್ತಾರೆ. ಸಿದ್ದಾಪುರದ ಈರ ಗೌಡರ ಮನೆಯ ಮಾಸ್ತಿಯನ್ನು ತಮ್ಮ ಮನೆತನದ್ದೆಂದು ಹೇಳಿಕೊಂಡು ಆರಾಧಿಸುತ್ತಾ ಬಂದಿದ್ದಾರೆ. ಇಲ್ಲಿ ಮಾಸ್ತಿಯ ಗೆಜ್ಜೆಗಳನ್ನು ವೀರನ ಕಠಾರಿಯನ್ನು ಈಗಲೂ ಜತನದಿಂದ ಇಟ್ಟಿದ್ದಾರೆ. ಕುಂಬಳೆಯ ಮಾಸ್ತಿಪೆಟ್ಟಿಗೆ ಕೋಟೆ ಕ್ಷತ್ರಿಯ ಜನಾಂಗಕ್ಕೆ ಸೇರಿದ ಮಾಸ್ತಿ, ಆಕೆಯ ಸೀರೆಯನ್ನು ಆ ಪೆಟ್ಟಿಗೆಯಲ್ಲಿಟ್ಟಿದ್ದು ವರ್ಷಂಪ್ರತಿ ದುರ್ಗಾ ಪೂಜೆಯಂದು ಆರಾಧಿಸುತ್ತಾ ಬರುತ್ತಿದ್ದಾರೆ. ಈಗ ಅಂದಿನ ಮಾಸ್ತಿಯ ಸೀರೆ ಪೆಟ್ಟಿಗೆಯಲ್ಲಿ ಉಳಿದಿಲ್ಲವಾದರೂ ಒಂದು ಹೊಸ ಸೀರೆ ಇಟ್ಟು ಪೂಜಿಸಿ ಮುಂದಿನ ವರ್ಷ ತೆಗೆದು ಅದರಲ್ಲಿ ಬೇರೆ ಸೀರೆ ಇಡುವ ಸಂಪ್ರದಾಯವನ್ನು ಈಗಲೂ ಆಚರಿಸುತ್ತಾರೆ. ಕಾಸರಗೋಡಿನ ಕುಂಡಂಕುಳಿಯಲ್ಲಿ ಯಾದವ ಸಮುದಾಯದ ಜನರು ತಮ್ಮ ಕುಟುಂಬದ ಮಾಸ್ತಿಯೆಂದು ನಂಬಿ ಆರಾಧಿಸುತ್ತಾರೆ. ಕಟಪಾಡಿಯ ಮಾಸ್ತಿ ಕಾಮಾಕ್ಷಿ ಗೌಡಸಾರಸ್ವತ ಸಮುದಾಯಕ್ಕೆ ಸೇರಿದವಳು ಎಂದು ಆರಾಧಿಸುತ್ತಾರೆ. ಕೋಡಿ ಕನ್ಯಾನದ ಮಾಸ್ತಿ ಮೊಗವೀರ ಸಮುದಾಯಕ್ಕೆ ಸೇರಿದವಳು ಎಂದು ಪೂಜಿಸುತ್ತಾರೆ. ಉಡುಪಿ ಅಂಬಾಗಿಲಿನ ಮಾಸ್ತಿ ಗೌಡಸಾರಸ್ವತ ಸಮುದಾಯದ್ದೆಂದೂ, ಬ್ರಹ್ಮಾವರದ ಮಾಸ್ತಿ ವೀರಶೈವ ಸಮುದಾಯಕ್ಕೆ ಸೇರಿದ್ದೆಂದೂ ದೇವಸ್ಥಾನದ ಆಡಳಿತ ಮಂಡಲಿಯವರು ವಿವರ ನೀಡುತ್ತಾರೆ. ಇವೆಲ್ಲವೂ ಆ ಸಮುದಾಯಕ್ಕೆ ಸೇರಿದ್ದೆಂದು ಹೇಳುವುದಕ್ಕೆ ಯಾವುದೇ ಚಾರಿತ್ರಿಕ ಆಧಾರಗಳಿಲ್ಲ, ಮಾಸ್ತಿ ಅಭಯ ನೀಡುವ, ಸಂತಾನಭಾಗ್ಯ ನೀಡುವ, ಬಾಣಂತಿಯರನ್ನು ರಕ್ಷಿಸುವ ದೈವವೆಂಬ ನಂಬಿಕೆಗಳನ್ನು ಪ್ರಚಾರ ಮಾಡಿದ್ದರಿಂದ ಮಾಸ್ತಿ ದೈವಗಳು ದೇವಿಯರಾಗಿ ಬಡ್ತಿ ಹೊಂದಿ ಅವರ ನೆಲೆಗಳು ವೈದಿಕರ ಪೂಜಾ ವಿಧಿ ವಿಧಾನಗಳಿಂದ ಆರಾಧನೆಗೊಳ್ಳುವ ದೇವಸ್ಥಾನಗಳಾಗಿ ಪರಿವರ್ತಿತವಾಗಿವೆ.

ಕಾಸರಗೋಡಿನ ಕಳನಾಡು ತ್ರಿಕ್ಕರಪುರದಲ್ಲಿ ನಡೆಯುತ್ತಿದ್ದ ಸತಿ ಪೂಜೆಯು ಬಹಳ ಕುತೂಹಲದಾಯಕ ವಾಗಿದೆ. ಅವರ ಮನೆತನದಲ್ಲಿ ಹಿಂದೆ ದುರ್ಮರಣಕ್ಕೆ ಈಡಾದ ಅಕ್ಕ-ತಮ್ಮ ಇವರ ನೆನಪಿನಲ್ಲಿ ಮಹಾ ನವಮಿ ಸಂದರ್ಭದಲ್ಲಿ ಪೂಜೆ ಮಾಡುತ್ತಾರೆ. ಹದಿನಾರು ವರ್ಷಕ್ಕೆ ಮೇಲ್ಪಟ್ಟ ಕನ್ಯೆ ಮತ್ತು ಹುಡುಗನನ್ನು ಒಂದು ವಾರದ ಮೊದಲೇ ಶುದ್ಧಾಚಾರದಲ್ಲಿರುವಂತೆ ವಿಧಿಸಲಾಗುತ್ತದೆ. ಮಹಾನವಮಿಯ ಎಂಟನೆಯ ದಿನದಂದು ಅವಳನ್ನು ದೇವರ ಮುಂದೆ ಕಲಶವಿಟ್ಟು ಕೂರಿಸುತ್ತಾರೆ. ಅಂದಿನ ನೈವೇದ್ಯವನ್ನು ಅವಳೇ ಮಡಿಯುಟ್ಟು ಮಾಡಬೇಕು. ಹುಡುಗನನ್ನು ಕುಳ್ಳಿರಿಸಿ ಎಡೆ ಇಡಲಾಗುತ್ತದೆ. ಮೊದಲು ಬಿಳಿ ಸೀರೆಯುಟ್ಟ ಅವಳಿಗೆ ಆರಾಧನೆಯಾದ ಬಳಿಕ ಜರಿ ಸೀರೆಯುಡಿಸಿ ಸಿಂಗರಿಸಿ ಕುಳ್ಳಿರಿಸುತ್ತಾರೆ. ಮನೆತನದ ಬಂಧು ಬಳಗದವರೆಲ್ಲಾ ಸೇರುತ್ತಾರೆ. ಕುಮಾರ-ಕುಮಾರಿಯರ ಸ್ಮರಣೆಯಲ್ಲಿ ನಡೆಯುವ ಈ ಪೂಜೆಗೆ ಸತಿ ಪೂಜೆ ಎಂದು ಯಾಕೆ ಕರೆಯುತ್ತಾರೋ ತಿಳಿಯದು. ದುರಂತ ಮರಣವನ್ನಪ್ಪಿದ ಸ್ಮರಣೆಯಲ್ಲಿ ನಡೆಯುವ ಈ ಆಚರಣೆಯು ಈಗ ಕಳೆದೆರಡು ವರ್ಷಗಳಿಂದ ನಿಂತಿದೆ.

ಹೀಗೆ ಪೂಜೆಗೆ ಕುಳಿತ ಕನ್ಯೆಗೆ ಬೇಗ ಕಂಕಣಭಾಗ್ಯ ಲಭಿಸುತ್ತದೆಂಬ ನಂಬಿಕೆಯಿದ್ದರೂ ಆಧುನಿಕ ಹೆಣ್ಣುಮಕ್ಕಳು ಈ ಪೂಜೆಗೆ ಒಪ್ಪುವುದಿಲ್ಲವೆಂದು ಮಾಹಿತಿ ನೀಡಿದ ಸುದಾಕ್ಷಿಣಿಯವರು ವಿವರಿಸಿದರೂ ಈಗ ಅವರ ಮನೆಯ ಪಕ್ಕದಲ್ಲೇ ಇರುವ ಅನ್ನಪೂರ್ಣೇಶ್ವರಿ ದೇವಸ್ಥಾನದ ತಂತ್ರಿಗಳಿಗೆ ಕಲಶವನ್ನೊಪ್ಪಿಸಲಾಗಿದೆ. ಈಗ ದೇವಸ್ಥಾನದಲ್ಲಿ ಆ ಸತಿಯ ಆರಾಧನೆ ನಡೆಯುತ್ತದೆ. ಈ ಮನೆತನದವರೂ ಕ್ಷತ್ರಿಯ ಕುಲದವರು, ಸಹಗಮನದ ಹೊರತಾಗಿ ಸಂಭವಿಸಿದ ದುರಂತ ಮರಣಗಳಿಗೂ ಸತಿ ಪೂಜೆ ಎಂಬ ಆಚರಣೆ ರೂಢಿಯಲ್ಲಿದೆ ಎಂದು ಇದರಿಂದ ತಿಳಿಯಬಹುದು.

ಇಲ್ಲಿ ಗಮನಿಸಬೇಕಾದ ಮುಖ್ಯ ಸಂಗತಿಯೆಂದರೆ ಮಾಸ್ತಿ ಒಂದು ಅತೃಪ್ತ ಪ್ರೇತಾತ್ಮ. ಅದು ಕೇಡು ಬಗೆಯದಿರಲಿ ಎಂದು ಆರಾಧಿಸಿ ಸಾಮಾನ್ಯ ಜನರು ಸಮಾಧಾನಪಟ್ಟುಕೊಳ್ಳುತ್ತಾರೆ. ಅದೇ ದೈವ ಪುರೋಹಿತರಿಂದ ದೇವಿಯ ದೀಕ್ಷೆಯನ್ನು ಪಡೆದು ದೇವಸ್ಥಾನದಲ್ಲಿ ಪ್ರತಿಷ್ಠೆಯಾಗಿದೆ. ಒಂದು ಮನೆತನಕ್ಕೆ ಮಾತ್ರ ಸೇರಿದ ದೈವವು ಊರಿನ ಗ್ರಾಮದೇವತೆಯಾಗಿ ಮನ್ನಣೆ ಪಡೆದಿದ್ದಾಳೆ. ಶಕ್ತಿ ಆರಾಧನೆ ತುಳುನಾಡಿನಲ್ಲಿ ಬಹು ಮಾನ್ಯತೆ ಪಡೆದುದರಿಂದ ದೇವಿಯ ಸೌಮ್ಯ ಮತ್ತು ಉಗ್ರ ಎರಡೂ ರೂಪದಲ್ಲಿ ಮಾಸ್ತಿ ಇಲ್ಲಿ ಕಾಣಿಸಿಕೊಳ್ಳುತ್ತಾಳೆ. ಕೆಲವು ಕಡೆಗಳಲ್ಲಿ ಮಾಸ್ತಿ ದೇವಸ್ಥಾನವೆಂಬ ಹೆಸರಿದ್ದರೂ ಅಲ್ಲಿ ಮಾಸ್ತಿಯ ಲಕ್ಷಣಗಳಿರುವ ವಿಗ್ರಹಗಳ ಬದಲಿಗೆ ನವೀಕೃತ ವಿಗ್ರಹಗಳು ಪ್ರತಿಷ್ಠೆಗೊಂಡು ಆರಾಧಿಸಲ್ಪಡುತ್ತಿವೆ. ಸತಿಕಲ್ಲು, ಮಮ್ಮುಟ್ಟಿಕಲ್ಲು ಎಂಬ ಭಿನ್ನ ಹೆಸರಿನಿಂದ ಭಿನ್ನ ಕೋಮಿನವರಿಂದಲೂ ಆರಾಧಿಸಲ್ಪಡುವ ನಿದರ್ಶನಗಳಿವೆ. ಏನಿದ್ದರೂ ಮಹಾಸತಿಯೊಬ್ಬಳು ತನ್ನ ಮನಸ್ಸು ಹೃದಯಗಳನ್ನು ಕಲ್ಲಾಗಿಸಿಕೊಂಡು ಬೆಂಕಿಯಲ್ಲಿ ಭಸ್ಮವಾದ ಮೇಲೆಯೇ ದೇವಿಯ ಪಟ್ಟವೇರುತ್ತಾಳೆ. ''ನಾರಿಯರು ಪೂಜಿಸಲ್ಪಡುವಲ್ಲಿ ದೇವತೆಗಳು ನೆಲಸುತ್ತಾರೆ'' ಎಂದು ಮನು ಹೇಳಿದ್ದು ಇಲ್ಲಿ ನೆನಪಾಗುತ್ತದೆ. ಬದುಕಿರುವಾಗ ಬೀದಿ ನಾಯಿಗಿಂತಲೂ ನಿಕೃಷ್ಟವಾಗಿ ನಡೆಸಿಕೊಂಡವರಿಗೆ, ಭೋಗವಸ್ತುವಿನಂತೆ ಕಂಡವರಿಗೆ ನಾರಿಯು ಪೂಜೆಗೆ ಅರ್ಹಳೆಂದು ಕಂಡುಬರುವುದು ಸತ್ತ ಮೇಲೆಯೇ. ದೇವತೆಗಳು ನೆಲಸುತ್ತಾರೆಂದು ಮನು ಕಂಡ ಕನಸು ಸಮಾಜದಲ್ಲಿ ಭ್ರಮೆಗಳನ್ನು ಹುಲುಸಾಗಿ ಬೆಳೆಸಿತು. ಮಧ್ಯಕಾಲೀನ ಸಮಾಜವು ಸ್ತ್ರೀಯರೊಂದಿಗೆ ಮಾನವೀಯ ಹೃದಯದಿಂದ ವರ್ತಿಸುವುದನ್ನೇ ಮರೆತುಬಿಟ್ಟಿತು. ಆಧುನಿಕ ಸಮಾಜ ಸ್ತ್ರೀಯರು ಎಂತಹ ಅಗ್ನಿದಿವ್ಯಗಳನ್ನು ದಾಟಿ ಬಂದಿದ್ದಾರೆಂಬ ಚರಿತ್ರೆಯನ್ನೇ ಮರೆತಿದೆ. ಆಧುನಿಕ ಸ್ತ್ರೀಯ ಅಸ್ಮಿತೆಯ ಹಿಂದೆ ಶತಶತಮಾನಗಳ ನೋವಿನ ನಿಟ್ಟುಸಿರುಗಳಿವೆ. ಈ ನೋವಿನಿಂದ ಹೊರಬರುವಂತೆ ಮಾಡಿದ ಪ್ರಯತ್ನದಲ್ಲಿ ಸಮಾಜ ಸುಧಾರಕರನೇಕರ ಪರಿಶ್ರಮವಂತೂ ಇದೆ.

**ಬಿ. ಎಂ. ರೋಹಿಣಿ**
ಪಂಚಾಯತ್ ಕಛೇರಿ ಬಳಿ, ಕುಡುಪು
ಮಂಗಳೂರು - ೫೭೫ ೦೨೮

---

ಅಡಚರಿಸಬೇಡ ಗುಡುಗೆ ;
ತೊಟ್ಟಿಲು ನಿದ್ದೆ ಹೋಗಿದೆ
ಹಾಲುಮಳೆ ಹಳವಂಡವಾಗಿದೆ
ಕೈ ಅಮ್ಮನೆದೆಯ ಬಾಚಿಕೊಂಡಿದೆ..
ಮಳೆಗು ಅಷ್ಟು ದಾರಿ ಮಾಡಿ ಕೊಡು !
ಹಸಿರುಣ್ಣಲಿ ಭೂಮಿ;
ಮೈ ಮನ ಸ್ತನ ತೊನೆದಾಡಲಿ..
ತ್ರಾಣ-ಪ್ರಾಣಕ್ಕೆ ಮುಖವಾಗು
ಗುಡುಗೇ..!

**ವಿಜಯಕಾಂತ ಪಾಟೀಲ**
ನ್ಯಾಯವಾದಿ, ಕ್ಯಾಸನೂರು, ಹಾನಗಲ್ಲ
ಹಾವೇರಿ – ೫೮೧೧೦೪

ಇಸ್ಮತ್ ಪಜೀರ್




# ಹೀಗೊಬ್ಬ ಅಕ್ಷರ ಸಂತ ಹರೇಕಳ ಹಾಜಬ್ಬ

**ಮ**ಂಗಳೂರು ನಗರದಿಂದ ಕೇರಳಕ್ಕೆ ಸಾಗುವ ರಾಷ್ಟ್ರೀಯ ಹೆದ್ದಾರಿ ೬೬ರಲ್ಲಿ ಸುಮಾರು ಹತ್ತು ಕಿಲೋ ಮೀಟರ್ ಕ್ರಮಿಸಿದರೆ ತೊಕ್ಕೊಟ್ಟು ಎಂಬ ಸದಾ ಜನಸಂದಣಿಯಿಂದ ಗಿಜಿಗಿಡುವ ಪೇಟೆ. ಈ ಪೇಟೆಯ ಕೇಂದ್ರ ಭಾಗದಲ್ಲಿ ಉಳ್ಳಾಲ ಶ್ರೀನಿವಾಸ ಮಲ್ಯ ವೃತ್ತ. ಆ ವೃತ್ತದ ಬಳಿ ಎಡಕ್ಕೆ ತಿರುಗಿ ಮುಂದೆ ಸಾಗುತ್ತಲೇ ಸಾಲು ಸಾಲಾಗಿ ಉಳ್ಳವರಿಗೆ ಉನ್ನತ ಶಿಕ್ಷಣ, ವೃತ್ತಿಪರ ಶಿಕ್ಷಣವನ್ನು ಬಿಕರಿಗಿಟ್ಟ ಕ್ಯಾಪಿಟೇಶನ್ ಸಂತೆಗಳು, ಮತ್ತೂ ಮುಂದೆ ಸಾಗುತ್ತಾ, ಅಂದರೆ ತೊಕ್ಕೊಟ್ಟು ಪೇಟೆಯಿಂದ ಸರಿ ಸುಮಾರು ೮ ಕಿಲೋ ಮೀಟರ್ ದೂರದಲ್ಲಿ ಮಂಗಳಗಂಗೋತ್ರಿ. ಮಂಗಳಗಂಗೋತ್ರಿಯಿಂದ ಸರಿಯಾಗಿ ೪ ಕಿಲೋ ಮೀಟರ್ ಮುಂದಕ್ಕೆ ಚಲಿಸಿದರೆ ನಗರಜೀವನದ ಜಂಜಡಗಳಿಂದ ಅಲ್ಪ ದೂರವೇ ಉಳಿದ ನ್ಯೂಪಡ್ಪು ಎಂಬ ಪುಟ್ಟ ಹಳ್ಳಿ ಕಾಣಸಿಗುತ್ತದೆ. ಅದೇ ನಮ್ಮ ಅಕ್ಷರ ಭಗೀರಥ ಶಿಕ್ಷಣದ ಗಂಗೆ ಹರಿಸಿದ ಗುಡ್ಡಬೆಟ್ಟಗಳಿಂದಾವೃತವಾದ ಹಳ್ಳಿ. ಬರೀ ಕಪ್ಪು ಕಲ್ಲುಗಳೇ ತುಂಬಿರುವ ಈ ಹಳ್ಳಿಯಲ್ಲೇ ಅಕ್ಷರ ಸಂತನ ಆಶ್ರಮ ಅರ್ಥಾತ್ ನ್ಯೂಪಡ್ಪು ಸರಕಾರಿ ಸಂಯುಕ್ತ ಪ್ರೌಢಶಾಲೆಯಿದೆ. ಇಲ್ಲಿನ ಜನರಲ್ಲಿ ೭೫% ಬಡಕೂಲಿ ಕಾರ್ಮಿಕರು ಮತ್ತು ಬೀದಿ ವ್ಯಾಪಾರಿಗಳು. ಶಿಕ್ಷಣದ ಪರಿಕಲ್ಪನೆಯೂ





ಹಾಜಬ್ಬರ ಶಾಲೆಗೆ ಹಿರಿಯ ಸಾಹಿತಿ ಬೊಳುವಾರು ಮುಹಮ್ಮದ್ ಕುಂಞಿಯವರು ಸಿಂಡಿಕೇಟ್ ಬ್ಯಾಂಕ್‌ನಿಂದ ೪ ಲಕ್ಷ ರೂಪಾಯಿಗಳ ಸಹಾಯ ಕೊಡಿಸಿದಾಗ ತೆಗೆದ ಭಾವಚಿತ್ರ

ಹಾಜಬ್ಬರಿಗೆ ಸಂದ ಪ್ರಶಸ್ತಿ, ಗೌರವ, ಸಮ್ಮಾನಗಳು ಸುಮಾರು ೮೦. ಅವುಗಳಲ್ಲಿ ಪ್ರಮುಖವಾದುವು ಕರ್ನಾಟಕ ಬ್ಯಾರಿ ಸಾಹಿತ್ಯ ಅಕಾಡೆಮಿಯ 'ಅಕ್ಕರದ ಅವಧೂತ' ಬಿರುದು, ಮಂಗಳೂರಿನ ಜೆ.ಎಫ್.ಎ. ಸಂಸ್ಥೆಯ ಅಕ್ಷರ ಸಂತ ಬಿರುದು, ಯೆನೆಪೋಯಾ ವಿಶ್ವವಿದ್ಯಾನಿಲಯದ 'ಯೆನೆಪೋಯ ಎಕ್ಸಲೆನ್ಸಿ ಅವಾರ್ಡ್', ಸಂದೇಶ ಪ್ರತಿಷ್ಠಾನದ 'ಸಂದೇಶ ಪ್ರಶಸ್ತಿ', ಬ್ಯಾರೀಸ್ ವೆಲ್ಫೇರ್ ಅಸೋಸಿಯೇಶನ್‌ನ 'ವರ್ಷದ ಬ್ಯಾರಿ-೨೦೦೬', ರಂಗಾಯಣದ ಬಿ. ವಿ. ಕಾರಂತ ರಂಗ ಉತ್ಸವದಲ್ಲಿ ಗೌರವ ಸಮ್ಮಾನ, ಕವಿವರ್ಯ ಪಂಡಿತ ಪುಟ್ಟರಾಜ ಗವಾಯಿಗಳ ಗುರುವಂದನಾ ಕಾರ್ಯಕ್ರಮದಲ್ಲಿ ಗೌರವ ಸಮ್ಮಾನ, ೨೦೦೭ರ ಗಣರಾಜ್ಯೋತ್ಸವದಂದು ರಾಜ್ಯಪಾಲ ರಾಮೇಶ್ವರ್ ಠಾಕೂರರಿಂದ ಗೌರವ ಸಮ್ಮಾನ, ಭಾರತ ಪ್ರಜಾಸತ್ತಾತ್ಮಕ ಯುವಜನ ಒಕ್ಕೂಟದ ಯುವಮಿಲನ ಕಾರ್ಯಕ್ರಮದಲ್ಲಿ ಗೌರವ ಸಮ್ಮಾನ, ಇನ್‌ಲ್ಯಾಂಡ್ ಅವಾರ್ಡ್- ೨೦೦೫... ಹೀಗೆ ಪಟ್ಟಿ ಮುಂದುವರಿಯುತ್ತದೆ. ಹೀಗೆ ಎಲ್ಲಾ ಪ್ರಶಸ್ತಿ, ಬಿರುದು, ಸಮ್ಮಾನಗಳೊಂದಿಗೆ ಸಿಕ್ಕ ಪೈಸೆ ಪೈಸೆಯನ್ನೂ ಶಾಲಾಭಿವೃದ್ಧಿಗೆ ವಿನಿಯೋಗಿಸಿದ ಮಹಾನುಭಾವ ಈ ಹಾಜಬ್ಬ.

ಇಲ್ಲದ, ಜನರಿಂದಲೇ ತುಂಬಿರುವ ಈ ಹಳ್ಳಿಯಲ್ಲಿ ಅಂತಹವರಲ್ಲೊಬ್ಬನೇ ಆದ ಹಾಜಬ್ಬ ಎಂಬ ಅಕ್ಷರಕ್ರಾಂತಿ ಪುರುಷ ಹುಟ್ಟಿ ಬಂದು ಇಂದು ಈ ಹಳ್ಳಿಯನ್ನು ದೇಶಕ್ಕೆ ಮಾದರಿಯಾಗಬಲ್ಲ ಹಳ್ಳಿಯಾಗಿ ಬೆಳೆಸುವ ಕಾಯಕದಲ್ಲಿ ತಲ್ಲೀನರಾಗಿದ್ದಾರೆ.

ಮಂಗಳೂರು ತಾಲೂಕಿನ ಹರೇಕಳ ಎಂಬ, ನೇತ್ರಾವತಿಯ ಸೆರಗಿನ ತುದಿಯ ಹಳ್ಳಿಯ ಬಡ ಬೀಡಿ ಕಾರ್ಮಿಕರಾದ ಕುಟ್ಟಿಮಾಕ-ಬೀ ಫಾತಿಮಾ ದಂಪತಿಯ ಪುತ್ರನಾಗಿ ೫೫ ವರ್ಷಗಳ ಹಿಂದೆ ಜನ್ಮ ತಾಳಿದ ಹಾಜಬ್ಬ ಬಡತನವನ್ನೇ ಉಟ್ಟು, ಹಸಿವನ್ನೇ ಉಂಡು ಬೆಳೆದವರು. ಆ ಹಳ್ಳಿಯ ಆ ಕಾಲದ ಎಲ್ಲರಂತೆಯೇ ಹಾಜಬ್ಬರೂ ತನ್ನ ಆರನೇ ವಯಸ್ಸಿಗೆ ಬೀಡಿಯ ಪರಿಕರಗಳನ್ನು ಕೈಗೆತ್ತಿಕೊಂಡರು. ಯೌವನಕ್ಕೆ ಕಾಲಿಡುತ್ತಲೇ ಸಹಜವಾಗಿಯೇ ಎಲ್ಲಾ ಬ್ಯಾರಿ ಮುಸ್ಲಿಮರಂತೆ ಹಾಜಬ್ಬ ವ್ಯಾಪಾರದ ಕನಸು ಕಾಣತೊಡಗಿದರು. ವ್ಯಾಪಾರವೆಂದರೆ ಲಕ್ಷಾಂತರ ರೂಪಾಯಿ ಬಂಡವಾಳದ ವ್ಯಾಪಾರವಲ್ಲ, ತಲೆ ಹೊರೆ ವ್ಯಾಪಾರವಷ್ಟೆ. ಕೆಲವೇ ದಿನಗಳಲ್ಲಿ ಮಂಗಳೂರು ಕೇಂದ್ರ ಮಾರುಕಟ್ಟೆಯ ರಖಂ ಹಣ್ಣಿನ ವ್ಯಾಪಾರಿಗಳಿಂದ ಕಿತ್ತಳೆಹಣ್ಣುಗಳನ್ನು ಖರೀದಿಸಿ ಬುಟ್ಟಿಯಲ್ಲಿ ತುಂಬಿಸಿ ತಲೆ ಮೇಲೆ ಹೊತ್ತು ನಗರದ ಬೀದಿ ಬೀದಿ ತಿರುಗಾಡಿ ವ್ಯಾಪಾರ ಪ್ರಾರಂಭಿಸುವ ಮೂಲಕ ತನ್ನ ಕನಸನ್ನು ಸಾಕಾರಗೊಳಿಸಿದರು.

**ಅಕ್ಷರ ಸೇವೆಯ ಕನಸಿನಲ್ಲಿ**

೯೦ರ ದಶಕದ ಸುಡುಬೇಸಿಗೆಯ ದಿನಗಳಲ್ಲಿ ಹಾಜಬ್ಬ ಎಂದಿನಂತೆ ತನ್ನ ವ್ಯಾಪಾರದಲ್ಲಿ ತಲ್ಲೀನರಾಗಿದ್ದರು. ಹಾಜಬ್ಬರ ಬಳಿ ಬಂದ ಬಿಳಿದೊಗಲಿನ ವಿದೇಶೀ ಪ್ರವಾಸಿಗ ಜೋಡಿಯೊಂದು, "How much for oranges ?" ಎಂದು ಪ್ರಶ್ನಿಸಿತು. ಇಂಗ್ಲಿಷ್ ಬಿಡಿ, ಕನ್ನಡ ಅಕ್ಷರ ಮಾಲೆಯ ಪರಿಚಯವೂ ಇಲ್ಲದ ಹಾಜಬ್ಬ ಸಹಜವಾಗಿಯೇ ನಿರುತ್ತರರಾದರು. ಇಂದು ತನಗಾದ ಮುಜುಗರ ತನ್ನ ಹಳ್ಳಿಯ ಮುಂದಿನ ಪೀಳಿಗೆಗೆ ಆಗಲೇಕೂಡದು ಎಂದು ನಿರ್ಧರಿಸಿದ ಹಾಜಬ್ಬ ಮರುಕ್ಷಣದಿಂದಲೇ ತನ್ನ ಹಳ್ಳಿಗೊಂದು ಶಾಲೆಯಾಗಬೇಕು ಎಂಬ ಕನಸಿನ ಬೆನ್ನೇರಿಬಿಟ್ಟರು. ತನ್ನ ಮಹತ್ವಾಕಾಂಕ್ಷೆಯನ್ನು ಸಹವ್ಯಾಪಾರಿಗಳಲ್ಲಿ, ಊರಿನ ಗೆಳೆಯರಲ್ಲಿ ಹೇಳಿಕೊಂಡರು. ಕೇಳಿಸಿಕೊಂಡವರು ಹಾಜಬ್ಬನಿಗೆ ಮತಿಭ್ರಮಣೆಯಾಗಿದೆ ಎಂದು ಗೇಲಿಮಾಡಿ ನಗತೊಡಗಿದರು. ತನ್ನ ಕನಸನ್ನು ಕಾರ್ಯಗತಗೊಳಿಸುವ ನಿಟ್ಟಿನಲ್ಲಿ ಎಂದೂ ಸರಕಾರಿ ಕಛೇರಿಗಳಿಗೆ ಕಾಲಿಟ್ಟೂ ಗೊತ್ತಿಲ್ಲದ ಹಾಜಬ್ಬ ಜಿಲ್ಲಾಧಿಕಾರಿ ಕಛೇರಿ, ಕ್ಷೇತ್ರ ಶಿಕ್ಷಣಾಧಿಕಾರಿ ಕಛೇರಿ ಎಂದು ಕಛೇರಿಯಿಂದ ಕಛೇರಿಗೆ ಅಲೆಯತೊಡಗಿದರು. ಅಲ್ಲೆಲ್ಲಾ ಹಾಜಬ್ಬರನ್ನು ಯಾವ ನರಪಿಳ್ಳೆಯೂ ಮಾತನಾಡಿಸುತ್ತಿರಲಿಲ್ಲ. ಅಪ್ಪಟ ಫಕೀರನಂತೆ ಕಾಣುವ ಹಾಜಬ್ಬರು ಕಛೇರಿಗಳ ಕಾರಿಡಾರ್‌ಗಳಲ್ಲಿ ಆಚೀಚೆ ನಡೆದಾಡುವ ಯಾರನ್ನಾದರೂ ಮಾತನಾಡಿಸುವ ಪ್ರಯತ್ನ ಮಾಡಿದರೆ ಅವರೆಲ್ಲಾ ಭಿಕ್ಷುಕನನ್ನು ಕಂಡಂತೆ ದೂರಸರಿಯುತ್ತಿದ್ದರು. ಕಛೇರಿಗಳ ಒಳಪ್ರವೇಶಿಸಿ ಅಧಿಕಾರಿಗಳ ಜೊತೆ ಮಾತನಾಡಬೇಕೆಂದರೆ ಅವರಿಗೆ ಪ್ರವೇಶ ನಿರಾಕರಿಸಲಾಗುತ್ತಿತ್ತು. ಮಾತ್ರವಲ್ಲ, ವೈಟ್‌ಕಾಲರ್ ಮಂದಿಗಳ ಮೂದಲಿಕೆ-ಬೈಗುಳಗಳಿಗೂ ಗುರಿಯಾಗಬೇಕಿತ್ತು.

ಹೀಗೆ ಹಾಜಬ್ಬರ ಹಗಲಿನ ಸಮಯವೆಲ್ಲವೂ ಸರಕಾರಿ ಕಛೇರಿಗಳಿಗೆ ಅಲೆಯುವುದರಲ್ಲಿಯೇ ಮುಗಿದುಹೋಗುತ್ತಿತ್ತು. ಇದರಿಂದ ಮೂರು ಹೊತ್ತಿಗೆ ಉಣ್ಣುತ್ತಿದ್ದ ಹಾಜಬ್ಬರ ಕುಟುಂಬ ಒಂದು ಹೊತ್ತಿಗೆ ಹಸಿವು ಕಟ್ಟಲೇಬೇಕಾಯಿತು. ಹಾಜಬ್ಬರ ಪತ್ನಿ ಮೈಮುನಾ ಸುತ್ತುತ್ತಿದ್ದ ಬೀಡಿಯಿಂದಾಗಿ ಎರಡು ಹೊತ್ತಿಗೆ ಒಂದಿಷ್ಟು ಗಂಜಿನೀರು ಕುಡಿಯಲು ಸಾಧ್ಯವಾಗುತ್ತಿತ್ತು.

**ನನಸಾದ ಕನಸು**

ಅದೊಂದು ಸುದಿನ... ತನ್ನ ಪಕ್ಕದ ಹಳ್ಳಿಯವರಾದ ಸ್ಥಳೀಯ ಜಿಲ್ಲಾ ಪಂಚಾಯತ್ ಸದಸ್ಯ ಅಝೀಜ್ ಮಲಾರ್ ಎದುರ್ಗೊಂಡಾಗ ಹಾಜಬ್ಬ ಅವರಿಗೆ ದುಂಬಾಲುಬಿದ್ದರು. ಹಾಜಬ್ಬರ ನೈಜ ಕಾಳಜಿಯನ್ನರಿತ ಮಲಾರ್ ಜಿಲ್ಲಾ ಪಂಚಾಯತ್‌ನಲ್ಲಿ ವಿಷಯ ಪ್ರಸ್ತಾಪಿಸಿದರು. ಹಾಗೂ ಹೀಗೂ ಶಾಲೆಗೆ ಅನುಮತಿ ಸಿಕ್ಕಿತು. ೧೯೯೯ ಜೂನ್, ೬ರಂದು ಸ್ಥಳೀಯ ತ್ವಾಹಾ ಮಸೀದಿಯ ಮದ್ರಸದಲ್ಲಿ ತಾತ್ಕಾಲಿಕ ಶಾಲೆ ಆರಂಭಿಸುವುದರೊಂದಿಗೆ ಹಾಜಬ್ಬರ ಕನಸು ನನಸಾಯಿತು.

ಶಾಲೆಯೇನೋ ಮಂಜೂರಾಗಿ ಉದ್ಘಾಟನೆಯೂ ಆಯಿತು. ಇನ್ನು ಆದಷ್ಟು ಬೇಗ ಶಾಲೆಗೊಂದು ಸ್ವಂತ ಕಟ್ಟಡವಾಗಬೇಕು. ಹಾಜಬ್ಬರು ಮತ್ತೆ ಚಪ್ಪಲಿ ಸವೆಸಲಾರಂಭಿಸಿದರು. ಉಳ್ಳವರ ಮನೆ ಕಛೇರಿ ಬಾಗಿಲಿಗೆ ಎಡತಾಕತೊಡಗಿದರು. ಸಾರ್ವಜನಿಕ ಬದುಕಿನಲ್ಲಿ ಹಾಜಬ್ಬರ ಕಡುಕಷ್ಟದ, ನಿರಂತರ ಅವಮಾನ ಮೂದಲಿಕೆಗಳಿಗೆ ಗುರಿಯಾಗುವ ದಿನಗಳು ಇಲ್ಲಿಂದಲೇ ಪ್ರಾರಂಭವಾಗುತ್ತವೆ. ಶಾಲೆ ನಿರ್ಮಾಣಕ್ಕಾಗಿ ಚಂದಾ ಎತ್ತಲು ಉಳ್ಳವರ ಕಛೇರಿ, ಮನೆಬಾಗಿಲಿಗೆ ಹೋದಾಗಲೆಲ್ಲಾ ಹಾಜಬ್ಬರಿಗಾದ ಅವಮಾನದ ಒಂದೆರಡು ಸ್ಯಾಂಪಲ್‌ಗಳು ಇಂತಿವೆ :

* ''ಹೊಟ್ಟೆ ಹೊರೆಯಲು, ಮೈಮುರಿದು ದುಡಿಯಲು ನಿನಗೇನು ಧಾಡಿ ? ಶಾಲೆಯ ಹೆಸರಿನಲ್ಲಿ ಭಿಕ್ಷಾಟನೆ ಮಾಡಲು ನಾಚಿಕೆಯಾಗೋದಿಲ್ವಾ'' ಎಂದು ಹಲವಾರು ಬಾರಿ ಜನರಿಂದ ಮೂದಲಿಸಿಕೊಂಡದ್ದೂ ಇದೆ.
* ಒಬ್ಬ ಶ್ರೀಮಂತನ ಮನೆಯ ಕಾವಲುಗಾರ ದೊಣ್ಣೆ ಹಿಡಿದು ಅಟ್ಟಿಸಿದ...
* ಇನ್ನೊಬ್ಬ ಶ್ರೀಮಂತ ನಾಯಿಗಳನ್ನು ಹಾಜಬ್ಬರತ್ತ ಛೂಬಿಟ್ಟು ಓಡಿಸಿದ...
* ಅನೇಕ ಉಳ್ಳವರು ಇಪ್ಪತ್ತೈದು ಪೈಸೆ, ಐವತ್ತು ಪೈಸೆ ಎಸೆದು ಮುಂದಕ್ಕಟ್ಟಿದರು. ಆದರೂ ಹಾಜಬ್ಬ ವಿಚಲಿತರಾಗಲಿಲ್ಲ, ತನ್ನ ಬದ್ಧತೆಯಿಂದ ಹಿಂದೆ ಸರಿಯಲಿಲ್ಲ.

ನ್ಯೂಪಡ್ಪು ತ್ವಾಹಾ ಮಸೀದಿಯಿಂದ ಎರಡು ಫರ್ಲಾಂಗ್ ದೂರದಲ್ಲಿ ಖಾಸಗಿ ವ್ಯಕ್ತಿಯೊಬ್ಬರಿಂದ ೪೦ ಸೆಂಟ್ಸ್ ಸರಕಾರಿ ಜಾಗ ಅತಿಕ್ರಮಿಸಲ್ಪಟ್ಟಿತ್ತು. ಅದು ಯಾರದ್ದೇ ಪಟ್ಟಾ ಜಾಗವಲ್ಲ ಎಂಬುದನ್ನು ಖಾತರಿಪಡಿಸಿಕೊಂಡ ಹಾಜಬ್ಬರು ಅದನ್ನು ಶಾಲೆಗಾಗಿ ಕೊಡಿಸಬೇಕೆಂದು ಸರಕಾರಿ ಕಛೇರಿಗಳಿಗೆ ಅಲೆಯತೊಡಗಿದರು. ಹಾಜಬ್ಬರು ಶಾಲೆಗಾಗಿ ಬಯಸಿದ್ದ ಜಾಗವನ್ನು ಪುಗಸಟ್ಟೆ ಕೊಡಿಸಿ ಎಂದು ಮನವಿ ಮಾಡುತ್ತಿರಲಿಲ್ಲ. ಅತಿಕ್ರಮಿಸಿದ್ದ ವ್ಯಕ್ತಿಗೆ ದುಡ್ಡು ಕೊಟ್ಟೇ ಜಾಗ ಖರೀದಿಸಬಯಸಿದ್ದರು. ಆದರೂ ಅದು ಸರಕಾರಿ ಜಾಗವಾದುದರಿಂದ ಸಂಬಂಧಿತ ದಾಖಲೆಗಳನ್ನು ಸರಿಪಡಿಸಿದ ಬಳಿಕವಷ್ಟೇ ಕಟ್ಟಡ ನಿರ್ಮಿಸಲು ಸಾಧ್ಯ. ಈ ನಿಟ್ಟಿನಲ್ಲಿ ಸರಕಾರಿ ಕಛೇರಿಗಳಿಗೆ ಅಲೆಯುವುದು ಅನಿವಾರ್ಯವಾಗಿತ್ತು. ಹಾಜಬ್ಬರ ಪ್ರಯತ್ನ ಕೊನೆಗೂ ಫಲಿಸಿತು.

೫೫,೦೦೦/- ರೂಪಾಯಿನಷ್ಟು ಬೆಲೆ ನಿಗದಿಯಾಯಿತು. ತನ್ನ ಹಳ್ಳಿಗೆ ಶಾಲೆಯಾಗಬೇಕೆಂಬ ಕನಸು ಕುಡಿಯೊಡೆದಂದಿನಿಂದ ಹಾಜಬ್ಬ ತನ್ನ ಅಲ್ಪ ದುಡಿಮೆಯ ಆದಾಯದಲ್ಲಿ ಒಂದು ಪಾಲನ್ನು ಶಾಲೆಗಾಗಿ ಉಳಿತಾಯ ಮಾಡುತ್ತಾ ಬಂದರು. ಹಾಗೆ ಹೊಟ್ಟೆ ಕಟ್ಟಿ ಉಳಿತಾಯ ಮಾಡಿದ ಮೊತ್ತ ೩೦,೦೦೦/- ರೂಪಾಯಿಗಳಾಗಿತ್ತು. ಮೂವತ್ತು ಸಾವಿರ ರೂಪಾಯಿಗಳನ್ನು ಮುಂಗಡ ನೀಡಿದರು. ಇನ್ನುಳಿದ ದುಡ್ಡಿಗಾಗಿ ಮತ್ತೆ ಉಳ್ಳವರ ಬೆನ್ನು ತಾಗಿದರು. ಹಾಜಬ್ಬರ ಅಕ್ಷರ ಸೇವೆಯ ಕನಸನ್ನರಿತ ಮಂಗಳೂರಿನ ಪ್ರಸಿದ್ಧ ಮಹಿಳಾ ಸೂಫಿ ಸೈದಾನಿ ಬೀಬಿ ದರ್ಗಾ ಸಮಿತಿಯ ಅಧ್ಯಕ್ಷ ಶಾಫಿ ಶಮ್ನಾಡ್



*ಹಾಜಬ್ಬರ ಸಮಾಜ ಸೇವಕ ಮಿತ್ರ ಬಳ್ಳಾರಿಯ ಸಿದ್ದಬಸಪ್ಪ ಹಾಜಬ್ಬರ ಶಾಲೆಗೆ ಭೇಟಿ ನೀಡಿದಾಗ*

೫,೦೦೦/- ರೂಪಾಯಿ ದೇಣಿಗೆ ನೀಡಿದರು. ಇದು ಹಾಜಬ್ಬ ಪಡೆದ ಮೊದಲ ದೇಣಿಗೆ. ಆ ಬಳಿಕ ಧರ್ಮಸ್ಥಳದ ಧರ್ಮಾಧಿಕಾರಿ ವೀರೇಂದ್ರ ಹೆಗ್ಗಡೆ, ಉಳ್ಳಾಲ ದರ್ಗಾ ಸಮಿತಿ ಹೀಗೆ ಕೆಲವರು ಹಾಜಬ್ಬರ ನೆರವಿಗೆ ನಿಂತರು. ದಾನಿಗಳಿಂದ ನೆರವು ಪಡೆದು ಶಾಲೆಯ ಭೂಮಿಯನ್ನು ಋಣಮುಕ್ತಗೊಳಿಸಿದರಾದರೂ ಬೋರಲು ಗುಡ್ಡವಾಗಿದ್ದ ಆ ಜಾಗವನ್ನು ಸಪಾಟುಗೊಳಿಸಲು ಆ ಜಾಗಕ್ಕೆ ನೀಡಿದ್ದ ಬೆಲೆಯಷ್ಟೇ ದುಡ್ಡು ಬೇಕು. ಜೆ.ಸಿ.ಬಿ. ಯಂತ್ರ ಹೊಂದಿರುವ ಉದ್ಯಮಿಗಳ ಬಳಿಗೆ ತೆರಳಿ ನೆರವು ಯಾಚಿಸಿದರು. ಮಂಗಳೂರಿನ ಪ್ರಸಿದ್ಧ ಉದ್ಯಮಿ ಕುಂಞ ಅಹ್ಮದ್ ಹಾಜಿ ಉಚಿತವಾಗಿ ಜೆ.ಸಿ.ಬಿ. ಯಂತ್ರ ನೀಡಿದರು. ಆ ಬಳಿಕ ಅಂದಿನ ಶಾಸಕ ಯು. ಟಿ. ಫರೀದ್‌ರ ಬಳಿ ತೆರಳಿ ಕೊಠಡಿ ಮಂಜೂರಾತಿ ಮಾಡಿಸುವಂತೆ ಕೋರಿದರು. ಸರ್ವ ಶಿಕ್ಷಾ ಅಭಿಯಾನ ಯೋಜನೆಯಡಿ ಎರಡು ಕೊಠಡಿಗಳು ಮಂಜೂರಾಗಿ ನಿರ್ಮಾಣವೂ ಆಯಿತು. ಶಾಲೆಯನ್ನು ಸ್ಥಳಾಂತರಿಸಿದ್ದೂ ಆಯಿತು. ಅಧ್ಯಾಪಕರಿಗೆ ಕುಳಿತುಕೊಳ್ಳಲು ಮೇಜು ಕುರ್ಚಿಗಳನ್ನು ತನ್ನ ಕಿಸೆಯಿಂದಲೇ ದುಡ್ಡು ಕೊಟ್ಟು ಹಾಜಬ್ಬ ತಂದರು. ಮಕ್ಕಳನ್ನು ಕುಳ್ಳಿರಿಸಲು ಬೆಂಚು ತರಲು ಅವರ ಕಿಸೆ ಖಾಲಿಯಾಗಿಬಿಟ್ಟಿತ್ತು. ಕೆಲವು ಚಾಪೆಗಳನ್ನು ತಂದು ನೆಲದ ಮೇಲೆ ಹಾಸಿದರು. ಮಧ್ಯಾಹ್ನದ ಬಿಸಿಯೂಟಕ್ಕೆ ಬೇಕಾದ ಪಾತ್ರೆ, ಪಗಡಿಗಳನ್ನು ಮತ್ತು ಕಡೆಯುವ ಕಲ್ಲನ್ನು ಹಾಜಬ್ಬ ತನ್ನ ಮನೆಯಿಂದಲೇ ತಂದರು.

ನಿರಂತರವಾಗಿ ದಾನಿಗಳ ತಲಾಶೆಯಲ್ಲೇ ತೊಡಗಿದ ಹಾಜಬ್ಬ ಹಂತ ಹಂತವಾಗಿ ಶಾಲೆಗೆ ಕೊಠಡಿ, ಕಂಪ್ಯೂಟರ್, ಪೀಠೋಪಕರಣಗಳನ್ನು ದಾನಿಗಳ ನೆರವಿನಿಂದ ಕೊಡಿಸುತ್ತಾ ಶಾಲೆಯನ್ನು ಬೆಳೆಸಿದರು.

ಶಿಕ್ಷಕರನ್ನು ನೇಮಿಸಲು ಹಾಜಬ್ಬ ಶಾಸಕರ, ಮಂತ್ರಿಗಳ ಬೆನ್ನಿಗೆ ಬೀಳುತ್ತಿದ್ದರು. ಮಂತ್ರಿಗಳನ್ನು ಭೇಟಿಯಾಗಲು ಹೋದಾಗಲೆಲ್ಲಾ ಅನೇಕ ಬಾರಿ ಅವರ ಆಪ್ತ ಕಾರ್ಯದರ್ಶಿಗಳಿಂದ, ಪುಢಾರಿಗಳಿಂದ, ಅಂಗರಕ್ಷಕರಿಂದ ಹೊರದಬ್ಬಿಸಲ್ಪಟ್ಟರು. ಎಷ್ಟೇ ಅವಮಾನವಾದರೂ ಧೃತಿಗೆಡದೆ ಮರಳಿ ಯತ್ನಿಸುತ್ತಿದ್ದರು.

ಶಾಲೆಯ ಕೆಲಸಗಳಿಂದಾಗಿ ತಿರುಗಾಡುವಾಗಲೆಲ್ಲಾ ಹಾಜಬ್ಬ ತನ್ನ ಜೇಬಿನಿಂದಲೇ ಖರ್ಚುಮಾಡುತ್ತಿದ್ದರು. ಶಾಲೆಗೆ ದಾನವೆಂದು ಯಾರಾದರೂ ಐದು ರೂಪಾಯಿ ನೀಡಿದರೂ ಹಾಜಬ್ಬ ತಿರಸ್ಕರಿಸುವುದಿಲ್ಲ. ಕೆಲವು ಬೀಡಿ ಕಾರ್ಮಿಕರು, ಕೂಲಿ ಕಾರ್ಮಿಕರು, ಚಿಕ್ಕ ಆದಾಯದ ಶ್ರಮಿಕರು ಹಾಜಬ್ಬರ ಕೆಲಸದಿಂದ ಪ್ರೇರಿತರಾಗಿ ತಮ್ಮ ಕೈಲಾದ ಸಹಾಯವನ್ನು ನೀಡುತ್ತಿದ್ದರು. ಹಾಜಬ್ಬ ಎಲ್ಲವನ್ನೂ ಕೃತಜ್ಞಾಪೂರ್ವಕವಾಗಿ ಸ್ವೀಕರಿಸುತ್ತಾರೆ.

**ಕಿತ್ತಳೆಯ ಬುಟ್ಟಿಯಲ್ಲಿ ಅರಳಿದ ಅಕ್ಷರದ ಕನಸುಗಳು**

೨೦೦೪ರ ಸೆಪ್ಟೆಂಬರ್, ೧೬ ಹಾಜಬ್ಬ ಎಂಬ ಅಪ್ರತಿಮ, ಸಮಾಜಸೇವಕ ರಾಜ್ಯಕ್ಕೆ ಪರಿಚಯವಾದ ದಿನ. 'ಹೊಸದಿಗಂತ' ಪತ್ರಿಕೆಯಲ್ಲಿ ಮಂಗಳೂರಿನ ಪತ್ರಕರ್ತ ಗುರುವಪ್ಪ ಬಾಳೆಪುಣೆಯವರು ಬರೆದ 'ಕಿತ್ತಳೆಯ ಬುಟ್ಟಿಯಲ್ಲಿ ಅರಳಿದ ಅಕ್ಷರದ ಕನಸುಗಳು' ಎಂಬ ವ್ಯಕ್ತಿಚಿತ್ರವನ್ನು ಕನ್ನಡದ ಓದುಗರು ಬೆರಗುಗಣ್ಣಿನಲ್ಲಿ ಓದಿದರು. ಆ ಬಳಿಕ ಗುರುವಪ್ಪ ಹಾಜಬ್ಬರಿಗೆ ಬೆಂಗಾವಲಾಗಿ ನಿಂತರು. ಅದೇ ವರ್ಷದ ಜಿಲ್ಲಾ ರಾಜ್ಯೋತ್ಸವ ಪ್ರಶಸ್ತಿಯೂ ಹಾಜಬ್ಬರಿಗೆ ಒಲಿದುಬಂತು. ಇದಾಗಿ ಇನ್ನೊಂದು ತಿಂಗಳು ತುಂಬಬೇಕೆನ್ನುವಷ್ಟರಲ್ಲಿ 'ಕನ್ನಡ ಪ್ರಭ' ೨೦೦೪ರ ವರ್ಷದ ವ್ಯಕ್ತಿ ಪ್ರಶಸ್ತಿಯ ಕುರಿತಂತೆ ವರದಿಯೊಂದು ಪ್ರಕಟವಾಗಿತ್ತು. ಗುರುವಪ್ಪ ಮತ್ತು ಹಿರಿಯ ಪತ್ರಕರ್ತ ಚಿದಂಬರ ಬೈಕಂಪಾಡಿ ಹಾಜಬ್ಬರನ್ನು ಸ್ಪರ್ಧಿಯಾಗಿಸಿದರು. ಯು. ಆರ್. ಅನಂತಮೂರ್ತಿ, ಬರಗೂರು ರಾಮಚಂದ್ರಪ್ಪ, ರಂಗ ನಿರ್ದೇಶಕಿ ಅರುಂಧತಿ ನಾಗ್ ಮುಂತಾದವರಿದ್ದ ತೀರ್ಪುಗಾರರ ತಂಡಕ್ಕೆ ಹಾಜಬ್ಬರನ್ನು ಆಯ್ಕೆಮಾಡುವ ಹೊರತಾಗಿ ಅನ್ಯ ದಾರಿ ಕಾಣಲೇ ಇಲ್ಲ. ದೊಡ್ಡ ದೊಡ್ಡವರ ದೊಡ್ಡ ಸಾಧನೆಗಳನ್ನು ಈ ನಿರಕ್ಷರಕುಕ್ಷಿ ಮಹಾತ್ಮನ ಸಾಧನೆ ಮಸುಕಾಗಿಸಿತು.

'ಕನ್ನಡ ಪ್ರಭ' ವರ್ಷದ ವ್ಯಕ್ತಿ ಪ್ರಶಸ್ತಿಯಿಂದಾಗಿ ಓರ್ವ ಅತೀ ಸಾಮಾನ್ಯ ಅನಕ್ಷರಸ್ಥ, ಬಡ ಕಿತ್ತಳೆ ವ್ಯಾಪಾರಿ ಹಾಜಬ್ಬ ಕರ್ನಾಟಕದಾದ್ಯಂತ ಮನೆಮಾತಾದರು. ಮನೆಮನೆಗಳಲ್ಲೂ ಹಳ್ಳಿ ಹಳ್ಳಿಗಳಲ್ಲೂ ಊರ ಕಟ್ಟೆಗಳಲ್ಲೂ ಹಾಜಬ್ಬ ಚರ್ಚೆಯ ವಸ್ತುವಾದರು. ಪಕ್ಕದ ಕೇರಳ, ತಮಿಳುನಾಡು, ಆಂಧ್ರಪ್ರದೇಶದ ಪತ್ರಿಕೆಗಳಲ್ಲೂ ಹಾಜಬ್ಬರ ಕುರಿತಂತೆ ಬರಹಗಳು, ವ್ಯಕ್ತಿಚಿತ್ರಗಳು ಪ್ರಕಟವಾದವು. ರಾಷ್ಟ್ರಮಟ್ಟದ ಆಂಗ್ಲಮಾಧ್ಯಮಗಳೂ ಹಾಜಬ್ಬರ ಯಶೋಗಾಥೆಯನ್ನು ಬರೆದವು. ವಿವಿಧ ಸಂಘಸಂಸ್ಥೆಗಳು ಹಾಜಬ್ಬರನ್ನು ಕರೆಸಿ ಸನ್ಮಾನ ಮಾಡತೊಡಗಿದವು. ಹಾಜಬ್ಬ ಯಾವುದೇ ಸನ್ಮಾನವನ್ನು ನಿರಾಕರಿಸುವುದಿಲ್ಲ, ಯಾಕೆಂದರೆ ಸನ್ಮಾನದೊಂದಿಗೆ ಸ್ವಲ್ಪ ನಗದನ್ನೂ ನೀಡುತ್ತಾರೆ. ಅದರಿಂದ ಶಾಲೆಯ ಚಿಕ್ಕಪುಟ್ಟ ಅಗತ್ಯತೆಗಳಾದ ಪಾತ್ರೆ ಪಗಡಿ, ಪೀಠೋಪಕರಣಗಳು, ವಿದ್ಯುತ್ ಉಪಕರಣಗಳು, ಲೇಖನ ಸಾಮಗ್ರಿಗಳನ್ನು ಖರೀದಿಸುತ್ತಾರೆ. ಸನ್ಮಾನಿಸಿ ತನಗೆಂದು ನೀಡಿದ ದುಡ್ಡಿನಲ್ಲಿ ಹಾಜಬ್ಬ ನಯಾಪೈಸೆಯನ್ನೂ ಸ್ವಂತಕ್ಕೆ ಬಳಸಿಕೊಳ್ಳುವುದಿಲ್ಲ.

'ಕನ್ನಡ ಪ್ರಭ' ವರ್ಷದ ವ್ಯಕ್ತಿ ಪ್ರಶಸ್ತಿ ವೈಯಕ್ತಿಕವಾಗಿ ಹಾಜಬ್ಬರಿಗೆ ಹೆಸರು ತಂದು ಕೊಟ್ಟದ್ದಲ್ಲದೆ ಅವರ ಶಾಲೆಯ ಅಭಿವೃದ್ಧಿಗೂ ಕಾರಣವಾಯಿತು. ಆ ಬಳಿಕ ಹಾಜಬ್ಬರು ಶಾಲೆಗೆಂದು ದೇಣಿಗೆ ಕೇಳಲು ಹೋದರೆ ದಾನಿಗಳು ಹಿಂದೆ ಮುಂದೆ ಯೋಚಿಸದೆ ನೀಡಲಾರಂಭಿಸಿದರು. ಹಾಜಬ್ಬರ ಪ್ರಾಮಾಣಿಕತೆಯ ಪರಿಚಯವೂ ನಾಡಿಗಾಗಿತ್ತು. ಹಾಜಬ್ಬ ತನ್ನ ಶಾಲೆಯ ಅಗತ್ಯತೆಗಳನ್ನು ಜನಪ್ರತಿನಿಧಿಗಳ ಮುಂದಿಟ್ಟಾಗ ಅವರನ್ನು ಕಡೆಗಣಿಸಲು ಸಾಧ್ಯವಾಗದಾಯಿತು. ಶಾಲೆಯ ಅಭಿವೃದ್ಧಿಯ ವೇಗವೂ ಹೆಚ್ಚಿತು. ಹಾಜಬ್ಬ ಇನ್ನಷ್ಟು ಕನಸುಗಳೊಂದಿಗೆ ಮುನ್ನಡೆಯಲಾರಂಭಿಸಿದರು. ತನ್ನೂರಿಗೆ ಪ್ರೌಢಶಾಲೆಯನ್ನೂ ತಂದರು.

**ರಿಯಲ್ ಹೀರೋ ಪ್ರಶಸ್ತಿ**

ಹಾಜಬ್ಬರ ಯಶೋಗಾಥೆ ದೇಶದಾದ್ಯಂತ ಮನೆಮಾತಾಯಿತು. ಸಮಾಜಸೇವಾ ಕ್ಷೇತ್ರದಲ್ಲಿ ಅವರು ಓರ್ವ ಐಕಾನ್ ಆಗಿಬಿಟ್ಟರು. ದೇಶದ ಪ್ರತಿಷ್ಠಿತ ಮಾಧ್ಯಮ ಸಂಸ್ಥೆ ಸಿಎನ್‌ಎನ್-ಐಬಿಎನ್ ಮತ್ತು ರಿಲಯನ್ಸ್ ಉದ್ಯಮ ಸಂಸ್ಥೆಗಳು ೨೦೦೮ರಲ್ಲಿ ತಳಮಟ್ಟದ ನಿಸ್ವಾರ್ಥ ಸಮಾಜ ಸೇವೆಯ ಮೂಲಕ ಇತರರಿಗೆ ಮಾದರಿಯಾದವರನ್ನು ಗುರುತಿಸಿ 'ದಿ ರಿಯಲ್ ಹೀರೋ' ಎಂಬ ಪ್ರಶಸ್ತಿ ನೀಡಲು ತೀರ್ಮಾನಿಸಿದ್ದವು. ದೇಶದಾದ್ಯಂತ ವಿವಿಧ ಮೂಲಗಳಲ್ಲಿ ಸಮೀಕ್ಷೆ ನಡೆಸಿ ವಿವಿಧ ಕ್ಷೇತ್ರಗಳಿಂದ ೨೪ ಮಂದಿಯನ್ನು ಆಯ್ಕೆಮಾಡಿತು. ಆ ೨೪ ಮಂದಿಯಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ಅಪರೂಪದ ಸೇವೆ ಸಲ್ಲಿಸಿದ ವ್ಯಕ್ತಿಯಾಗಿ ಹಾಜಬ್ಬ 'ರಿಯಲ್ ಹೀರೋ' ಪ್ರಶಸ್ತಿಗೆ ಆಯ್ಕೆಯಾದರು. ಇಂತಹ ಸುದ್ದಿ ಟಿ.ವಿ. ಮಾಧ್ಯಮಗಳಲ್ಲಿ ಪ್ರಸಾರವಾದ ಮರುಕ್ಷಣ ಮಂಗಳೂರಿನ ಪತ್ರಕರ್ತರು ಕ್ಯಾಮೆರಾ ಹಿಡಿದು ಹಾಜಬ್ಬ ಹಣ್ಣಿನ ಬುಟ್ಟಿಯಿಂದ ಹಣ್ಣುಗಳನ್ನು ತೆಗೆದು ಗ್ರಾಹಕರಿಗೆ ನೀಡುತ್ತಿದ್ದ ಚಿತ್ರಗಳನ್ನು ತೆಗೆದರು.

**ಪ್ರಶಸ್ತಿಯ ಮೊತ್ತವನ್ನೆಲ್ಲಾ ಶಾಲೆಗೆ ಸುರಿದ ಹಾಜಬ್ಬ**

ಹಾಜಬ್ಬರ ವ್ಯಕ್ತಿತ್ವಕ್ಕೆ ಮತ್ತಷ್ಟು ಮೆರುಗು ಬರುವುದೇ ಇಲ್ಲಿಂದ. 'ರಿಯಲ್ ಹೀರೋ' ಪ್ರಶಸ್ತಿಯೊಂದಿಗೆ ೫ ಲಕ್ಷ ರೂಪಾಯಿ ನಗದು ಬಹುಮಾನವೂ ಬಂತು. ಹಾಜಬ್ಬ ಅದೆಲ್ಲವನ್ನೂ ಅನಾಮತ್ತಾಗಿ ಶಾಲೆಗೆ ಸುರಿದುಬಿಟ್ಟರು. ಶಾಲೆಗೆ ಆಟದ ಮೈದಾನವೊಂದರ ಅಗತ್ಯವಿತ್ತು. ಶಾಲೆಯ ಪಕ್ಕದಲ್ಲೇ ಇದ್ದ ೫೨ ಸೆಂಟ್ಸ್ ಜಾಗವನ್ನು ಖರೀದಿಸಿ ಶಾಲೆಗೊಂದು ಸುಸಜ್ಜಿತ ಮೈದಾನ ನಿರ್ಮಿಸಿದರು. ಇದರಲ್ಲಿ ಅಚ್ಚರಿ ಎಂದರೆ ಹಾಜಬ್ಬರ ಮನೆಗೆ ಇನ್ನೂ ವಿದ್ಯುತ್ ಸಂಪರ್ಕವಿರಲಿಲ್ಲ. ಮನೆಯ ಮೇಲ್ಛಾವಣಿಯ ಪಕ್ಕಾಸು, ರೀಪುಗಳು ಗೆದ್ದಲು ತಿಂದು ಇಂದೋ, ನಾಳೆಯೋ ಕುಸಿಯುವಂತಹ ಸ್ಥಿತಿ. ಮಳೆ ಬಂದರೆ ಅವರ ಮನೆಯೊಳಗೆ ನೀರು ಸೋರದ ಜಾಗವೇ ಇಲ್ಲ. ಮನೆಯಲ್ಲಿ ಬೆಳೆದು ನಿಂತ ಹೆಣ್ಣುಮಗಳಿದ್ದಳು. ಹಾಜಬ್ಬರಿಗೆ ಅದ್ಯಾವುದೂ ನೆನಪಿಗೆ ಬರಲಿಲ್ಲ. ಅವರಿಗೆ ನೆನಪಿಗೆ ಬಂದದ್ದು ತನ್ನ ಶಾಲೆ ಮಾತ್ರ. ಹಾಜಬ್ಬರ ಗುಡಿಸಲನ್ನು ಸುಮಾರು ೮೫,೦೦೦/- ರೂಪಾಯಿ ಖರ್ಚುಮಾಡಿ ಮಂಗಳೂರಿನ ಪ್ರಸಿದ್ಧ ಉದ್ಯಮಿ ಹಾಗೂ ಸಮಾಜ ಸೇವಕ ಅಬ್ದುರ್ರವೂಫ್ ಪುತ್ತಿಗೆ ಒಂದು ಪುಟ್ಟ ಮನೆಯ ರೂಪ ಕೊಡಿಸಿದ್ದು ಹಾಜಬ್ಬರಿಗೆ 'ರಿಯಲ್ ಹೀರೋ' ಪ್ರಶಸ್ತಿ ಒಲಿದ ಬಳಿಕವೇ. ೨೦೦೯ರ

ಕ್ರಿಸ್‌ಮಸ್ ಹಬ್ಬದ ಅಂಗವಾಗಿ ಪಜೀರು ಚರ್ಚಿನ ಅಧೀನದ ಸೈಂಟ್ ವಿನ್ಸೆಂಟ್ ಪಾಲ್ ಸಮಾಜ ಸೇವಾ ಸಂಸ್ಥೆಯವರು ಹಾಜಬ್ಬರ ಮನೆಗೆ ವಿದ್ಯುತ್ ಸಂಪರ್ಕ ಕೊಡಿಸಿದರು.

ಹಾಜಬ್ಬರಿಗೆ ಸಂದ ಪ್ರಶಸ್ತಿ, ಗೌರವ, ಸಮ್ಮಾನಗಳು ಸುಮಾರು ೮೦. ಅವುಗಳಲ್ಲಿ ಪ್ರಮುಖವಾದುವು ಕರ್ಣಾಟಕ ಬ್ಯಾರಿ ಸಾಹಿತ್ಯ ಅಕಾಡೆಮಿಯ 'ಅಕ್ಕರದ ಅವಧೂತ' ಬಿರುದು, ಮಂಗಳೂರಿನ ಜೆ.ಎಫ್.ಎ. ಸಂಸ್ಥೆಯ ಅಕ್ಷರ ಸಂತ ಬಿರುದು, ಯೆನೆಪೋಯಾ ವಿಶ್ವವಿದ್ಯಾನಿಲಯದ 'ಯೆನೆಪೋಯಾ ಎಕ್ಸಲೆನ್ಸಿ ಅವಾರ್ಡ್', ಸಂದೇಶ ಪ್ರತಿಷ್ಠಾನದ 'ಸಂದೇಶ ಪ್ರಶಸ್ತಿ', ಬ್ಯಾರೀಸ್ ವೆಲ್ಫೇರ್ ಅಸೋಸಿಯೇಶನ್‌ನ 'ವರ್ಷದ ಬ್ಯಾರಿ-೨೦೦೬', ರಂಗಾಯಣದ ಬಿ. ವಿ. ಕಾರಂತ ರಂಗ ಉತ್ಸವದಲ್ಲಿ ಗೌರವ ಸಮ್ಮಾನ, ಕವಿವರ್ಯ ಪಂಡಿತ ಪುಟ್ಟರಾಜ ಗವಾಯಿಗಳ ಗುರುವಂದನಾ ಕಾರ್ಯಕ್ರಮದಲ್ಲಿ ಗೌರವ ಸಮ್ಮಾನ, ೨೦೦೭ರ ಗಣರಾಜ್ಯೋತ್ಸವದಂದು ರಾಜ್ಯಪಾಲ ರಾಮೇಶ್ವರ್ ಠಾಕೂರರಿಂದ ಗೌರವ ಸಮ್ಮಾನ, ಭಾರತ ಪ್ರಜಾಸತ್ತಾತ್ಮಕ ಯುವಜನ ಒಕ್ಕೂಟದ ಯುವಮಿಲನ ಕಾರ್ಯಕ್ರಮದಲ್ಲಿ ಗೌರವ ಸಮ್ಮಾನ, ಇನ್‌ಲ್ಯಾಂಡ್ ಅವಾರ್ಡ್-೨೦೦೫... ಹೀಗೆ ಪಟ್ಟಿ ಮುಂದುವರಿಯುತ್ತದೆ. ಹೀಗೆ ಎಲ್ಲಾ ಪ್ರಶಸ್ತಿ, ಬಿರುದು, ಸಮ್ಮಾನದೊಂದಿಗೆ ಸಿಕ್ಕ ಪೈಸೆ ಪೈಸೆಯನ್ನೂ ಶಾಲಾಭಿವೃದ್ಧಿಗೆ ವಿನಿಯೋಗಿಸಿದ ಮಹಾನುಭಾವ ಈ ಹಾಜಬ್ಬ.

**ಹಾಜಬ್ಬರ ದಿನಚರಿ**

ಪ್ರಭಾತದ ಪ್ರಾರ್ಥನೆಗೆ ಪಕ್ಕದ ಮಸೀದಿಯಿಂದ 'ಅಲ್ಲಾಹು ಅಕ್ಬರ್' ಎಂಬ ಕರೆ ಕೇಳಿದೊಡನೆ ಎದ್ದೇಳುವ ಹಾಜಬ್ಬ ಪ್ರಾತಃಕಾಲದ ಪ್ರಾರ್ಥನೆ ಮುಗಿಸಿ ಮನೆಯಿಂದ ಅಲ್ಪ ದೂರದ ಇಳಿಜಾರು ಪ್ರದೇಶದ ಬಾವಿಯೊಂದರಿಂದ ನೀರನ್ನು ಸೇದಿ ತಂದು ತುಂಬಿಸಿ ಆ ಬಳಿಕ ಮಡದಿಗೆ ಮನೆಕೆಲಸದಲ್ಲಿ ನೆರವಾಗುತ್ತಾರೆ. ಇದಾದ ನಂತರ ತಣ್ಣೀರು ಸ್ನಾನ ಮುಗಿಸಿ ಅಂದು ಮಾಡಬೇಕಾದ ಕೆಲಸಗಳಿಗೆ ಸಂಬಂಧಿಸಿದ ಕಾಗದ ಪತ್ರಗಳನ್ನು ಒಂದು ಪ್ಲಾಸ್ಟಿಕ್ ಚೀಲದಲ್ಲಿ ತುಂಬಿಸುತ್ತಾರೆ. ಬಳಿಕ ಒಂದಿಷ್ಟು ತಂಗಳನ್ನ ಉಂಡು ಒಂದು ಲೋಟ ಕಡಕ್ ಕಪ್ಪು ಚಾ ಕುಡಿದು ಶಾಲೆಯತ್ತ ಧಾವಿಸುತ್ತಾರೆ.

ಶಾಲೆಯ ಅಂಗಳದಲ್ಲಿ ಬಿದ್ದಿರುವ ತರಗೆಲೆಗಳನ್ನು ಹೆಕ್ಕಿ ಅಂಗಳ ಗುಡಿಸುತ್ತಾರೆ. ಬಳಿಕ ಶಾಲೆಯ ಬೀಗ ತೆರೆದು ತರಗತಿಗಳಲ್ಲಿ ಅಸ್ತವ್ಯಸ್ತವಾಗಿರುವ ಬೆಂಚು, ಮೇಜುಗಳನ್ನು ಸರಿಪಡಿಸುತ್ತಾರೆ. ಶೌಚಾಲಯಗಳನ್ನು ತೊಳೆದು ಸ್ವಚ್ಛಗೊಳಿಸುತ್ತಾರೆ. ಕುಡಿಯುವ ನೀರಿನ ಡ್ರಮ್ಮನ್ನು ಶುಚಿಗೊಳಿಸಿ ನೀರು ತುಂಬಿಸಿಟ್ಟು ಸುಮಾರು ಒಂಬತ್ತು ಗಂಟೆಯ ಹೊತ್ತಿಗೆಲ್ಲಾ ಶಾಲೆಯಿಂದ ಸುಮಾರು ಮೂರು ಫರ್ಲಾಂಗ್ ದೂರವಿರುವ ಬಸ್ಸು ತಂಗುದಾಣದಲ್ಲಿ ಮಂಗಳೂರಿಗೆ ಬಸ್ಸು ಹಿಡಿದು ತನ್ನ ಕಸುಬಿಗೆ ತೆರಳುತ್ತಾರೆ. ಮಧ್ಯಾಹ್ನದವರೆಗೆ ತಲೆ ಹೊರೆ ವ್ಯಾಪಾರ ಮಾಡಿ ೮೦ರಿಂದ ೧೩೦ ರೂಪಾಯಿವರೆಗೆ ಸಂಪಾದಿಸುತ್ತಾರೆ. ಆ ಬಳಿಕ ಪರಿಚಯದ ಹೋಟೆಲಿಗೆ ತೆರಳಿ ಸ್ವಲ್ಪ ತಣ್ಣೀರು ಕುಡಿದು ತನ್ನ ಶಾಲೆಯ ಕಾಗದ ಪತ್ರಗಳೊಂದಿಗೆ ಸರಕಾರಿ ಕಛೇರಿಗಳಿಗೋ, ಯಾರಾದರೂ ದಾನಿಗಳ ಬಳಿಗೋ ತೆರಳುತ್ತಾರೆ.

ಹಾಜಬ್ಬ ಸುಡುಬಿಸಿಲಿನಲ್ಲಿ ತಿರುಗಾಡಿ ವ್ಯಾಪಾರ ಮಾಡುತ್ತಾರಾದರೂ ಮಧ್ಯಾಹ್ನದ ಊಟ ಮಾಡುವ ಪರಿಪಾಠವಿಲ್ಲ. ಮಧ್ಯಾಹ್ನದ ಊಟಕ್ಕೆ ತಗಲುವ ದುಡ್ಡನ್ನು ಶಾಲೆಯ ಕೆಲಸಗಳಿಗಾಗಿ ಆಚೀಚೆ ಓಡಾಡಲು ಬಳಸುತ್ತಾರೆ. ಅವರ ದಿನಚರಿಯಲ್ಲಿ ಕನಿಷ್ಠ ೬ ಗಂಟೆಗಳಾದರೂ ಶಾಲೆಗಾಗಿ ಮೀಸಲು. ತನ್ನ ಹೊಟ್ಟೆ ಕಟ್ಟಿ ಸಮಾಜದ ನಾಳಿನ ಒಳಿತಿಗಾಗಿ, ತನ್ನೂರಿನ ಬಡವರ ಮಕ್ಕಳ ನಾಳಿನ ನೆಮ್ಮದಿಗಾಗಿ, ಗೌರವದ ಬದುಕಿಗಾಗಿ ಮಿಡಿಯುವ ಹೃದಯ ಹಾಜಬ್ಬರದು. ನಿಜಕ್ಕೂ ಅವರೋರ್ವ ಸಂತ.

ಹಾಜಬ್ಬರು ನಿರಕ್ಷರಕುಕ್ಷಿಯಾದರೂ ಮನವಿ ಪತ್ರ ಬರೆಸುವುದು, ಸಂಬಂಧಿತ ದಾಖಲೆಗಳನ್ನು ಒದಗಿಸುವುದು, ಇವೆಲ್ಲದರಲ್ಲೂ ಅಪ್ರತಿಮ ಶಿಸ್ತಿದೆ. ಒಬ್ಬ ದಾನಿಯಿಂದ ಶಾಲೆಗೆ ದೇಣಿಗೆ ಸಿಗುತ್ತದೆಯೆಂದು ಖಾತರಿಯಾದರೆ ಮತ್ತೆ ಹಾಜಬ್ಬ ಅವರನ್ನು ಬೆಂಬಿಡುವುದಿಲ್ಲ. ಇತ್ತೀಚೆಗಿನ ಉದಾಹರಣೆ ಹಿಂದೂಸ್ತಾನ್ ಪೆಟ್ರೋಲಿಯಂ ಕಂಪೆನಿ ಲಿಮಿಟೆಡ್‌ನವರು ಸಮಾಜಮುಖೀ ಸಂಸ್ಥೆಗಳಿಗೆ ದೇಣಿಗೆ ನೀಡುತ್ತಾರೆ ಎಂಬ ಸುದ್ದಿ ಯಾರಿಂದಲೋ ಕೇಳಿ ತಿಳಿದುಕೊಂಡ ಹಾಜಬ್ಬ ಅವರ ಕಛೇರಿಗೆ ತನ್ನ ಶಾಲೆಯ ಮತ್ತು ಮಕ್ಕಳ ಭಾವಚಿತ್ರ, ತನ್ನ ಶಾಲೆಯ ಕುರಿತಂತೆ ಪತ್ರಿಕೆಗಳಲ್ಲಿ ಪ್ರಕಟವಾದ ವರದಿಗಳ ಕಟ್ಟಿಂಗ್‌ಗಳು, ತನ್ನ ಕುರಿತಂತೆ ಪ್ರಕಟವಾದ ಲೇಖನ ಇತ್ಯಾದಿಗಳನ್ನೆಲ್ಲಾ ಇಟ್ಟು ಮನವಿ ಸಲ್ಲಿಸಿದರು. ಮೇಲಿಂದ ಮೇಲೆ ಪತ್ರಗಳನ್ನು ಬರೆದು ನೆನಪಿಸಿದರು. ಹಾಜಬ್ಬರ ಶ್ರಮ ವ್ಯರ್ಥವಾಗಲಿಲ್ಲ. ಕಂಪೆನಿಯ ಅಧಿಕಾರಿಗಳು ಶಾಲೆಗೆ ಭೇಟಿ ನೀಡಿದರು. ೧೮ ಲಕ್ಷ ರೂಪಾಯಿ ಮಂಜೂರು ಮಾಡಿದರು. ಹಾಜಬ್ಬರು ಅಭಿಯಂತರರನ್ನು ಕರೆದು ಯೋಜನೆ ರೂಪಿಸಿದರು. ಅವರ ಯೋಜನೆಗೆ ಹೆಚ್ಚುವರಿ ೪ ಲಕ್ಷ ರೂಪಾಯಿಗಳ ಅಗತ್ಯವಿತ್ತು. ಮತ್ತೆ ಕೆಲವು ದಾನಿಗಳನ್ನು ಸಂಪರ್ಕಿಸಿ ನಾಲ್ಕು ಲಕ್ಷ ರೂಪಾಯಿಗಳನ್ನು ಸಂಗ್ರಹಿಸಿದರು. ೨೨ ಲಕ್ಷ ರೂಪಾಯಿ ವೆಚ್ಚದ ಕಟ್ಟಡ ನಿರ್ಮಿಸಿದರು. ಪ್ರಸ್ತುತ ಅವರ ಶಾಲೆಗೆ ಸುಸಜ್ಜಿತ ಕಟ್ಟಡವಿದೆ, ಕಂಪ್ಯೂಟರ್‌ಗಳಿವೆ, ಕೊಳವೆ ಬಾವಿಯಿದೆ, ಆಟದ ಮೈದಾನವಿದೆ, ಶೌಚಾಲಯಗಳಿವೆ, ಸುಂದರ ರಂಗಮಂಟಪವಿದೆ, ಅಚ್ಚುಕಟ್ಟಾದ ಆವರಣ ಗೋಡೆಯಿದೆ. ಹೀಗೆ ಎಲ್ಲವೂ ಇದೆ. ಇದರಲ್ಲಿ ಸರಕಾರದ ಪಾಲು ಬರೇ ೨೫% ಮಾತ್ರ. ಉಳಿದೆಲ್ಲವನ್ನೂ ಹಾಜಬ್ಬ ದಾನಿಗಳಿಂದ ದೇಣಿಗೆ ಪಡೆದೇ ನಿರ್ಮಿಸಿದ್ದು. ಪ್ರಸ್ತುತ ಮಾರುಕಟ್ಟೆ ಮೌಲ್ಯದಲ್ಲಿ ಅವರ ಶಾಲೆಯ ಒಟ್ಟು ಮೌಲ್ಯ ಕನಿಷ್ಠ ಒಂದು ಕೋಟಿ ರೂಪಾಯಿಗಳು...!

ತನ್ನ ಹಳ್ಳಿಗೆ ಶಾಲೆ, ಪ್ರೌಢಶಾಲೆ ತಂದಿದ್ದಾಯಿತು. ಆದರೆ ಹಾಜಬ್ಬರ ಕನಸುಗಳಿಗೆ ಕೊನೆಯೇ ಇಲ್ಲ. ಪದವಿಪೂರ್ವ ಕಾಲೇಜು, ಕೈಗಾರಿಕಾ ತರಬೇತಿ ಕೇಂದ್ರ, ಮಹಿಳಾ ಉದ್ಯೋಗ ತರಬೇತಿ ಕೇಂದ್ರ ಇತ್ಯಾದಿಗಳನ್ನು ತರುವ ಕನಸು ಹಾಜಬ್ಬರದು. ಸದ್ಯ ಹಾಜಬ್ಬರ ಶಾಲೆಗೆ ೧.೧೯½ ಎಕರೆ ಜಮೀನಿದೆ. ಇದರಲ್ಲಿ ಮುಕ್ಕಾಲು ಭಾಗ ಹಾಜಬ್ಬರೇ ದುಡ್ಡು ಹಾಕಿ ಖರೀದಿಸಿರುವಂತಹದ್ದು. ಶಾಲೆ ಪ್ರಾರಂಭವಾದಾಗ ಖರೀದಿಸಿದ ೪೨ ಸೆಂಟ್ಸ್ ಜಮೀನಿಗೆ ೩೦,೦೦೦/- ರೂಪಾಯಿಗಳನ್ನು ಹಾಜಬ್ಬ ತನ್ನ ಜೇಬಿನಿಂದಲೇ ನೀಡಿದ್ದರು. ತನಗೆ 'ರಿಯಲ್ ಹೀರೋ' ಪ್ರಶಸ್ತಿಯೊಂದಿಗೆ ಬಂದ ೫ ಲಕ್ಷ ರೂಪಾಯಿಗಳಿಗೆ ಒಂದೂವರೆ ಲಕ್ಷ ರೂಪಾಯಿ ದಾನಿಗಳಿಂದ ದೇಣಿಗೆ ಪಡೆದು ೫೨ ಸೆಂಟ್ಸ್ ಜಮೀನನ್ನು ಆಟದ ಮೈದಾನಕ್ಕಾಗಿ ಖರೀದಿಸಿದರು. ಹಾಜಬ್ಬರಿಗೆ ಪ್ರಶಸ್ತಿಗಳೊಂದಿಗೆ ಸಿಕ್ಕ ನಗದಿನಿಂದ ಸ್ವಂತಕ್ಕೆ ಜಮೀನು ಖರೀದಿಸಿದ್ದರೆ ಅವರಿಂದು ಅರ್ಧ ಕೋಟಿಗೂ ಮಿಕ್ಕಿದ ಬೆಲೆಯ ಜಮೀನಿನ ಒಡೆಯರಾಗಿರುತ್ತಿದ್ದರು. ಆದರೆ ಈ ಮಹಾನುಭಾವ ಎಲ್ಲವನ್ನೂ ಶಾಲೆಗೆ ಅರ್ಪಣೆ ಮಾಡಿದ್ದಾರೆ. ಸ್ವಂತದ್ದೆಂದು ಇರುವ ಮೂರು ಕೊಠಡಿಗಳ ಪುಟ್ಟ ಕಟ್ಟಡವನ್ನು ಮನೆಯ ಸ್ವರೂಪಕ್ಕೆ ಮಾರ್ಪಡಿಸಿದ್ದು ಅವರ ಅಭಿಮಾನಿಗಳು. ಹಾಜಬ್ಬರ ಬದುಕಿಗೆ ಇಂದಿಗೂ ಕಿತ್ತಳೆಹಣ್ಣಿನ ತಲೆಹೊರೆ ವ್ಯಾಪಾರ ಮತ್ತು ಮಗನ ಕೂಲಿ ಕೆಲಸವೇ ಆಧಾರ. ಇಷ್ಟಾಗಿಯೂ ಶಾಲೆಯ ಮೂಲೆ ಮೂಲೆಗಳನ್ನು ತಡಕಾಡಿದರೂ ಹಾಜಬ್ಬರ ಹೆಸರು ಎಲ್ಲೂ ಕಾಣಸಿಗುವುದಿಲ್ಲ.

ಇಂದು ನಾಡಿನಾದ್ಯಂತ ಹಾಜಬ್ಬರಿಗೆ ಅಪಾರ ಗೌರವವಿದೆ. ಆದರೆ ಹಾಜಬ್ಬ ಕಿಂಚಿತ್ತೂ ಬದಲಾಗಿಲ್ಲ. ಅದೇ ಮುಗ್ಧ ಹಳ್ಳಿಗ, ಅದೇ, ಬಿಳಿ ಲುಂಗಿ, ಬಿಳಿ ಶರ್ಟು, ಕಾಲಿಗೆ ಪ್ಲಾಸ್ಟಿಕ್ ಚಪ್ಪಲಿ, ಕೈಯಲ್ಲೊಂದು ಪ್ಲಾಸ್ಟಿಕ್ ಚೀಲ, ವಿನಯವೇ ಮೈವೆತ್ತ ಶಾಂತಮೂರ್ತಿ. ಹಮ್ಮು ಬಿಮ್ಮುಗಳಿಂದ ಹಾಜಬ್ಬ ಮಾರು ದೂರ. ಹಾಜಬ್ಬರಿಗೆ ಇಂದು ಅಧಿಕಾರಸ್ಥರೊಂದಿಗೆ, ಉದ್ಯಮಿಗಳೊಂದಿಗೆ, ಪತ್ರಕರ್ತರೊಂದಿಗೆ, ಸಾಹಿತಿಗಳೊಂದಿಗೆ ನಿಕಟ ಸಂಪರ್ಕವಿದೆ. ಹಾಜಬ್ಬ ತನಗಿರುವ ಸಂಪರ್ಕಗಳನ್ನು ಎಂದೂ ವೈಯಕ್ತಿಕ ಲಾಭಕ್ಕೆ ಬಳಸಿದವರಲ್ಲ.

ಹಾಜಬ್ಬರಿಗೆ ಯಾವುದೇ 'ಇಸಂ' ಇಲ್ಲ. ಆದರೆ ಎಲ್ಲಾ 'ಇಸಂ'ಗಳವರೂ ಹಾಜಬ್ಬರನ್ನು ಗೌರವಿಸುತ್ತಾರೆ. ಹಾಜಬ್ಬರ 'ಇಸಂ' ಬಡವರ ಮಕ್ಕಳ ಶೈಕ್ಷಣಿಕ ಅಭ್ಯುದಯವೊಂದೇ...


**ಇಸ್ಮತ್ ಪಜೀರ್**
ದೇರಳಕಟ್ಟೆ ಡಯೋಗ್ನೋಸ್ಟಿಕ್ ಸೆಂಟರ್, ಚಾಂದ್ ಕಾಂಪ್ಲೆಕ್ಸ್
ದೇರಳಕಟ್ಟೆ, ಮಂಗಳೂರು - ೫೭೪ ೧೬೦


### [illegible]

ವರುಣನ ಅಕಾಲಿಕ ಅತ್ಯಾಚಾರಕ್ಕೆ
ಈಡಾದ ಇಳಾದೇವಿ,
ವಿಕಲಾಂಗ ಸಂತತಿಗೆ ಜನ್ಮ ನೀಡಿದ್ದನ್ನು
ಸ್ವತಃ ನನಗೂ ಅಲ್ಲಗಳೆಯಲಾಗಲಿಲ್ಲ ;
ಇಲ್ಲಿ ಹುಟ್ಟಿದ ಕ್ಷಣದಿಂದಲೇ
ವಿಕಲಾಂಗನಾದ ನನಗೆ,
ಈಗಲೂ ಈ ಲೋಕದಲ್ಲಿ ತಕ್ಕುದಾದ
ಮದ್ದು ಸಿಗದೇ
ಬರೀ ಮುಗಿಲು ನೋಡುವುದೇ
ಆಗಿ ಹೋಗಿದೆ... !


**ವಿಜಯಕಾಂತ ಪಾಟೀಲ**
ನ್ಯಾಯವಾದಿ, ಕ್ಯಾಸನೂರು, ಹಾನಗಲ್ಲ
ಹಾವೇರಿ – ೫೮೧೧೦೪

ಬಂಡವಾಳಶಾಹಿ ಜಗತ್ತಿನ ಆರ್ಥಿಕ ಬಿಕ್ಕಟ್ಟು ಮುಗಿಯದ ಕತೆಯಾಗಿದೆ. ಅಮೆರಿಕ ಇನ್ನೂ ಆರ್ಥಿಕ ಹಿಂಜರಿಕೆಯಿಂದ ಚೇತರಿಸಿಕೊಂಡಿಲ್ಲ. ಅಷ್ಟರಲ್ಲೇ ಯೂರೋಪಿನ ದೇಶಗಳನ್ನಾವರಿಸಿರುವ ಆರ್ಥಿಕ ಹಿಂಜರಿತ ಅಮೆರಿಕದ ಆರ್ಥಿಕದ ಮೇಲೆ ದುಷ್ಪರಿಣಾಮ ಬೀರುವ ಸಾಧ್ಯತೆ ಇರುವುದರಿಂದ ಅಧ್ಯಕ್ಷ ಒಬಾಮಾ ಆತಂಕಗೊಂಡಿದ್ದಾರೆ. ಯೂರೋಪಿನ ನಾಯಕರು ಪರಿಸ್ಥಿತಿಯ ಗಂಭೀರತೆಯನ್ನು ಅರ್ಥಮಾಡಿಕೊಂಡು ಸೂಕ್ತ ಕ್ರಮಗಳನ್ನು ಕೈಗೊಳ್ಳುವರೆಂಬ ಆಶಯವನ್ನು ವ್ಯಕ್ತಪಡಿಸಿದ್ದಾರೆ. ಅಮೆರಿಕದಲ್ಲಿ ಆರ್ಥಿಕ ಹಿಂಜರಿಕೆಯ ಎಚ್ಚರಿಕೆ ಗಂಟೆ ೨೦೦೨ರಲ್ಲೇ ಬಾರಿಸಿತು. ಆಗ ಆರ್ಥಿಕ ಸಂಕಷ್ಟಕ್ಕೊಳಗಾಗಿದ್ದು ಮಾಹಿತಿ ತಂತ್ರ ಕ್ಷೇತ್ರವಾಗಿತ್ತು. ಆನಂತರದ ವರ್ಷಗಳಲ್ಲಿ ಆರ್ಥಿಕ ಕುಸಿತ ಕಂಡದ್ದು ಮೋಟಾರು ವಾಹನಗಳ ತಯಾರಿಕಾ ಕ್ಷೇತ್ರ ಮತ್ತು ಇತರ ಸರಕು ಉತ್ಪಾದನಾ ವಲಯ. ಅಮೆರಿಕದ ಆರ್ಥಿಕ ಕುಸಿತದ ಪರಿಣಾಮ ಇತರ ಬಂಡವಾಳಶಾಹಿ ದೇಶಗಳನ್ನು ತಟ್ಟಲು ಹೆಚ್ಚು ಕಾಲ ಹಿಡಿಯಲಿಲ್ಲ. ಉತ್ಪಾದನೆಯ ಕುಸಿತದಿಂದಾಗಿ ನಿರುದ್ಯೋಗಿಗಳ ಸಂಖ್ಯೆ ತೀವ್ರವಾಗಿ ಏರತೊಡಗಿತು. ಅಮೆರಿಕದಲ್ಲಿ ಈಗಲೂ ನಿರುದ್ಯೋಗದ ಪ್ರಮಾಣವು ಶೇಕಡ ೮.೬ರ ಆಸುಪಾಸಿನಲ್ಲೇ ಇದೆ. ಆರ್ಥಿಕ ಚೇತರಿಕೆಯ ಲಕ್ಷಣಗಳೇನೂ ಗೋಚರಿಸುತ್ತಿಲ್ಲ.




ಯೂರೋಪಿನಲ್ಲಿ ತೀವ್ರವಾದ ಆರ್ಥಿಕ ಸಂಕಷ್ಟಕ್ಕೊಳಗಾಗಿರುವ ದೇಶ ಗ್ರೀಸ್. ಸಾಲದ ಹೊರೆಯಿಂದ ದಿವಾಳಿಯ ಅಂಚಿನಲ್ಲಿರುವ ಈ ಪುಟ್ಟ ದೇಶದ ಆರ್ಥಿಕ ಸಮಸ್ಯೆಯನ್ನು ನಿವಾರಿಸಲು ಕೈಗೊಂಡ ಮಿತವ್ಯಯದ ಕ್ರಮಗಳಿಂದ ಪ್ರಯೋಜನ ವಾಗಿಲ್ಲ ಇದುವರೆಗೆ. ೨೦೧೦ರಲ್ಲಿ ಗ್ರೀಸನ್ನು ಆರ್ಥಿಕ ದುಸ್ಥಿತಿಯಿಂದ ಬಚಾವು ಮಾಡಲು ಯೂರೋಪಿಯನ್ ಯೂನಿಯನ್ ನಡೆಸಿದ ಪ್ರಯತ್ನ, ಹೊರಿಸಿದ ಕಟ್ಟುನಿಟ್ಟಾದ ಷರತ್ತುಗಳು ಫಲಕಾರಿಯಾಗಿಲ್ಲ. ಗ್ರೀಸ್ ಯೂರೋಪಿಯನ್ ಸೆಂಟ್ರಲ್ ಬ್ಯಾಂಕ್ ಮತ್ತು ಐಎಂಎಫ್‌ಗಳಿಗೆ ನೀಡಬೇಕಾಗಿರುವ ಸಾಲದ ಮೊತ್ತ ಸುಮಾರು ೩೧೦ ಬಿಲಿಯ ಯೂರೋಗಳು. ಇದರಲ್ಲಿ ಶೇ. ೭೫ರಷ್ಟು ಯೂರೋಪಿಯನ್ ಸೆಂಟ್ರಲ್ ಬ್ಯಾಂಕಿನ ಪಾಲು, ಹಾಗೂ ನೆರೆಯ ರಾಷ್ಟ್ರಗಳ ಸರಕಾರಗಳಿಗೆ ಪಾವತಿಸಬೇಕಾದ ಸಾಲ. ಇದರಲ್ಲಿ ಹೆಚ್ಚಿನ ಅಂಶ ಖಾಸಗಿ ಬಂಡವಾಳ ಕ್ಷೇತ್ರಕ್ಕೆ ಸಂಬಂಧಿಸಿದ್ದು, ೨೦೧೦ರ ಈ ಒಪ್ಪಂದದ ನಂತರ ಗ್ರೀಸಿನ ನಿವ್ವಳ ಉತ್ಪಾದನೆಯು ಇನ್ನಷ್ಟು ಕುಸಿತ ಕಂಡಿದೆ. ನಿರುದ್ಯೋಗದ ಪ್ರಮಾಣ ಶೇಕಡ ೨೨ರಷ್ಟಾಗಿದೆ. ಉದ್ಯೋಗ ಅರಸುತ್ತಿರುವ ಇಪ್ಪತ್ತನಾಲ್ಕು ವಯಸ್ಸಿನ ಯುವಕರಲ್ಲಿ ಇಬ್ಬರಲ್ಲಿ ಒಬ್ಬರು ನಿರುದ್ಯೋಗಿ. ಸರಕಾರ ಕೈಗೊಂಡಿರುವ ಕಠಿಣ ಕ್ರಮಗಳಿಂದಾಗಿ ಜನಜೀವನ ದುಸ್ತರವಾಗಿದೆ. ವೇತನಗಳು ಮತ್ತು ಪೆನ್ಷನ್‌ಗಳ ಕಡಿತ, ಆರೋಗ್ಯಕ್ಷೇತ್ರದಲ್ಲಿ ವಿನಿಯೋಗದ ಕಡಿತ, ಇತರ ಅಭಿವೃದ್ಧಿ ಕಾರ್ಯಗಳಿಗೆ ವಿನಿಯೋಗದ ಪ್ರಮಾಣದ ಕುಸಿತ ಜನಜೀವನವನ್ನು ಅಸ್ತವ್ಯಸ್ತಗೊಳಿಸಿದೆ. ಜೀವನಾವಶ್ಯಕವಾದ ವಸ್ತುಗಳ ಆಮದನ್ನು ನಿರ್ಬಂಧಿಸಿರುವುದರಿಂದ ಜನ ಪರದಾಡುವಂತಾಗಿದೆ. ಗ್ರೀಸಿನ ಆರ್ಥಿಕ ಸ್ಥಿತಿಯನ್ನು ಬಚಾವು ಮಾಡಲು ಈವರೆಗೆ ಕೈಗೊಂಡಿರುವ ಕ್ರಮಗಳು

# ಆರ್ಥಿಕ ದುಸ್ಥಿತಿ ಎದುರಿಸುತ್ತಿರುವ ಯೂರೋಪು



ನಿರುದ್ಯೋಗದ ಪ್ರಮಾಣ ಶೇಕಡ 22ರಷ್ಟಾಗಿದೆ. ಉದ್ಯೋಗ ಅರಸುತ್ತಿರುವ ಇಪ್ಪತ್ತನಾಲ್ಕು ವಯಸ್ಸಿನ ಯುವಕರಲ್ಲಿ ಇಬ್ಬರಲ್ಲಿ ಒಬ್ಬರು ನಿರುದ್ಯೋಗಿ. ಸರಕಾರ ಕೈಗೊಂಡಿರುವ ಕಠಿಣ ಕ್ರಮಗಳಿಂದಾಗಿ ಜನಜೀವನ ದುಸ್ತರವಾಗಿದೆ. ವೇತನಗಳು ಮತ್ತು ಪೆನ್ಷನ್‌ಗಳ ಕಡಿತ, ಆರೋಗ್ಯಕ್ಷೇತ್ರದಲ್ಲಿ ವಿನಿಯೋಗದ ಕಡಿತ, ಇತರ ಅಭಿವೃದ್ಧಿ ಕಾರ್ಯಗಳಿಗೆ ವಿನಿಯೋಗದ ಪ್ರಮಾಣದ ಕುಸಿತ ಜನಜೀವನವನ್ನು ಅಸ್ತವ್ಯಸ್ತಗೊಳಿಸಿದೆ.

ವಿಫಲಗೊಂಡಿದ್ದು, ಯೂರೋಪಿನ ದೇಶಗಳಿಗೆ ತಲೆನೋವಾಗಿದೆ. ಯೂರೋಪಿಯನ್ ಒಕ್ಕೂಟ ಮತ್ತು ಯೂರೋ ನಾಣ್ಯದ ಭವಿಷ್ಯವೇ ಅತಂತ್ರಕ್ಕೆ ಸಿಲುಕಿದೆ. ಈ ಮಧ್ಯೆ ಗ್ರೀಸ್ ಯೂರೋ ವಲಯದಿಂದ ಹೊರಬರಲು ಚಿಂತಿಸುತ್ತಿದೆ. ಅಮೆರಿಕದ ಅಧ್ಯಕ್ಷ ಬರಾಕ್ ಒಬಾಮಾ ಈ ಕ್ರಮದಿಂದ ಗ್ರೀಸಿನ ಜನರ ಸ್ಥಿತಿ ಮತ್ತಷ್ಟು ಹದಗೆಡುವ ಸಾಧ್ಯತೆ ಇದೆ ಎಂದು ಎಚ್ಚರಿಸಿದ್ದಾರೆ.

ಗ್ರೀಸಿನ ನಂತರ ಈಗ ಸ್ಪೇನಿನ ಸರದಿ. ಆರ್ಥಿಕ ಸುಧಾರಣೆಗಾಗಿ ಸರಕಾರ ಕೈಗೊಂಡ ಕ್ರಮಗಳು ಹಿಮ್ಮೆಟ್ಟಿವೆ. ಗ್ರೀಸಿನ ಬ್ಯಾಂಕುಗಳಂತೆ ಸ್ಪೇನಿನ ಬ್ಯಾಂಕುಗಳು ದಿವಾಳಿಯಾಗತೊಡಗಿವೆ. ಸ್ಪೇನಿನ ಸಾಲದ ವಿಶ್ವಾಸಾರ್ಹತೆ ಕುಸಿದಿದೆ. ಸೆಂಟ್ರಲ್ ಬ್ಯಾಂಕನ್ನು ದಿವಾಳಿಯಿಂದ ಕಾಪಾಡಲು ಯೂರೋಪಿಯನ್ ಯೂನಿಯನ್ನಿನ ಸೆಂಟ್ರಲ್ ಬ್ಯಾಂಕ್ ಈಗ ಹೊಸ ಸಾಲ ನೀಡಿದೆ. ಸ್ಪೇನಿನ ಬ್ಯಾಂಕುಗಳ ಸಾಲದ ಹೊರೆ ಸುಮಾರು ೬೦ ಬಿಲಿಯ ಯೂರೋಗಳಷ್ಟಾಗಿವೆ. ನಿರುದ್ಯೋಗದ ಪ್ರಮಾಣವೂ ಹೆಚ್ಚಿದೆ. ಸ್ಪೇನ್ ಸರಕಾರ ಕೈಗೊಂಡಿರುವ ಕ್ರಮಗಳು ಫಲಕಾರಿಯಾಗುವುದು ಅನುಮಾನ. ಇನ್ನು ಮುಂದಿನ ಸರದಿ ಯಾವ ದೇಶದ್ದು ಎಂಬ ಪರಿಸ್ಥಿತಿ ಇಂದು ಯೂರೋಪಿಯನ್ ಯೂನಿಯನ್‌ನಲ್ಲಿ ತಲೆದೋರಿದೆ. ೨೭ ಸದಸ್ಯ ರಾಷ್ಟ್ರಗಳನ್ನು ಹೊಂದಿರುವ ಯೂರೋಪಿಯನ್ ಒಕ್ಕೂಟದಲ್ಲಿ ತಕ್ಕಮಟ್ಟಿಗೆ ಆರ್ಥಿಕ ಸ್ಥಿತಿ ಉತ್ತಮವಾಗಿರುವುದು ಜರ್ಮನಿಯಲ್ಲಿ ಮಾತ್ರ. ಕೈಗಾರಿಕೆಯಲ್ಲಿ ಮುಂದುವರಿದಿರುವ ಈ ದೇಶದಲ್ಲಿ ಕೂಡ ನಿರುದ್ಯೋಗದ ಸಮಸ್ಯೆ ಕಾಡುತ್ತಿದೆ. ಗ್ರೀಸ್ ಮತ್ತು ಸ್ಪೇನಿನ ಬ್ಯಾಂಕುಗಳ ಸಾಲ ಜರ್ಮನಿಯ ಬ್ಯಾಂಕಿಂಗ್ ವ್ಯವಸ್ಥೆಯನ್ನು ಕಾಡುತ್ತಿದೆ. ಸರಣಿ ಪ್ರಕ್ರಿಯೆಯಂತೆ ಈಗ ಒಂದೊಂದಾಗಿ ಯೂರೋಪಿನ ಎಲ್ಲ ದೇಶಗಳಿಗೂ ಬಿಸಿ ತಟ್ಟಿದೆ. ಇಟಲಿ ಪೋರ್ಚುಗಲ್ ಮತ್ತಿತರ ದೇಶಗಳ ಬ್ಯಾಂಕುಗಳೂ ಮುಗ್ಗಟ್ಟಿನಲ್ಲಿವೆ.

ಎರಡನೇ ಮಹಾಯುದ್ಧದ ನಂತರ ಕಳೆದ ಶತಮಾನದ ಐವತ್ತರ ದಶಕದಲ್ಲಿ ಯೂರೋಪಿನ ಬಂಡವಾಳಶಾಹಿ ದೇಶಗಳ ಒಕ್ಕೂಟದ ಪರಿಕಲ್ಪನೆ ಮೂಡಿಬಂದಿತು. ಅಂದಿನ ಸೋವಿಯೆತ್ ಒಕ್ಕೂಟ ಮತ್ತು ಪೂರ್ವ ಯೂರೋಪಿನ ಸಮುದಾಯದ ದೇಶಗಳನ್ನು ಎದುರಿಸುವುದು, ಪ್ರಬಲ ರಾಷ್ಟ್ರವಾಗಿದ್ದ ಅಮೆರಿಕದಿಂದ ಅನುಕೂಲವಾದ ಪ್ರಯೋಜನವನ್ನು ಒಕ್ಕೂಟದ ಮೂಲಕ ಪಡೆಯುವುದು ಉದ್ದೇಶವಾಗಿತ್ತು. ಯೂರೋಪಿನ ದೇಶಗಳ ಈ ಪ್ರಯತ್ನ ಕೈಗೂಡಲು ಸಾಕಷ್ಟು ವರ್ಷಗಳೇ ಹಿಡಿದುವು. ೧೯೭೩ರಲ್ಲಿ ೨೭ ಸದಸ್ಯ ರಾಷ್ಟ್ರಗಳನ್ನು ಹೊಂದಿದ ಯೂರೋಪಿಯನ್ ಯೂನಿಯನ್ ಅಸ್ತಿತ್ವಕ್ಕೆ ಬಂದಿತು. ೧೯೭೯ರಲ್ಲಿ ಪ್ರಾತಿನಿಧಿಕವಾಗಿ ಯೂರೋಪಿಯನ್ ಪಾರ್ಲಿಮೆಂಟ್ ಅಸ್ತಿತ್ವಕ್ಕೆ ಬಂದಿತು. ಗ್ರೀಸ್ ಈ ಒಕ್ಕೂಟವನ್ನು ಸೇರಿದ್ದು ೧೯೮೧ರಲ್ಲಿ. ಬ್ರಿಟನ್ ಮೊದಲಿನಿಂದಲೂ ಯೂರೋಪಿಯನ್ ಒಕ್ಕೂಟದಲ್ಲಿ ಸೇರಿದ್ದರೂ ಹೊರಗಿರುವ ದೇಶವೆಂದೇ ಹೇಳಬೇಕು. ಆರ್ಥಿಕವಾಗಿ ಬ್ರಿಟನ್ ಯೂರೋ ಜೋನ್‌ನ ಹೊರಗೇ ಉಳಿದಿದೆ. ಹಾಗೆಂದ ಮಾತ್ರಕ್ಕೆ ಅದರ ಅರ್ಥಿಕ ಸ್ಥಿತಿ ಉತ್ತಮವಾಗಿದೆ ಎಂದೇನಲ್ಲ. ಆರ್ಥಿಕ ಹಿಂಜರಿತದಿಂದ ಅದು ಕೂಡ ಇನ್ನೂ ಚೇತರಿಸಿಕೊಂಡಿಲ್ಲ. ೧೯೯೯ರಲ್ಲಿ ಯೂರೋ ಜೋನ್‌ಗೆ ಸೇರಿದ ದೇಶಗಳು ಒಂದೇ ಕರೆನ್ಸಿಯನ್ನು ಜಾರಿಗೆ ತರುವ ಯೋಜನೆಯನ್ನು ಕೈಗೊಂಡಾಗ, ಅದಕ್ಕೆ ಸಮ್ಮತಿಸಿದ್ದು ೧೭ ರಾಷ್ಟ್ರಗಳು ಮಾತ್ರ. ಬ್ರಿಟನ್ ಈ ವ್ಯವಸ್ಥೆಯ ಹೊರಗೆ ಉಳಿಯಿತು. ಯೂರೋ ಎಂಬ ಕರೆನ್ಸಿ ಚಾಲ್ತಿಗೆ ಬಂದ ನಂತರವೂ ಕೂಡ ಸಂಬಂಧಪಟ್ಟ ದೇಶಗಳ ನಾಣ್ಯಗಳು ಕೆಲವರ್ಷಗಳು ಚಲಾವಣೆಯಲ್ಲಿದ್ದುವು. ಇಂದು ಯೂರೋ ಪ್ರಪಂಚದ ಪ್ರಮುಖ ಕರೆನ್ಸಿಯಲ್ಲಿ ಒಂದಾಗಿದ್ದರೂ ಸುಸ್ಥಿರತೆಯನ್ನು ಕಂಡುಕೊಂಡಿಲ್ಲ. ಈಗ ತಲೆದೋರಿರುವ ಆರ್ಥಿಕ ಹಿಂಜರಿತ ಅದರ ಭವಿಷ್ಯವನ್ನು ಆತಂಕಕ್ಕೀಡುಮಾಡಿದೆ. ಬಂಡವಾಳಶಾಹಿ ಜಗತ್ತಿನ ಈ ಆರ್ಥಿಕ ಸಂಕಷ್ಟಗಳು ಭಾರತದ ಮೇಲೂ ಪರಿಣಾಮ ಬೀರದಿರದು. ಈಗಾಗಲೇ ಆರ್ಥಿಕಾಭಿವೃದ್ಧಿಯ ಪ್ರಮಾಣ ನಿರೀಕ್ಷಿತ ಮಟ್ಟಕ್ಕಿಂತ ಕಡಿಮೆಯಾಗಿದ್ದು, ಅದು ಶೇ. ೫.೩ಕ್ಕೆ ಇಳಿಯುವುದೆಂದು ಅಂದಾಜು ಮಾಡಲಾಗಿದೆ. ರೂಪಾಯಿಯ ಮೌಲ್ಯದ ಕುಸಿತ ವಿದೇಶಿ ವಿನಿಮಯದ ಸಂಚಯನದ ಮೇಲೆ ಪರಿಣಾಮ ಬೀರಿದೆ.

ಈ ಮಧ್ಯೆ ಯೂರೋಪಿನಲ್ಲಿ ರಾಜಕೀಯ ಬದಲಾಗತೊಡಗಿದೆ. ಫ್ರಾನ್ಸ್‌ನಲ್ಲಿ ಈಚೆಗೆ ನಡೆದ ಚುನಾವಣೆಗಳಲ್ಲಿ ಅಧಿಕಾರದಲ್ಲಿದ್ದ ನಿಕೊಲಾಸ್ ಸಾರ್ಕೋಜಿ ಪರಾಜಯಗೊಂಡಿದ್ದಾರೆ. ೧೯೮೮ರ ನಂತರ ಮೊದಲ ಬಾರಿಗೆ ಎಡಪಂಥೀಯ ಅಭ್ಯರ್ಥಿ ಸೋಷಲಿಸ್ಟ್ ಪಾರ್ಟಿಯ ಫ್ರಾಂಕೊಯಿಸ್ ಹೆಲ್ಲಾಂಡೆ ಅಧಿಕಾರದ ಗದ್ದುಗೆಗೇರಿದ್ದಾರೆ. ಫ್ರಾನ್ಸ್‌ನ ಜನ ಬಲಪಂಥೀಯರನ್ನು ತಿರಸ್ಕರಿಸಿದ್ದಾರೆ. ಗ್ರೀಸಿನ ಚುನಾವಣೆಗಳಲ್ಲಿ ಕೂಡ ಅಧಿಕಾರಸ್ಥರು ಕೆಳಗಿಳಿದಿದ್ದಾರೆ. ಆದರೆ ಮತ್ತೆ ನಡೆಯುತ್ತಿರುವ ಚುನಾವಣೆಗಳಲ್ಲಿ ಏನಾಗುವುದೋ ಕಾದು ನೋಡಬೇಕಿದೆ. ಇಂಗ್ಲೆಂಡಿನಲ್ಲಿ ಲೇಬರ್ ಪಕ್ಷವನ್ನು ಪದಚ್ಯುತಗೊಳಿಸಿ ಕನ್ಸರ್‌ವೇಟಿವ್ ಪಕ್ಷ ಅಧಿಕಾರಕ್ಕೇರಿದೆ. ಆದರೆ ಈ ಪಕ್ಷ ಕೈಗೊಂಡಿರುವ ಕಠಿಣವಾದ ಮಿತವ್ಯಯ ಕ್ರಮಗಳು, ಆರ್ಥಿಕ ಸುಧಾರಣೆಗಳು ಯಾವ ರೀತಿಯಲ್ಲೂ ಫಲಕಾರಿಯಾಗಿಲ್ಲ. ಇತ್ತೀಚೆಗೆ ಜರುಗಿದ ಉಪ ಚುನಾವಣೆಗಳಲ್ಲಿ ಲೇಬರ್ ಪಕ್ಷ ಮೇಲುಗೈ ಪಡೆದಿದೆ. ಯೂರೋಪಿನಲ್ಲಿ ಫ್ರೆಂಚ್ ಚುನಾವಣೆಗಳು ಬದಲಾವಣೆಗೆ ಸೂಚಕವಾಗಿದೆ. ಜನ ಆಡಳಿತಾರೂಢ ಪಕ್ಷಗಳು ಕೈಗೊಂಡಿರುವ ಆರ್ಥಿಕ ಕ್ರಮಗಳಿಂದ ಬೇಸತ್ತಿದ್ದಾರೆ. ಒಟ್ಟಿನಲ್ಲಿ ಬಂಡವಾಳಶಾಹಿ ಜಗತ್ತಿನ ಆರ್ಥಿಕ ಪರಿಸ್ಥಿತಿ ಸದ್ಯಕ್ಕೆ ಸುಧಾರಿಸುವ ಸೂಚನೆಗಳೇನೂ ಕಾಣುತ್ತಿಲ್ಲ.


**ಸೀಯಾರ್ಕೆ**

'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ,
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫


## ಸುದ್ದಿ ಚಿತ್ರ




*೨೭-೫-೨೦೧೨ರಂದು ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತಿನ ಕೃಷ್ಣರಾಜ ಪರಿಷನ್ಮಂದಿರ ಸಭಾಂಗಣದಲ್ಲಿ ನವಕರ್ನಾಟಕ ಪ್ರಕಾಶನದ ಮೂರು ಪುಸ್ತಕಗಳು ಲೋಕಾರ್ಪಣೆಗೊಂಡುವು. ಹಳ್ಳಿಹಾದಿ (ಜಿ.ಎಸ್.ಜಯದೇವ) ನಡೆದಷ್ಟೂ ನಾಡು (ಡಾ|| ರಹಮತ್ ತರೀಕೆರೆ) ಸಂಕಲ್ಪ (ಪ್ರೀತೀಶ್) ಈ ಮೂರು ಕೃತಿಗಳನ್ನು ಅನಾವರಣಗೊಳಿಸಿ ಸಭೆಯ ಅಧ್ಯಕ್ಷತೆಯನ್ನು ವಹಿಸಿದವರು ಪ್ರೊ|| ಎಚ್.ಎಸ್. ರಾಘವೇಂದ್ರ ರಾವ್. ಡಾ|| ಎನ್. ಗಾಯತ್ರಿ ಕೃತಿಗಳ ಪರಿಚಯ ಮಾಡಿಕೊಟ್ಟರು. ಕೃತಿಗಳ ಲೇಖಕರು ವೇದಿಕೆಯಲ್ಲಿ ಉಪಸ್ಥಿತರಿದ್ದು ತಮ್ಮ ಅನುಭವವನ್ನು ಹಂಚಿಕೊಂಡರು.*

*ಚಿತ್ರದಲ್ಲಿ ಕ್ರಮವಾಗಿ ಶ್ರೀ ಆರ್. ಎಸ್. ರಾಜಾರಾಮ್, ಶ್ರೀ ಪ್ರೀತೀಶ್, ಡಾ|| ಎನ್. ಗಾಯತ್ರಿ, ಪ್ರೊ|| ಎಚ್. ಎಸ್. ರಾಘವೇಂದ್ರ ರಾವ್, ಡಾ|| ರಹಮತ್ ತರೀಕೆರೆ, ಶ್ರೀ ಜಿ. ಎಸ್. ಜಯದೇವ.*

